# ಕನ್ನಡದಲ್ಲಿ ಮಕ್ಕಳ ಕಾವ್ಯ ಪರಿಕಲ್ಪನೆ ಮತ್ತು ವಿಶ್ಲೇಷಣೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.)
ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
ಬಸವೇಶ .ಎ

ಮಾರ್ಗದರ್ಶಕರು
ಡಾ. ಸುಚೇತಾ ನವರತ್ನ
ಸಹಾಯಕ ಪ್ರಾಧ್ಯಾಪಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ



ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೬

# ಕನ್ನಡದಲ್ಲಿ ಮಕ್ಕಳ ಕಾವ್ಯ ಪರಿಕಲ್ಪನೆ ಮತ್ತು ವಿಶ್ಲೇಷಣೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.)
ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
**ಬಸವೇಶ .ಎ**



ಮಾರ್ಗದರ್ಶಕರು
**ಡಾ. ಸುಚೇತಾ ನವರತ್ನ**
ಸಹಾಯಕ ಪ್ರಾಧ್ಯಾಪಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ



ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೬

# ಮಾರ್ಗದರ್ಶಕರ ದೃಢೀಕರಣ ಪತ್ರ

ಬಸವೇಶ .ಎ ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಕನ್ನಡದಲ್ಲಿ ಮಕ್ಕಳ ಕಾವ್ಯ ಪರಿಕಲ್ಪನೆ ಮತ್ತು ವಿಶ್ಲೇಷಣೆ** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**(ಡಾ. ಸುಚೇತಾ ನವರತ್ನ)**
ಸಹಾಯಕ ಪ್ರಾಧ್ಯಾಪಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ–೫೮೩ ೨೭೬**

**ದಿನಾಂಕ** : 28-05-2016
**ಸ್ಥಳ** : ವಿದ್ಯಾರಣ್ಯ

# ಸಂಶೋಧಕರ ಘೋಷಣಾ ಪತ್ರ

**ಕನ್ನಡದಲ್ಲಿ ಮಕ್ಕಳ ಕಾವ್ಯ ಪರಿಕಲ್ಪನೆ ಮತ್ತು ವಿಶ್ಲೇಷಣೆ** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗದ ಸಹಾಯಕ ಪ್ರಾಧ್ಯಾಪಕರಾದ **ಡಾ. ಸುಚೇತಾ ನವರತ್ನ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

A. Basavesha

**(ಬಸವೇಶ .ಎ)**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ–೫೮೩ ೨೭೬**

**ದಿನಾಂಕ** : 28-05-2016
**ಸ್ಥಳ** : **ವಿದ್ಯಾರಣ್ಯ**

# ಪರಿವಿಡಿ

ಅಧ್ಯಾಯ : ಒಂದು

# ಪ್ರಸ್ತಾವನೆ

## ಅಧ್ಯಾಯ : ಒಂದು

# ಪ್ರಸ್ತಾವನೆ

**ಸಾ**ಮಾಜಿಕ ಪರಿಸರದಲ್ಲಿ ಮಕ್ಕಳ ಚಿಂತನೆಗಳ ಬಗ್ಗೆ ನಿರ್ಲಕ್ಷ ತಾಳಿದಂತೆಯೇ ಸಾಹಿತ್ಯಿಕವಾಗಿ ಮಕ್ಕಳ ಸಾಹಿತ್ಯದ ಕುರಿತಂತೆ ನಿರ್ಲಕ್ಷ ತಾಳಿರುವುದು ದುರಂತವೇ ಸರಿ. ಯಾವ ರಾಷ್ಟ್ರ ತನ್ನ ಭವಿಷ್ಯದಲ್ಲಿ ಮಕ್ಕಳನ್ನು, ಯಾವ ಭಾಷೆ ತನ್ನ ಅಸ್ತಿತ್ವದಲ್ಲಿ ಮಕ್ಕಳ ಸಾಹಿತ್ಯವನ್ನು ಕಡೆಗಣಿಸಲ್ಪಡುತ್ತದೆಯೋ ಅಂದಿನಿಂದಲೇ ಆ ದೇಶದ ಹಾಗೂ ಆ ಭಾಷೆಯ ಅಧಃಪತನವೂ ಶುರುವಾಗುತ್ತದೆ. ಕಾರಣ ಯಾವುದೇ ರಾಷ್ಟ್ರದ, ಯಾವುದೇ ಭಾಷೆಯ ಮುಂದಿನ ವಾರಸುದಾರಿಕೆ ಎಂಬುದು ಸಂಬಂಧಪಟ್ಟ ರಾಷ್ಟ್ರದ ಮಕ್ಕಳು ಹಾಗೂ ಸಂಬಂಧಪಟ್ಟ ಭಾಷೆಯ ಮಕ್ಕಳ ಸಾಹಿತ್ಯದ್ದಾಗಿರುತ್ತದೆ. ಅಂದರೆ ದೇಶದ ಭವಿಷ್ಯದಲ್ಲಿ ಮಕ್ಕಳು ವಹಿಸುವ ಪಾತ್ರ ಹಾಗೆಯೇ ಭಾಷೆಯ ಅಸ್ತಿತ್ವದಲ್ಲಿ ಮಕ್ಕಳ ಸಾಹಿತ್ಯ ವಹಿಸುವ ಪಾತ್ರ ಅಷ್ಟು ನಿರ್ಣಾಯಕವೂ, ಮಹತ್ತರವೂ ಆಗಿರುತ್ತದೆ. ಹಾಗಾಗಿಯೇ ಜವಾಹರಲಾಲ್‌ನೆಹರು ಅವರು "ಈ ದೇಶದ ಭವಿಷ್ಯವನ್ನು ಪಂಚಾಂಗಗಳಲ್ಲಿ ಅಲ್ಲ, ದೇಶದ ಮಕ್ಕಳ ಕಣ್ಣ ಕಿರಣದಲ್ಲಿ ಕಾಣಬೇಕು" ಎಂಬ ಅರ್ಥಪೂರ್ಣ ಮಾತುಗಳನ್ನಾಡಿರುವುದು.

ಮನುಷ್ಯನಿಂದು ತಾತ್ವಿಕವಾಗಿ ಮಗುವಾಗುವ ತುರ್ತು ಈ ಹೊತ್ತಿನ ಅಗತ್ಯತೆಗಳಲ್ಲಿ ಒಂದು. ಮನುಷ್ಯ ತನ್ನ ಮನೋವಿಕಾರ, ಮನೋವಿಕಲ್ಪನೆಗಳಿಂದ ಏನೆಲ್ಲಾ ಪಾಪಕೃತ್ಯಗಳನ್ನೆಸಗಿ ಇಡೀ ಸಮಾಜಕ್ಕೆ, ತಮ್ಮ ಬದುಕಿಗೆ ಕಳಂಕವನ್ನು ತಂದುಕೊಂಡಿರುವುದರ ಹಿಂದೆ ನೈತಿಕತೆಯನ್ನು ಮರೆತು ಹೋದುದರ ಹೆಜ್ಜೆ ಗುರುತೊಂದು ಪತ್ತೆಯಾಗುತ್ತಿದೆ. ಯಾವ ಮಗು ನೈತಿಕತೆಯಿಂದ ದೂರ ಉಳಿಯುತ್ತದೆಯೋ ಅಂಥ ಮಗು ಅನೈತಿಕ ಮಾರ್ಗವನ್ನೇ ಹಿಡಿದು ಸಮಾಜಬಾಹಿರ ಚಟುವಟಿಕೆಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತದೆ. ಆ ಮೂಲಕ ಸಮಾಜಕ್ಕೆ ಕಂಟಕವಾಗಿ, ನುಂಗಲಾರದ ತುತ್ತಾಗಿ ಪರಿಣಮಿಸುತ್ತದೆ.

ಹಾಗಾಗಿ ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಹೇಳುವುದಾದರೆ ನಾವು ಇಂದು ಮಕ್ಕಳ ಸಾಹಿತ್ಯವನ್ನು ಗಂಭೀರವಾಗಿಯೇ ಪರಿಗಣಿಸಬೇಕಾಗಿದೆ. ಕಾರಣ ಮಕ್ಕಳ ಸಾಹಿತ್ಯಕ್ಕೆ ಮಕ್ಕಳನ್ನೆಲ್ಲ

ಒಂದೊಂದು ಮಾದರಿ ವ್ಯಕ್ತಿತ್ವಗಳನ್ನಾಗಿ ರೂಪಿಸಬೇಕಾದ ಬಹಳ ದೊಡ್ಡ ನೈತಿಕ ಜವಾಬ್ದಾರಿಯೊಂದು ಇದ್ದೇ ಇರುತ್ತದೆ. ಈ ಹಿನ್ನೆಲೆಯಲ್ಲಿಯೇ ಮಕ್ಕಳ ಸಾಹಿತ್ಯ ಕ್ಷೇತ್ರವನ್ನು ಅದರಲ್ಲೂ ವಿಶೇಷವಾಗಿ ಮಕ್ಕಳ ಕಾವ್ಯ ಪ್ರಕಾರವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

### ೧.೧. ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ವೈಧಾನಿಕತೆ

ಮಕ್ಕಳ ಕಾವ್ಯ ಎಂದರೆ ಅದು ಕೇವಲ ಮಕ್ಕಳಿಗಾಗಿ ರಚಿತವಾದ ಸಾಹಿತ್ಯವೆಂಬುದು ಬಹುಜನರ ಅಭಿಮತ. ಈ ಅಂಶ ಸತ್ಯವೇ ಆಗಿದ್ದು ಇದರಾಚೆಗೆ ಮಕ್ಕಳ ಸಾಹಿತ್ಯ ಹಿರಿಯರಿಗೂ ಅನ್ವಯಿಸಬಹುದಾದ ಕೆಲ ಚಿಂತನೆಗಳನ್ನು ಅಡಕಗೊಳಿಸಿಕೊಂಡಿದೆ ಎಂಬುದನ್ನು ಸಾಕ್ಷೀಕರಿಸುವುದು ಈ ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ.

ಮಕ್ಕಳ ಕಾವ್ಯವು ಮಕ್ಕಳಿಗೆ ಕೇವಲ ಮನೋರಂಜನೆಯನ್ನಷ್ಟೇ ಒದಗಿಸದೇ ಅದರಾಚೆ ಅದು ಮಕ್ಕಳ ವ್ಯಕ್ತಿತ್ವ ವಿಕಸನಕ್ಕೆ ಹೇಗೆ ಪೂರಕವಾಗಬಲ್ಲುದು ಎಂಬ ಅಂಶವನ್ನು ಕಂಡುಕೊಳ್ಳುವುದು ಸಹ ಈ ಅಧ್ಯಯನದ ಉದ್ದೇಶವೇ ಆಗಿದೆ.

ಮಕ್ಕಳ ಕಾವ್ಯವನ್ನು ಒಳಗೊಂಡಂತೆ ಮಕ್ಕಳ ಕ್ಷೇತ್ರ ಇಂದು ಒಂದು ನಿರ್ಲಕ್ಷಿತ ಕ್ಷೇತ್ರವೆಂದು ಭಾವಿಸಲಾಗಿದ್ದು, ಈ ಹಿನ್ನೆಲೆಯಲ್ಲಿ ಸಾಹಿತ್ಯ ಚರಿತ್ರೆಯ ಪುಟಗಳಲ್ಲಿ ಇದಕ್ಕೆ ನ್ಯಾಯ ಒದಗಿಸಲಾಗಿರುವುದಿಲ್ಲ. ಹಾಗಾಗಿ ಈ ಹೊತ್ತು ಮಕ್ಕಳ ಸಾಹಿತ್ಯದ ಪ್ರಸ್ತುತತೆ, ಮಕ್ಕಳ ಸಾಹಿತ್ಯ ಕೊರತೆ ಮತ್ತು ಪ್ರೋತ್ಸಾಹದ ಅಗತ್ಯತೆ, ಸಾಹಿತ್ಯ ಚರಿತ್ರೆಯಲ್ಲಿ ಮಕ್ಕಳ ಸಾಹಿತ್ಯಕ್ಕೊಂದು ನೆಲೆ-ಬೆಲೆಯನ್ನು ನೀಡಬೇಕೆಂಬ ಒತ್ತಾಸೆಯ, ಚಿಂತನೆಯ ಹಿನ್ನೆಲೆಯು ಈ ಅಧ್ಯಯನದ ಮತ್ತೊಂದು ಉದ್ದೇಶವಾಗಿದೆ.

**ವ್ಯಾಪ್ತಿ**

ಮೌಖಿಕ ಪರಂಪರೆಯ ಮಕ್ಕಳ ಕಾವ್ಯಗಳನ್ನೊಳಗೊಂಡಂತೆ ಆಧುನಿಕ ಕನ್ನಡ ಮಕ್ಕಳ ಸಾಹಿತ್ಯದ ಪಿತಾಮಹ ಎಂದೇ ಕರೆಯುವ ಪಂಜೆ ಮಂಗೇಶರಾಯರಿಂದ ಹಿಡಿದು ಎಸ್.ಜಿ. ನರಸಿಂಹಾಚಾರ್ಯ, ಜಿ.ಪಿ. ರಾಜರತ್ನಂ, ಕುವೆಂಪು, ಸಿದ್ಧಯ್ಯ ಪುರಾಣಿಕ(ಆನಂದ ಕಂದ), ಕಾರಂತ, ಪಳಕಳ ಸೀತಾರಾಮಭಟ್ಟರು, ದಿನಕರ ದೇಸಾಯಿ, ಸಿಸು ಸಂಗಮೇಶ, ಎಚ್.ಎಸ್. ವೆಂಕಟೇಶಮೂರ್ತಿ, ಕಂಚ್ಯಾಣಿ ಶರಣಪ್ಪ, ಟಿ.ಎಸ್. ನಾಗರಾಜ ಶೆಟ್ಟಿ ಇವರುಗಳನ್ನು ಪ್ರಾತಿನಿಧಿಕವಾಗಿಟ್ಟುಕೊಂಡು ಆಧುನಿಕ ಕನ್ನಡ ಮಕ್ಕಳ ಕಾವ್ಯದ ಕುರಿತು ಅಧ್ಯಯನದ ಮಾಡುವುದು ಅಧ್ಯಯನದ ವ್ಯಾಪ್ತಿಯಾಗಿದೆ. ಅಧ್ಯಯನಕ್ಕೆ ಪೂರಕವಾಗಿ ಮಕ್ಕಳಕಾವ್ಯ ಕ್ಷೇತ್ರದಲ್ಲಿ ದುಡಿದ ಕವಿಗಳ ಕಾವ್ಯಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಸ್ವರೂಪ**

ಕನ್ನಡದಲ್ಲಿ ಮಕ್ಕಳಕಾವ್ಯ ಪರಿಕಲ್ಪನೆ ಮತ್ತು ವಿಶ್ಲೇಷಣೆ ಎಂಬ ಈ ಅಧ್ಯಯನವು ಒಟ್ಟು ಎಂಟು ಅಧ್ಯಾಯಗಳನ್ನು ಒಳಗೊಂಡಿದ್ದು, ಪ್ರಸ್ತುತ ಅಧ್ಯಯನದ ಸ್ವರೂಪ ಈ ಕೆಳಗಿನಂತಿದೆ;

ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತಾವನೆ, ಅಧ್ಯಯನ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ವೈಧಾನಿಕತೆ ಹಾಗೂ ಇದುವರೆಗಿನ ಅಧ್ಯಯನಗಳ ಸಮೀಕ್ಷೆ ಕುರಿತು ವಿಶ್ಲೇಷಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಮಕ್ಕಳ ಸಾಹಿತ್ಯದ ಐತಿಹಾಸಿಕ ಹಿನ್ನೆಲೆಯನ್ನು ವಿದೇಶಿ ಸಂದರ್ಭದಲ್ಲಿ ಮಕ್ಕಳ ಸಾಹಿತ್ಯ, ಭಾರತೀಯ ಸಂದರ್ಭದಲ್ಲಿ ಮಕ್ಕಳ ಸಾಹಿತ್ಯ, ಕನ್ನಡದಲ್ಲಿ ಮಕ್ಕಳ ಸಾಹಿತ್ಯ ಎಂಬ ಮೂರು ಅಂಶಗಳನ್ನು ತಾತ್ವಿಕ ಚಿಂತನೆಗಳ ಹಿನ್ನೆಲೆಯಲ್ಲಿ ವಿವೇಚಿಸಲಾಗಿದೆ.

ಕನ್ನಡದಲ್ಲಿ ಮಕ್ಕಳ ಕಾವ್ಯ ಪರಿಕಲ್ಪನೆ ಮತ್ತು ಸ್ವರೂಪ ಎಂಬ ಮೂರನೆಯ ಅಧ್ಯಾಯದಲ್ಲಿ ಮುಖ್ಯವಾಗಿ ಹಿರಿಯರು ರಚಿಸಿದ ಮಕ್ಕಳ ಕಾವ್ಯ ಮತ್ತು ಮಕ್ಕಳು ರಚಿಸಿದ ಮಕ್ಕಳ ಕಾವ್ಯ ಎಂಬ ಎರಡು ಪರಿಕಲ್ಪನೆಗಳನ್ನು ಅಧ್ಯಯನಕ್ಕೊಳಪಡಿಸಲಾಗಿದೆ. ಈ ಎರಡು ಪರಿಕಲ್ಪನೆಗಳ ನಡುವಿನ ಸಾಮ್ಯತೆಗಳನ್ನು ವಿವರಿಸುತ್ತಾ ಕನ್ನಡ ಮಕ್ಕಳ ಕಾವ್ಯಕ್ಕಿರುವ ಬಹುಮುಖಿ ಸಾಧ್ಯತೆಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಮಕ್ಕಳ ಕಾವ್ಯದ ಭಾಷೆ ಒಂದು ವಿಶ್ಲೇಷಣೆ ಎಂಬ ನಾಲ್ಕನೆಯ ಅಧ್ಯಾಯವು ಮಕ್ಕಳ ಕಾವ್ಯದ ಭಾಷೆಯಲ್ಲಿ ಅಡಕವಾಗಿರುವ ಅನುಕರಣಾ ಪದಗಳ ಬಳಕೆ, ಜೋಡುನುಡಿಗಳ ಬಳಕೆ, ಪ್ರಾಸಬದ್ಧ ಪದಗಳ ರಚನೆ, ಸಂಬೋಧನಾ ರೂಪಗಳ ಬಳಕೆ, ಸಂಭಾಷಣಾ ಶೈಲಿಯ ಬಳಕೆ, ನಿರೂಪಣಾ ಶೈಲಿ, ಪ್ರಶ್ನಾರ್ಥಕ ರೂಪದ ಪದಗಳ ಬಳಕೆ, ದ್ವಿರುಕ್ತಿ, ಪುನರಾವೃತ್ತಿ, ಸರಳ ಪದಗಳ ರಚನೆ ಹೀಗೆ ಹಲವು ಭಾಷಿಕ ಅಂಶಗಳ ಕಡೆಗೆ ಹೆಚ್ಚು ಒತ್ತು ನೀಡುತ್ತದೆ.

ಮಕ್ಕಳ ಕಾವ್ಯದಲ್ಲಿ ಬಾಂಧವ್ಯದ ನೆಲೆಗಳು ಎಂಬ ಐದನೆಯ ಅಧ್ಯಾಯವು ಮುಖ್ಯವಾಗಿ ಕೌಟುಂಬಿಕ ನೆಲೆ ಮತ್ತು ಆನ್ವಯಿಕ ನೆಲೆ ಎಂಬ ಎರಡು ಅಂಶಗಳನ್ನು ಒಳಗೊಂಡಿರುತ್ತದೆ. ನಾನು ನನ್ನ ಕುಟುಂಬ ಎಂಬ ಕೌಟುಂಬಿಕ ನೆಲೆಯಿಂದ ನಾನು ನನ್ನ ಸಮಾಜ ಎಂಬ ಆನ್ವಯಿಕ ನೆಲೆಯ ಕಡೆಗೆ ಕನ್ನಡ ಮಕ್ಕಳ ಕಾವ್ಯದ ರಚನೆಗಳು ಸಾಗಿರುವ ಬಗೆಯನ್ನು ಇಲ್ಲಿ ವಿವರಿಸಲಾಗಿದೆ.

ಮಕ್ಕಳ ಕಾವ್ಯದ ಆನ್ವಯಿಕ ನೆಲೆಗಳು ಎಂಬ ಆರನೆಯ ಅಧ್ಯಾಯದಲ್ಲಿ ಮಕ್ಕಳ ಕಾವ್ಯ ಮತ್ತು ಮನೋವಿಜ್ಞಾನ, ಮಕ್ಕಳ ಕಾವ್ಯ ಮತ್ತು ನೀತಿ ಪ್ರತಿಪಾದನೆ, ಮಕ್ಕಳ ಕಾವ್ಯ ಮತ್ತು ವ್ಯಕ್ತಿತ್ವ ವಿಕಸನ ಈ ಮೂರು ಭಿನ್ನ ನೆಲೆಯ ತಾತ್ವಿಕ ಅಂಶಗಳನ್ನು ಇವುಗಳ ನಡುವೆ ಇರುವ ಪರಸ್ಪರ ಅಂತರ್‌ಸಂಬಂಧದ ಹಿನ್ನೆಲೆಯಲ್ಲಿ ವಿವೇಚಿಸಲಾಗಿದೆ.

ಸಮಕಾಲೀನ ಸಂದರ್ಭದಲ್ಲಿ ಮಕ್ಕಳ ಕಾವ್ಯ ಎಂಬ ಏಳನೆಯ ಅಧ್ಯಾಯದಲ್ಲಿ ಮುಖ್ಯವಾಗಿ ಮಕ್ಕಳ ಕಾವ್ಯದ ಹಿನ್ನೆಲೆಯಲ್ಲಿಯೇ ಮಕ್ಕಳ ಸಾಹಿತ್ಯದ ಅಗತ್ಯತೆ, ಮಕ್ಕಳ ಸಾಹಿತ್ಯ ಕೊರತೆ ಮತ್ತು ಪ್ರೋತ್ಸಾಹದ ಅಗತ್ಯತೆ, ಸಾಹಿತ್ಯ ಚರಿತ್ರೆಯಲ್ಲಿ ಮಕ್ಕಳ ಸಾಹಿತ್ಯದ ನೆಲೆ ಬೆಲೆ, ಮಕ್ಕಳ ಕಾವ್ಯ ಕ್ಷೇತ್ರದಲ್ಲಿ ಕಾವ್ಯದ ವಸ್ತು ವಿಷಯದಲ್ಲಾದ ಪಲ್ಲಟಗಳು ಮತ್ತು ಭಾಷೆಯ ಬಳಕೆಯಲ್ಲಾದ ಪಲ್ಲಟಗಳ ಕುರಿತು ಚರ್ಚಿಸಲಾಗಿದೆ.

ಅಧ್ಯಾಯ ಎಂಟು ಸಮಾರೋಪ ಭಾಗವನ್ನೊಳಗೊಂಡಿದೆ. ಇದರಲ್ಲಿ ಒಟ್ಟು ಅಧ್ಯಯನಕ್ಕೆ ಸಂಬಂಧಿಸಿದ ಅಧ್ಯಯನದ ಫಲಿತಗಳು ಮತ್ತು ಅಧ್ಯಯನದ ಸಾಧ್ಯತೆಗಳನ್ನು ನೀಡಲಾಗಿದ್ದು, ಅನುಬಂಧದಲ್ಲಿ ಪ್ರಾಥಮಿಕ ಆಕರಗಳು ಮತ್ತು ಆನುಷಂಗಿಕ ಆಕರಗಳನ್ನು ನೀಡಲಾಗಿದೆ.

**ವೈಧಾನಿಕತೆ**

ಆಕರಮುಖಿ ವಿಶ್ಲೇಷಣಾತ್ಮಕ ಅಧ್ಯಯನ ವಿಧಾನ ಇದಾಗಿದ್ದು, ಪೂರಕವಾಗಿ ವ್ಯಕ್ತಿತ್ವ ವಿಕಸನ, ಮಕ್ಕಳಕಾವ್ಯದ ಬಹುಮುಖಿ ಸಾಧ್ಯತೆಗಳಂತಹ ಪರಿಕಲ್ಪನೆಗಳನ್ನು ಇರಿಸಿಕೊಳ್ಳಲಾಗಿದೆ.

**೧.೨. ಇದುವರೆಗಿನ ಅಧ್ಯಯನಗಳ ಸಮೀಕ್ಷೆ**

ಯಾವುದೇ ಒಂದು ಕ್ಷೇತ್ರದಲ್ಲಿ ಆ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಕೆಲವು ಅಧ್ಯಯನಗಳು ನಡೆದಿರುತ್ತವೆ. ಕನ್ನಡ ಮಕ್ಕಳಕಾವ್ಯ ಕ್ಷೇತ್ರಕ್ಕೆ ಸಂಬಂಧಿಸಿದಂತೆಯು ಈ ಬಗೆಯ ಅಧ್ಯಯನಗಳು ನಡೆದಿವೆ. ಅಂತಹ ಅಧ್ಯಯನಗಳನ್ನು ಇಲ್ಲಿ ಸಮೀಕ್ಷೆಗೆ ಒಳಪಡಿಸಲಾಗಿದ್ದು, ಅಧ್ಯಯನದ ದೃಷ್ಟಿಯಿಂದ ಎರಡು ಬಗೆಯಲ್ಲಿ ಇದನ್ನು ನಿರ್ವಚಿಸಲಾಗುವುದು.

೧. ಪ್ರಬಂಧಗಳು, ೨. ಇತರೆ ಕೃತಿಗಳು.

**೧. ಪ್ರಬಂಧಗಳು**

* **ದಕ್ಷಿಣ ಕನ್ನಡದ ಶಿಶು ಗೀತೆಗಳು :** ೧೯೯೫ರಲ್ಲಿ ಭಾರತಿದೇವಿ ಎಂ. ಅವರು ಮಂಗಳೂರು ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಸಲ್ಲಿಸಿದ ಪ್ರೌಢ ಪ್ರಬಂಧ ಇದಾಗಿದ್ದು, ಸಮಾರೋಪವನ್ನೊಳಗೊಂಡಂತೆ ಒಟ್ಟು ಆರು ಅಧ್ಯಾಯಗಳನ್ನು ಒಳಗೊಂಡಿದೆ. ಪ್ರಸ್ತುತ ಅಧ್ಯಯನವು ದಕ್ಷಿಣ ಕನ್ನಡ ಜಿಲ್ಲೆಯ ಶಿಶುಗೀತೆಗಳನ್ನಷ್ಟೇ ಪ್ರಾತಿನಿಧಿಕವಾಗಿಟ್ಟುಕೊಂಡು ಮಾಡಿದ ಅಧ್ಯಯನ ಇದಾಗಿದೆ. ಶಿಶುಗೀತೆಯ ಸ್ವರೂಪ, ಪ್ರಭಾವ, ಪ್ರೇರಣೆ, ಶಿಶುಗೀತೆಯ ವಿವಿಧ ಪ್ರಕಾರಗಳಾದ ಜೋಗುಳ ಹಾಡು, ಆಟದ ಹಾಡು, ಪ್ರಾಣಿ-ಪಕ್ಷಿಗಳ ಹಾಡು, ಚುಟುಕುಗಳು, ಒಗಟಿನ ಹಾಡು, ಅನುಕರಣಗೀತೆ ಹೀಗೆ ಇನ್ನೂ ಮುಂತಾದ ಪ್ರಕಾರಗಳ ಕುರಿತ ಒಂದು ಅಧ್ಯಾಯ ರೂಪಿಸುವುದರ ಜೊತೆಯಲ್ಲೇ ದಕ್ಷಿಣ ಕನ್ನಡ ಜಿಲ್ಲೆಯ ಶಿಶುಗೀತೆಗಳಿಗಾಗಿಯೇ ಒಂದು ಪ್ರತ್ಯೇಕ ಅಧ್ಯಾಯವನ್ನು ಮೀಸಲಿಟ್ಟಿದ್ದಾರೆ.

* **ಮಕ್ಕಳ ಸಾಹಿತ್ಯ ಹಾಗೂ ಶಿಶು ಸಂಗಮೇಶ :** ಡಾ. ರಾಜೇಂದ್ರ ಎಸ್. ಗಡಾದ ಅವರು ೨೦೦೨ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಯ ಆಂಶಿಕ ಅವಶ್ಯಕತೆಗಾಗಿ ಸಲ್ಲಿಸಿದ ಮಹಾಪ್ರಬಂಧ ಇದಾಗಿದೆ. ಒಟ್ಟು ಐದು ಅಧ್ಯಾಯಗಳನ್ನೊಳಗೊಂಡ ಈ ಪ್ರಬಂಧ ಮಕ್ಕಳ ಸಾಹಿತ್ಯದ ಪರಂಪರೆಗೆ ಒಂದು ಅಧ್ಯಾಯ ಮೀಸಲಾಗಿದ್ದು ಕನ್ನಡ ಮಕ್ಕಳ ಕಾವ್ಯಲೋಕಕ್ಕೆ ತಮ್ಮ ಜೀವನವನ್ನೇ ಮುಡುಪಾಗಿರಿಸಿದ ಸಿಸು ಸಂಗಮೇಶರ ಸಮಗ್ರ ಸಾಹಿತ್ಯ ಸಮೀಕ್ಷೆ ಕುರಿತ ಒಂದು ಅಧ್ಯಾಯ ಹಾಗೂ ಸಂಗಮೇಶರ ಸಾಹಿತ್ಯದ ವಸ್ತು, ಭಾಷೆ, ಶೈಲಿ, ತಂತ್ರಗಳಿಗೆ ಸಂಬಂಧಿಸಿದಂತೆ ಒಂದು ಅಧ್ಯಾಯವನ್ನು ಹಾಗೂ ಮಕ್ಕಳ ಸಾಹಿತ್ಯಕ್ಕೆ ಶಿಶು ಸಂಗಮೇಶರ ಕೊಡುಗೆ ಕುರಿತ ಅಧ್ಯಾಯವೊಂದನ್ನು ರೂಪಿಸಿದ್ದಾರೆ. ಒಟ್ಟು ಈ ಮಹಾಪ್ರಬಂಧ ಸಿಸು ಸಂಗಮೇಶರನ್ನೇ ಪ್ರಧಾನವಾಗಿಟ್ಟುಕೊಂಡು ಮಾಡಿದ ಅಧ್ಯಯನವಾಗಿದೆ.

೨. ಇತರೆ ಕೃತಿಗಳು

*** ಕನ್ನಡ ಮಕ್ಕಳ ಸಾಹಿತ್ಯ ಇತ್ತೀಚಿನ ಒಲವುಗಳು** : ಹಂಪಿ ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗವು ಪ್ರಕಟಿಸಿದ ಡಾ. ಆನಂದ ಪಾಟೀಲರ ಈ ಕೃತಿಯು ಕನ್ನಡ ಮಕ್ಕಳ ಕಾವ್ಯದಲ್ಲಿ ಆಗುತ್ತಿರುವ ಹೊಸ ಬೆಳವಣಿಗೆಗಳನ್ನು ಗುರುತಿಸುವ ಪ್ರಯತ್ನ ಮಾಡಿದೆ. ಮಕ್ಕಳ ಕಥನಕಾವ್ಯದ ರಚನೆಗಳು ಕನ್ನಡ ಮಕ್ಕಳ ಕಾವ್ಯದಲ್ಲಿ ಬೆರಳಣಿಕೆಯಷ್ಟಿವೆ. ಅವುಗಳಲ್ಲಿ ಪ್ರಮುಖವಾದದ್ದು ಕುವೆಂಪುರವರ 'ಬೊಮ್ಮನಹಳ್ಳಿಯ ಕಿಂದರಿಜೋಗಿ'. ಆ ಬಳಿಕ ಎನ್. ಶ್ರೀನಿವಾಸ ಉಡುಪರ 'ಕುಂಭಕರ್ಣನ ನಿದ್ದೆ'ಯೇ ಎದ್ದು ಕಾಣುವಂತದ್ದು ಎಂಬುದು ಲೇಖಕರ ಅಭಿಮತ. ಈ ಬಗೆಯ ಕಥನಕವನಗಳ ರಚನೆಗೆ ಪ್ರಯತ್ನಿಸಿದ ಇತ್ತೀಚಿನವರಲ್ಲಿ ಎಚ್.ಎಸ್. ವೆಂಕಟೇಶಮೂರ್ತಿ, ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರು ಪ್ರಮುಖರೆನಿಸಿದ್ದಾರೆ ಎಂಬ ಅಂಶವು ಈ ಕೃತಿಯಿಂದ ತಿಳಿದುಬಂದಿದೆ. ಹೀಗೆ ಇತ್ತೀಚಿನ ಮಕ್ಕಳ ಕಾವ್ಯದ ಬೇರೆ ಬೇರೆ ಹೊಸ ಅಂಶಗಳ ಮೇಲೆ ಈ ಕೃತಿ ಬೆಳಕು ಚೆಲ್ಲುವ ಪ್ರಯತ್ನ ಮಾಡಿದೆ.

*** ಕನ್ನಡದಲ್ಲಿ ಮಕ್ಕಳ ಸಾಹಿತ್ಯ** : ಹಂಪಿ ಕನ್ನಡ ವಿಶ್ವವಿದ್ಯಾಲಯವು ಹತ್ತು ಹಲವು ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಕೆಲ ಮಹತ್ವದ ವಿಷಯಗಳನ್ನು ಕುರಿತು ಸಾಮಾನ್ಯ ಓದುಗರಿಗೂ ತಲುಪಬಹುದಾದ ರೀತಿಯಲ್ಲಿ ಸಂಬಂಧಪಟ್ಟ ಕ್ಷೇತ್ರದ ತಜ್ಞರಿಂದ, ವಿದ್ವಾಂಸರಿಂದ ಕಿರುಹೊತ್ತಿಗೆಯನ್ನು ರಚಿಸಿ ವಿಶ್ವವಿದ್ಯಾಲಯದ ಪ್ರಸಾರಾಂಗದ ವತಿಯಿಂದ ಮಂಟಪಮಾಲೆ ಹೆಸರಿನಡಿಯಲ್ಲಿ ಪ್ರಕಟಿಸಿದ ಮಹತ್ವಕಾಂಕ್ಷೆಯ ಕೃತಿಗಳಲ್ಲಿ ಇದು ಒಂದಾಗಿದೆ. ಈ ಕೃತಿಯನ್ನು ಡಾ. ಬೆಳವಾಡಿ ಮಂಜುನಾಥ ರಚಿಸಿಕೊಟ್ಟಿದ್ದು ಈ ಕೃತಿಯಲ್ಲಿ ಲೇಖಕರು ಕೌಟುಂಬಿಕ ಪರಿಸರ ಹಾಗೂ ಸಾಮಾಜಿಕ ಪರಿಸರದಲ್ಲಿ ಉಂಟಾದ ವ್ಯಕ್ತಿ ಸಂಬಂಧಗಳ ನಡುವಿನ ಬಿರುಕುಗಳಿಂದ ಕಾವ್ಯವೂ ಸಹ ಸವಕಲಾಗಿದೆ ಎಂಬ ಚಿಂತನಾತ್ಮಕ ನೆಲೆಯ ವಿಚಾರಧಾರೆಗಳೊಂದಿಗೆ ಕನ್ನಡದಲ್ಲಿರುವ ಮಕ್ಕಳ ಸಾಹಿತ್ಯದ ಸ್ವರೂಪವನ್ನು ವಿಶ್ಲೇಷಿಸುತ್ತಾ ಹೋಗುತ್ತಾರೆ.

*** ಮಕ್ಕಳ ಹಾಡುಗಳು** : ಕರ್ನಾಟಕದಾದ್ಯಂತ ಇಂದಿಗೂ ಜನರ ಮನೆಮನಗಳನ್ನು ಆವರಿಸಿರುವ ವಿಪುಲ ಜನಪದ ಸಾಹಿತ್ಯವನ್ನು ಸಂಗ್ರಹಿಸಿ ಪ್ರಕಟಿಸುವ ತುಂಬಾ ಮಹತ್ವಕಾಂಕ್ಷೆಯ 'ಸಮಗ್ರ ಕನ್ನಡ ಜನಪದ ಮತ್ತು ಯಕ್ಷಗಾನ ಸಾಹಿತ್ಯ ಮಾಲೆ'ಯ ಯೋಜನೆಯ ಹೊಣೆಹೊತ್ತಿರುವ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಪ್ರಕಟಿಸಿದ ಡಾ. ವೈ.ಸಿ. ಭಾನುಮತಿ ಸಂಪಾದಿಸಿರುವ ಕೃತಿ ಇದಾಗಿದೆ. ಈ ಕೃತಿಯ ಸಂಪಾದನೆಯ ಹಿಂದೆ ಸಂಪಾದಕಿ ಭಾನುಮತಿಯವರ ಅಧ್ಯಯನದ ಪರಿಶ್ರಮವಿರುವುದು ಅವರು ಈ ಕೃತಿಗೆ ಬರೆದ ದೀರ್ಘವಾದ ಮತ್ತು ಅರ್ಥಪೂರ್ಣವಾದ ಪ್ರಸ್ತಾವನೆಯಿಂದ ತಿಳಿದುಬರುತ್ತದೆ. ತಾವು ಸಂಪಾದಿಸಿದ ಕನ್ನಡ ಮಕ್ಕಳ ಮೌಖಿಕ ಪರಂಪರೆಯ ಕಾವ್ಯವನ್ನು ಓದುಗರಿಗೆ ಸುಲಭ ಗ್ರಾಹ್ಯವಾಗುವ ರೀತಿಯಲ್ಲಿ ಆಟದ ಹಾಡುಗಳು, ಪರಿಹಾಸ್ಯದ ಹಾಡುಗಳು, ದೇವರ ಹಾಡುಗಳು, ಪ್ರಕೃತಿ ಸಂಬಂಧಿ ಹಾಡುಗಳು,

ಸಂವಾದದ ಹಾಡುಗಳು, ಎಣಿಕೆ-ಕಲಿಕೆ ಹಾಡುಗಳು, ಘಟನಾತ್ಮಕ ಹಾಡುಗಳು, ಆಚರಣೆ ಸಂಬಂಧಿ ಹಾಡುಗಳು, ಆಧುನಿಕ ಹಾಡುಗಳು, ಅಶ್ಲೀಲ ಹಾಡುಗಳು, ಬಿಡಿ ಹಾಡುಗಳು ಎಂದು ಹೀಗೆ ಒಟ್ಟು ಹನ್ನೊಂದು ಪ್ರಕಾರಗಳಲ್ಲಿ ವಿಂಗಡಿಸಿ, ಸಂಕಲಿಸಿ ಅವುಗಳ ಸ್ವರೂಪವನ್ನು ವಿವರಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಕನ್ನಡ ಮಕ್ಕಳ ಕಾವ್ಯಕ್ಕೆ ಸಂಬಂಧಿಸಿದಂತೆ ಇದೊಂದು ಮಹತ್ವದ ಅಧ್ಯಯನವೆಂದೇ ಹೇಳಬಹುದು.

* **ಕಂಚ್ಯಾಣಿಯವರ ಶಿಶು ಕಾವ್ಯ** : ೨೦೧೧ರಲ್ಲಿ ಪ್ರಕಟವಾದ ಪ್ರೊ. ಗುರುರಾಜ ಜಿ. ಮೇಡಿದಾರ ಅವರ ಈ ಕೃತಿಯು ಮೂಲತಃ ಎಂ.ಫಿಲ್. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನಾ ಪ್ರಬಂಧವಾಗಿದೆ. ಒಟ್ಟು ಏಳು ಅಧ್ಯಾಯಗಳನ್ನೊಳಗೊಂಡಿರುವ ಈ ಕೃತಿ ಕನ್ನಡ ಮಕ್ಕಳ ಕಾವ್ಯಕ್ಕಾಗಿ ದುಡಿದ ಮಕ್ಕಳ ಕವಿ ಕಂಚ್ಯಾಣಿ ಶರಣಪ್ಪನವರ ಕಾವ್ಯವನ್ನು ಭಿನ್ನ ಆಯಾಮಗಳಲ್ಲಿ ವಿಶ್ಲೇಷಣೆಗೊಳಪಡಿಸಿದೆ.

* **ಮಕ್ಕಳ ಸಾಹಿತ್ಯ : ಕೆಲವು ಅಧ್ಯಯನಗಳು** : ಪ್ರೊ. ಟಿ.ಎಸ್. ನಾಗರಾಜಶೆಟ್ಟಿಯವರು ೨೦೦೫ರಲ್ಲಿ ಪ್ರಕಟಿಸಿದ ಕೃತಿ ಇದಾಗಿದ್ದು, ಈ ಹಿಂದೆ ೧೯೯೫ರಲ್ಲಿ ಮಕ್ಕಳ ಸಾಹಿತ್ಯ : ಏಕೆ ಬೇಕು' ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ. ಈ ಕೃತಿಯಲ್ಲಿ ಒಟ್ಟು ಹನ್ನೆರಡು ಲೇಖನಗಳಿವೆ. ಪ್ರೊ. ಟಿ.ಎಸ್. ನಾಗರಾಜಶೆಟ್ಟಿಯವರು ಕನ್ನಡ ಮಕ್ಕಳ ಸಾಹಿತ್ಯವನ್ನು ಕುರಿತು ಬರೆದ, ವಿಚಾರಸಂಕಿರಣ ಹಾಗೂ ಸಾಹಿತ್ಯ ಸಮ್ಮೇಳನಗಳಲ್ಲಿ ಮಂಡಿಸಿದ ಪ್ರಬಂಧಗಳ ಸಂಕಲನ ಇದಾಗಿದೆ. ಅನಾದರಕ್ಕೊಳಪಟ್ಟಿರುವ ಕನ್ನಡ ಮಕ್ಕಳ ಕಾವ್ಯವನ್ನು ಮತ್ತೆ ಪ್ರೀತಿಯಿಂದ ಅಪ್ಪಿಕೊಳ್ಳುವಂತೆ ಮಾಡುವ, ಮಕ್ಕಳ ಸಾಹಿತ್ಯದ ಮಹತ್ವವನ್ನು ತಿಳಿಸುವ ತಾತ್ವಿಕ ಚಿಂತನೆಗಳು ಈ ಕೃತಿಯಲ್ಲಿವೆ.

* **ಮಕ್ಕಳ ಸಾಹಿತ್ಯ ಚಿಂತನೆ ಮತ್ತು ಸಿಸು ಸಂಗಮೇಶರ ಸ್ಮರಣೆ** : ೨೯.೫.೨೦೦೧ರಲ್ಲಿ ಕನ್ನಡ ಮಕ್ಕಳ ಕಾವ್ಯದ ಮೇರು ಪ್ರತಿಭೆ ಸಿಸು ಸಂಗಮೇಶರು ನಿಧನರಾದರು. ಅವರ ಸ್ಮರಣಾರ್ಥ ಕರ್ನಾಟಕ ಸಾಹಿತ್ಯ ಅಕಾಡೆಮಿಯು ವಿಜಾಪುರದಲ್ಲಿ ವಿಚಾರ ಸಂಕೀರ್ಣ ಹಮ್ಮಿಕೊಂಡಿತು. ಈ ವಿಚಾರ ಸಂಕೀರ್ಣದಲ್ಲಿ ಮಕ್ಕಳ ಸಾಹಿತ್ಯ ರಚನೆ ಹಾಗೂ ಸಿಸು ಸಂಗಮೇಶರ ಸ್ಮರಣೆ ಎಂಬ ಎರಡು ಗೋಷ್ಠಿಗಳನ್ನು ಏರ್ಪಡಿಸಲಾಗಿತ್ತು. ಈ ಎರಡು ಗೋಷ್ಠಿಗಳಲ್ಲಿ ಅಭಿವ್ಯಕ್ತಿಗೊಂಡ ಏಳು ಉಪನ್ಯಾಸಗಳು ಹಾಗೂ ಅಧ್ಯಕ್ಷರ ಭಾಷಣ ಸೇರಿದಂತೆ ಒಟ್ಟು ಎಂಟು ಲೇಖನಗಳನ್ನು ಇದು ಒಳಗೊಂಡಿದೆ. ಸಿಸು ಸಂಗಮೇಶರ ಬದುಕು-ಬರಹವನ್ನು, ಮಕ್ಕಳ ಸಾಹಿತ್ಯದ ಚಿಂತನೆಗಳನ್ನು ಈ ಬರವಣಿಗೆಗಳು ಒಳಗೊಂಡಿರುವುದನ್ನು ಕಾಣಬಹುದು.

* **ಮಕ್ಕಳ ಸಾಹಿತ್ಯ ಶತಮಾನ** : ಆನಂದ ವಿ. ಪಾಟೀಲ ಹಾಗೂ ನ. ರವಿಕುಮಾರ್ ಸಂಪಾದಿಸಿದ ಈ ಕೃತಿ ನಿರ್ದಿಷ್ಟವಾಗಿ ಮಕ್ಕಳ ಕಾವ್ಯದ ಕುರಿತೇನೂ ಮಾತನಾಡದೇ ಒಟ್ಟು ಮಕ್ಕಳ ಸಾಹಿತ್ಯದ ಬೆಳೆದು ಬಂದ ಬಗೆಯನ್ನು ಅನೇಕ ಘಟ್ಟಗಳಲ್ಲಿ ತಿಳಿಸುವ ಪ್ರಯತ್ನ

ಮಾಡಿದ್ದಾರೆ. ಶ್ರೀನಿವಾಸ ಉಡುಪ, ಟಿ.ಎಸ್. ನಾಗರಾಜ ಶೆಟ್ಟಿ, ಆನಂದ ಪಾಟೀಲ, ಎಂ.ಎ. ಸುದರ್ಶನ, ಸುರೇಶ ಕುಲಕರ್ಣಿ, ಆರ್.ಕೆ. ಶ್ಯಾನುಭೋಗ, ಡಾ. ಎ.ಎಂ. ಶಂಕರನಾರಾಯಣ, ಡಾ. ಶ್ರೀಪಾದ ಶೆಟ್ಟಿ ಲೇಖನಗಳನ್ನು ಬರೆದುಕೊಟ್ಟಿದ್ದಾರೆ. ಈ ಕೃತಿ ಪ್ರಸ್ತುತ ಅಧ್ಯಯನಕ್ಕೆ ನೆರವಾಗಿ ಸಂಬಂಧ ಪಡದೇ ಹೋದರೂ ಅಧ್ಯಯನದ ಪೂರಕ ಓದಿಗಾಗಿ ಈ ಕೃತಿಯನ್ನು ಬಳಸಿಕೊಳ್ಳಲಾಗಿದೆ.

* **ಅಲರು :** ಮಕ್ಕಳು ಸಾಹಿತ್ಯ ಕ್ಷೇತ್ರಕ್ಕೆ ಸಂಬಂಧಿಸಿ 'ಮಕ್ಕಳ ಸಾಹಿತ್ಯ ಒಂದಿಷ್ಟು ಮಾತಕತೆ' ಎಂಬ ಪತ್ರಿಕೆಯನ್ನು ಪ್ರಕಟಿಸುತ್ತಾ ಕ್ರಿಯಾಶೀಲರಾಗಿರುವ ಆನಂದ ವಿ. ಪಾಟೀಲ ಮಕ್ಕಳ ಸಾಹಿತ್ಯದ ಕಾವ್ಯ, ಗದ್ಯ, ನಾಟಕ, ಹೀಗೆ ಬೇರೆ ಬೇರೆ ಪ್ರಕಾರಗಳಲ್ಲಿ ದುಡಿದವರು. ಮಕ್ಕಳ ಸಾಹಿತ್ಯದ ಕುರಿತು ಬರೆದ ಹದಿನೈದು ಲೇಖನಗಳ ಸಂಗ್ರಹ ಇದಾಗಿದೆ. ೨೦೧೦ರಲ್ಲಿ ಈ ಕೃತಿ ಪ್ರಕಟಗೊಳ್ಳುತ್ತದೆ. ಇಲ್ಲಿನ ಲೇಖನಗಳು ಚಿಂತನಾ ಮಾದರಿಯ ಲೇಖನಗಳಾಗಿವೆ.

* **ಭಾರತೀಯ ಮಕ್ಕಳ ಸಾಹಿತ್ಯ ಸಮೀಕ್ಷೆ :** ಡಾ. ನಿರುಪಮಾ ಅವರ ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ ೨೦೦೪ರಲ್ಲಿ ಪ್ರಕಟವಾದ ಈ ಕೃತಿ ಭಾರತ ದೇಶದ ಅಸ್ಸಾಮಿ, ಉರ್ದು, ಒರಿಯಾ, ಕನ್ನಡ, ಕಾಶ್ಮೀರ, ಕೊಂಕಣಿ, ಗುಜರಾತಿ, ತಮಿಳು, ತೆಲುಗು, ಪಂಜಾಬಿ, ಬಂಗಾಲಿ, ಮರಾಠಿ, ಮಲಯಾಳಂ, ಸಂಸ್ಕೃತ, ಸಿಂಧಿ, ಹಿಂದಿ, ಭಾರತೀಯ ಆಂಗ್ಲ ಭಾಷೆ ಸೇರಿದಂತೆ ಒಟ್ಟು ೧೮ ಭಾಷೆಗಳ ಮಕ್ಕಳ ಸಾಹಿತ್ಯ ಸಮೀಕ್ಷೆಯನ್ನೊಳಗೊಂಡಿದೆ.

* **ಶಿಶು ಸಾಹಿತ್ಯ ಪರಂಪರೆ ಮತ್ತು ಕುವೆಂಪು :** ಡಬ್ಲ್ಯೂ. ಬಸವರಾಜ ಅವರ ವಿಮರ್ಶಾ ಕೃತಿ ಇದಾಗಿದ್ದು, ೨೦೦೪ರಲ್ಲಿ ಪ್ರಕಟಗೊಂಡಿದೆ. ಕನ್ನಡ ಮಕ್ಕಳ ಸಾಹಿತ್ಯದ ಇತಿಹಾಸವನ್ನು ತಿಳಿಸುತ್ತಾ, ಒಟ್ಟು ಕೃತಿ ಕುವೆಂಪುರವರ ಶಿಶು ಸಾಹಿತ್ಯದ ಕಡೆಗೆ ತನ್ನ ಗಮನವನ್ನು ಹೆಚ್ಚು ಕೇಂದ್ರಿಕರಿಸುತ್ತದೆ.

* **ಮೊಗ್ಗಿನ ಮಾತು :** ೨೦೧೫ ನವೆಂಬರ್‌ನಲ್ಲಿ ಪ್ರಕಟವಾದ ಕಾತ್ಯಾಯಿನಿ ಕುಂಜಿಬೆಟ್ಟು ಅವರ ಈ ಕೃತಿಯು ಮೂಲತಃ ಪಿಎಚ್.ಡಿ. ಪದವಿಗಾಗಿ ಮಣಿಪಾಲ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನಾ ಮಹಾಪ್ರಬಂಧವಾಗಿದೆ. ಒಟ್ಟು ಎಂಟು ಅಧ್ಯಾಯಗಳನ್ನು ಒಳಗೊಂಡಿರುವ ಈ ಕೃತಿ ಖ್ಯಾತ ಮಕ್ಕಳ ಸಾಹಿತಿ ಪಳಕಳ ಸೀತಾರಾಮ ಭಟ್ಟರು ಮಕ್ಕಳ ಸಾಹಿತ್ಯದ ಕುರಿತಂತೆ ಮಕ್ಕಳ ಸಾಹಿತ್ಯದ ಬೇರೆ ಬೇರೆ ಪ್ರಕಾರಗಳಲ್ಲಿ ರಚಿಸಲಾದ ಸಮಗ್ರ ಕೃತಿಗಳ ಕುರಿತು ನಡೆಸಿದ ಅಧ್ಯಯನದ ಮೇಲೆ ಬೆಳಕು ಚೆಲ್ಲುತ್ತದೆ. ಪಳಕಳರ ಕೃತಿಗಳ ಸಮೀಕ್ಷೆಯ ಆಚೆಗೆ ಅವರ ಚಿಂತನೆಗಳನ್ನೂ ಇಲ್ಲಿ ಅಕ್ಷರ ರೂಪಕ್ಕಿಳಿಸಿರುವುದು ಕೃತಿಯ ಮೌಲ್ಯವನ್ನು ಹೆಚ್ಚಿಸಿದೆ.

•••

ಅಧ್ಯಾಯ : ಎರಡು

# ಮಕ್ಕಳ ಸಾಹಿತ್ಯ : ಐತಿಹಾಸಿಕ ಹಿನ್ನೆಲೆ

## ಅಧ್ಯಾಯ : ಎರಡು

# ಮಕ್ಕಳ ಸಾಹಿತ್ಯ : ಐತಿಹಾಸಿಕ ಹಿನ್ನೆಲೆ

### ೨.೧. ವಿದೇಶಿ ಸಂದರ್ಭದಲ್ಲಿ ಮಕ್ಕಳ ಸಾಹಿತ್ಯ

ಪಾಶ್ಚಾತ್ಯ ಸಮಾಜದಲ್ಲಿ ಮಕ್ಕಳ ಸಾಹಿತ್ಯದ ಉಗಮವನ್ನು ೧೨ನೇ ಶತಮಾನದಲ್ಲಿ ಗುರುತಿಸಬಹುದು. ಹಲವು ಆವಿಷ್ಕಾರಗಳಿಗೆ ಹೆಸರಾದ ಯುರೋಪ್ ರಾಷ್ಟ್ರಗಳಿಗೆ ಮೊದಲು ಮಕ್ಕಳ ಸಾಹಿತ್ಯವನ್ನು ರಚಿಸಿದ ಕೀರ್ತಿ ಸಲ್ಲುತ್ತದೆ. ಅದರಲ್ಲಿ ಮಕ್ಕಳ ಸಾಹಿತ್ಯ ಬೆಳಕಿಗೆ ತಂದ ಕೀರ್ತಿ ಜರ್ಮನ್ ದೇಶದ್ದು. ಕಥೆ, ಕವನ, ಪ್ರಾಸ, ನೀತಿಕಥೆ ಮುಂತಾದ ಮಕ್ಕಳ ಸಾಹಿತ್ಯವನ್ನು ರಚಿಸಿದ ಜರ್ಮನ್ ಸಾಹಿತ್ಯಲೋಕ ರಾಜ-ರಾಣಿ, ಮಾಂತ್ರಿಕ, ರಾಕ್ಷಸ, ವೀರಯೋಧ, ಪ್ರಾಣಿ-ಪಕ್ಷಿ ಮುಂತಾದ ಜೀವ ಮತ್ತು ಪ್ರಾಕೃತಿಕ ಮೂಲಗಳನ್ನು ಬಳಸಿಕೊಂಡು ರಮ್ಯ ಮಕ್ಕಳ ಸಾಹಿತ್ಯವನ್ನು ಸೃಷ್ಟಿಸಿತು. ಭಾರತೀಯ ಸಾಮಾಜಿಕ ಪರಿಸರದಲ್ಲಿ ಮಕ್ಕಳ ಸಾಹಿತ್ಯದ ಬೇರುಗಳನ್ನು ಕ್ರಿಸ್ತಪೂರ್ವ ಯುಗದಲ್ಲಿ ಗುರುತಿಸುವ ಹಾಗೆ ಪಾಶ್ಚಾತ್ಯ ಭಾಷೆಗಳಲ್ಲಿ ಈ ಬಗೆಯ ಬೇರುಗಳನ್ನು ಗುರುತಿಸಲು ಸಾಧ್ಯವಿಲ್ಲ. ಇದಕ್ಕೆ ಕಾರಣವೂ ಇಲ್ಲದಿಲ್ಲ. ಜಗತ್ತಿನ ಪುರಾತನ ನಾಗರೀಕತೆಗಳಲ್ಲಿ ಒಂದಾದ ಭಾರತದ ನಾಗರೀಕತೆ ಸಹಜವಾಗಿಯೇ ತನ್ನ ಹುಟ್ಟಿನ ಜೊತೆಗೆ ಕಥೆಯನ್ನು ಸೃಷ್ಟಿಸಿಕೊಂಡೇ ಹುಟ್ಟಿದೆ. ಪಾಶ್ಚಾತ್ಯ ಮಕ್ಕಳ ಸಾಹಿತ್ಯದ ಉಗಮಕ್ಕೆ ಈ ಬಗೆಯ ಚಾರಿತ್ರಿಕ ಹಿನ್ನೆಲೆ ಇಲ್ಲ. ಸಾಮಾನ್ಯವಾಗಿ ದನಗಾಹಿ ಅಲೆಮಾರಿ ಜನಾಂಗಗಳಿಂದ ಸೃಷ್ಟಿಯಾದ ಯುರೋಪಿನ ಬೇರೆ ಬೇರೆ ರಾಷ್ಟ್ರಗಳು ತನ್ನ ಉಗಮ ಮತ್ತು ವಿಕಾಸಗಳ ಚಾರಿತ್ರಿಕ ದಾಖಲಾತಿ ಅಸ್ಪಷ್ಟ ನೆಲೆಯಲ್ಲಿ ನಿರ್ವಚನಗೊಂಡಿರುವ ಬಹುಮುಖ್ಯ ಕಾರಣ ಈ ಪ್ರಕ್ರಿಯೆಯ ಹಿಂದಿದೆ.

ವರ್ಷವಿಡೀ ತುಂಬಿ ಹರಿಯುತ್ತಿದ್ದ ಸಿಂಧೂ ಕೊಳ್ಳದ ಸಂಪದ್ಭರಿತ, ಫಲವತ್ತಾದ ಮೆಕ್ಕಲು ಮಣ್ಣಿನ ನದಿ ಪಾತ್ರದಲ್ಲಿ ಬೆಳೆದು ಬಂದು, ಇಡೀ ಜಗತ್ತಿಗೆ ಉತ್ತುವ, ಬೆಳೆಯುವ, ಬೇಯಿಸಿ ತಿನ್ನುವ ವ್ಯವಸಾಯದ ಮೂಲ ಸಿದ್ಧಾಂತಗಳ ಪಾಠವನ್ನೇ ಹೇಳಿಕೊಟ್ಟ ಸಿಂಧೂ ನಾಗರೀಕತೆ ಪ್ರಕೃತಿಯನ್ನು ಆರಾಧಿಸುವ 'ಪೂಜ್ಯೆ' ಪದ್ಧತಿಯನ್ನು ಒಳಗೊಂಡದ್ದಾಗಿತ್ತು. ಜಗತ್ತಿನ ಅತೀ ಪುರಾತನ ಪ್ರಜಾಪ್ರಭುತ್ವವಾದಿ ಗಣರಾಜ್ಯವನ್ನು ಹೊಂದಿದ್ದ ಸಿಂಧೂ ಕೊಳ್ಳದ ನಾಗರೀಕತೆ ಪ್ರಕೃತಿಯಲ್ಲೇ ಪರಮಾತ್ಮನನ್ನು ಕಂಡು ಪ್ರಕೃತಿಯಲ್ಲಿ ಸಿಗುವ ಹೂಗಳನ್ನು ಹರಿದು ತಂದು

ಪ್ರಕೃತಿಗೆ ಮರಳಿ ಅರ್ಪಿಸುವ, ಪ್ರಕೃತಿ ಆರಾಧನಾ ಪದ್ಧತಿಯನ್ನು ಒಪ್ಪಿಕೊಂಡಿತ್ತು. ಅಂದರೆ ಪ್ರಕೃತಿಯ ಒಳಗೆ ಖಾಯಂ ಆಗಿ ನೆಲೆಸುವ ಯಾವುದೇ ಒಂದು ನಾಗರಿಕ, ಭಾಷಿಕ ಕುಲಗಳು ಅಗಾಧವಾದ ಸಾಹಿತ್ಯಿಕ, ಸಾಂಸ್ಕೃತಿಕ ಪರಂಪರೆಗಳ ವಕ್ತಾರರಾಗಿರುತ್ತಾರೆ. ಈ ಸೃಷ್ಟಿ ಮೂಲಭೂತವಾಗಿ ಮೊದಲು ಮಕ್ಕಳನ್ನು ಬಳಸಿಕೊಂಡೇ ರಚನೆಯಾದದ್ದಾಗಿರುತ್ತದೆ. ಕಾರಣ ಯಾವುದೇ ಯೌವ್ವನಿಗ ಮಗುವಿನ ಮಾನಸಿಕ ಸ್ಥಿತಿಯನ್ನು ದಾಟಿ, ಬೆಳೆದು ಹೋದ ಕಾರಣಕ್ಕಾಗಿ ತನ್ನ ಬಾಲ್ಯದ ನೆನಪುಗಳು ನಿರಂತರವಾಗಿ ಅವನಲ್ಲಿ ಕಾಡುತ್ತಿರುತ್ತದೆ. ಹೀಗಾಗಿ ಮಕ್ಕಳಾಟವು ಚೆಂದ, ಮತ್ತೆ ಯೌವ್ವನ ಚೆಂದ, ಮುಪ್ಪಿನಲಿ ಚೆಂದ ನರೆಗಡ್ಡ ಎಂದು ಜನಪದ ಸ್ತ್ರೀ ಹೇಳುತ್ತಾಳೆ. ಇದು ಮಗು ಬಾಲ್ಯ, ಯೌವ್ವನ, ವೃದ್ಧಾಪ್ಯ ಎಂಬ ಮೂರು ಬೆಳವಣಿಗೆಗಳ ಹಂತವನ್ನು ದೂರದಿಂದಲೇ ಕಂಡು ಅನುಭವಿಸಿ ಹಾಡುವ ಜನಪದ ಶೈಲಿ. ಆದರೆ ಪಾಶ್ಚಾತ್ಯರಲ್ಲಿ ಈ ಬಗೆಯ ಮಕ್ಕಳ ಸಾಹಿತ್ಯಾನುಸಂಧಾನತೆಯನ್ನು ಗುರುತಿಸುವುದು ತುಸು ಕಷ್ಟ. ಪಾಶ್ಚಾತ್ಯ ಮಕ್ಕಳ ಸಾಹಿತ್ಯದ ಹೆಜ್ಜೆ ಗುರುತುಗಳನ್ನು ಮುದ್ರಣ ಕಲೆ ಬರುವ ತುಸು ಮುನ್ನ ಮಾತ್ರ ಗುರುತಿಸಬಹುದು. ಮುದ್ರಣಕಲೆ ಬರುವ ಮುನ್ನ ಯುರೋಪಿನಲ್ಲಿ ಮಕ್ಕಳಿಗಾಗಿ ಕೃತಿ ರಚಿಸುವ ಪ್ರಯತ್ನಗಳು ನಡೆದಿವೆ. ಲ್ಯಾಟಿನ್ ಭಾಷೆಯಲ್ಲಿ 'ಬೀಡ್' ಎಂಬಾತ ಈ ಪ್ರಯತ್ನವನ್ನು ಮಾಡಿದ ದಾಖಲೆಗಳಿವೆ. ಆದರೆ ಈ ಪ್ರಯತ್ನದಲ್ಲಿ ಬೀಡ್ ಅದೆಷ್ಟರಮಟ್ಟಿಗೆ ಯಶಸ್ವಿಯಾದ ಎನ್ನುವ ಸಂಗತಿಯು ಸಂಶೋಧನೆಗೆ ಒಳಪಡಬೇಕಿದೆ.

ಕ್ಯಾಂಟರ್‌ಬರಿಯ ಆರ್ಚ್‌ಬಿಷಪ್, ಅನ್‌ಸೆಲ್ಮೆ ಎಂಬಾತ ಮಕ್ಕಳಿಗೆ ಸಾಮಾನ್ಯ ತಿಳುವಳಿಕೆಯನ್ನು ನೀಡುವ ವಿಶ್ವಕೋಶದೊಂದಿಗೆ ಪಾಶ್ಚಾತ್ಯ ಮಕ್ಕಳ ಸಾಹಿತ್ಯದ ಉಗಮವನ್ನು ಗುರುತಿಸಬಹುದು. ಈ ಚರ್ಚೆ ಅಧಿಕೃತವಾದುದು.

ಪಾಶ್ಚಾತ್ಯ ಮಕ್ಕಳ ಸಾಹಿತ್ಯ ಉಗಮ ಮತ್ತು ವಿಕಾಸದ ಕುರಿತು ಊಹಾತ್ಮಕ ಸಿದ್ಧಾಂತದ ಹಿನ್ನೆಲೆಯಲ್ಲಿ ಕೆಲವು ಚರ್ಚೆಗಳಿವೆ. ಯುರೋಪ್ ದೇಶದ ದನಗಾಹಿ ಸಮುದಾಯ ಒಂದೆಡೆ ನಿಂತು ಆಳುವ ವ್ಯವಸ್ಥೆಯನ್ನು ಸೃಷ್ಟಿಸಿಕೊಂಡ ಮೇಲೆ ಸಾಮ್ರಾಜ್ಯಶಾಹಿಯ ಧೋರಣೆಯ ಪ್ರಜಾಶೋಷಣೆ ನಿರಂತರವಾಗಿ ನಡೆಸುತ್ತಾ ಬಂದಿತು. ಅರಸೊತ್ತಿಗೆಯಿಂದ ನಡೆಯುತ್ತಿದ್ದ ಈ ಬಗೆಯ ಶೋಷಣೆಯಲ್ಲಿ ಸ್ವತಂತ್ರ ಹೀನರಾದ ಪ್ರಜಾವರ್ಗ ತಮ್ಮ ಸಂಕಷ್ಟಗಳನ್ನು ಯಾರಿಗೆ ಹೇಗೆ ಹೇಳಿಕೊಳ್ಳಬೇಕು? ಎನ್ನುವ ಪ್ರಶ್ನೆಗಳು ಉದ್ಭವಿಸಿದವು. ಆ ಸಮಾಜ ಕಂಡುಕೊಂಡ ಸುಲಭ ಉತ್ತರ ಮಕ್ಕಳಾಡುವ ಭಾಷೆ. ಆಡುವ ಮಕ್ಕಳು ಏನೇ ಅಂದರೂ, ಏನೇ ಮಾತನಾಡಿದರೂ ಅದರ ಬಗ್ಗೆ ತಲೆಕೆಡಿಸಿಕೊಳ್ಳದ ಸ್ಥಿತಿ ಸಹಜವಾಗಿರುತ್ತದೆ ಅಥವಾ ಈ ಅಂಶವನ್ನು ಹೀಗೂ ಸ್ಪಷ್ಟಪಡಿಸಬಹುದೆಂದು ತೋರುತ್ತದೆ. ಅಪ್ಪಿತಪ್ಪಿ ಮಕ್ಕಳ ಬಾಯಲ್ಲಿ ದೊಡ್ಡ ದೊಡ್ಡ ಮಾತುಗಳೇನಾದರೂ (ಹಿರಿಯರಾಡುವ) ಬಂದರೆ ಮಕ್ಕಳು ಎನ್ನುವ ಕಾರಣಕ್ಕೆ ಒಂದು ರಿಯಾಯಿತಿ ಸಿಗುತ್ತಿರುತ್ತದೆ. ಈ ರಿಯಾಯಿತಿಯನ್ನೇ ಅರಸೊತ್ತಿಗೆಗಳ ನಿಂದನೆಗಾಗಿ ಬಳಸಿಕೊಂಡ ಪಾಶ್ಚಾತ್ಯ ಕುಲಗಳ ಭಾಷೆಯಲ್ಲಿ ಮೌಖಿಕ ಮಕ್ಕಳ ಸಾಹಿತ್ಯದ ಉಗಮವನ್ನು

ಗುರುತಿಸಬಹುದೆಂದು ತೋರುತ್ತದೆ. ಈಗಾಗಲೇ ಪ್ರಸ್ತಾಪಿಸಿದಂತೆ ಇದು ಆಧಾರರಹಿತ ಮತ್ತು ಊಹಾತ್ಮಕ ಸಿದ್ಧಾಂತದ ಮೇಲೆ ನಿಂತಿರುವ ಸಂಗತಿಯಾಗಿದೆ.

"ಮಕ್ಕಳನ್ನು ದೃಷ್ಟಿಯಲ್ಲಿಟ್ಟುಕೊಂಡೇ ಕೃತಿಗಳನ್ನು ರಚಿಸುವ ಪ್ರಯತ್ನ ೧೭ನೇ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ ನಡೆಯುತೊಡಗಿತು. ಮನೋರಂಜನೆ ಮತ್ತು ನೀತಿ ಶಿಕ್ಷಣವನ್ನು ಗಮನದಲ್ಲಿಟ್ಟುಕೊಂಡು ಟಿ.ಲೈಯ್ ಎಂಬಾತ ''A Childs delight together with an English grammer" ಎಂಬುದನ್ನು, ಜೇಮ್ಸ್ ಜೇನ್‌ವೇ "A to confar children the exmplary lights and joyful deaths of several young children (1671)"[೧] ಈ ಮೂಲಕ ರಚನೆಗೊಂಡ ಪಾಶ್ಚಾತ್ಯ ಮಕ್ಕಳ ಸಾಹಿತ್ಯ ನಿರಂತರ ಪ್ರವಾಹೋಪಾದಿಯಲ್ಲಿ ಹರಿಯುತ್ತ ಸಾಗಿತು. ಸಾಮಾನ್ಯವಾಗಿ ಚರ್ಚ್ ಪರಂಪರೆಗಳನ್ನು ಒಪ್ಪಿಕೊಂಡು ಬದುಕುತ್ತಿದ್ದ ಪಾಶ್ಚಾತ್ಯ ಸಮಾಜ ರಚಿಸಿದ ಮಕ್ಕಳ ಸಾಹಿತ್ಯದಲ್ಲಿ ಪಾಪ-ಪುಣ್ಯಗಳ ಚರ್ಚೆ ಯಥೇಚ್ಛವಾಗಿ ಸಿಗುತ್ತದೆ. ಸ್ವರ್ಗ-ನರಕಗಳ ಪರಿಕಲ್ಪನೆಗಳೇ ಬರುತ್ತವೆ. ೧೮ನೇ ಶತಮಾನದಲ್ಲಿ ರಚನೆಯಾದ ಐಸಾಕ್ ವ್ಯಾಟ್ಸ್ 'Divine and moral songs for children'ಕೃತಿಯಲ್ಲಿ ಈ ಅಂಶಗಳನ್ನು ಗುರುತಿಸಬಹುದು. ಮಕ್ಕಳ ಸೂಕ್ಷ್ಮ ಸಂವೇದನೆಗೆ ಪ್ರಾಯಶಃ ಈಗಾಗಲೇ ಧಾರ್ಮಿಕ ನೆಲೆಯಲ್ಲಿ ಸೃಷ್ಟಿಯಾಗಿರುವ ಅಭೌತಿಕ ಪರಂಪರೆಗಳೊಡನೆ ಸಂಭಾಷಣೆಗಿಳಿಯುವುದು ಮುಖ್ಯವೆಂದು ತೋರುತ್ತದೆ. ಹಾಗಾಗಿ ಜಗತ್ತಿನ ಎಲ್ಲ ಭಾಷೆಗಳ ಮಕ್ಕಳ ಸಾಹಿತ್ಯವು ಇಂತಹ ಲೋಕವೊಂದನ್ನು ಸೃಷ್ಟಿಸಿದೆ. ಮಕ್ಕಳೊಳಗೆ ಭಯ ಮತ್ತು ಮೌಲ್ಯಗಳೆರಡನ್ನೂ ಒಟ್ಟೊಟ್ಟಿಗೆ ಸೃಷ್ಟಿಸುವ ಈ ಪ್ರಕ್ರಿಯೆ ಮುಂದೆ ಸರಿ ಮತ್ತು ತಪ್ಪುಗಳ ಸ್ಪಷ್ಟ ಮಾರ್ಗವನ್ನು ಕಂಡುಕೊಳ್ಳಲು ಸಹಕಾರಿಯಾಗುತ್ತದೆ.

ಯುರೋಪ್ ರಾಷ್ಟ್ರಗಳ ಯುದ್ಧದಾಹ ಮಕ್ಕಳಲ್ಲಿ 'ಅನಾಥ ಪ್ರಜ್ಞೆ' ಸೃಷ್ಟಿ ಮಾಡಿತು. ತಂದೆಯ ಬರುವಿಕೆಗಾಗಿ ಕಾಯುವ ಮಕ್ಕಳು, ಪರ ಸೈನಿಕರ (ಅನ್ಯರ) ಅತ್ಯಾಚಾರಕ್ಕೆ ತುತ್ತಾಗುತ್ತಿದ್ದ ಮಕ್ಕಳ ಮನಸ್ಥಿತಿಗಳು ಸಾಹಿತ್ಯಿಕ ಸ್ವರೂಪವನ್ನು ಪಡೆದಿವೆ. ಮಕ್ಕಳ ಮಾನಸಿಕ ತಳಮಳಗಳು ಸಾಹಿತ್ಯಿಕ ಘೋಷಣೆಯ ರೂಪತಾಳಿವೆ. ಇನ್ನು ಪ್ರಥಮ ಮತ್ತು ದ್ವಿತೀಯ ಜಾಗತಿಕ ಯುದ್ಧದಲ್ಲಿ ಇಡೀ ಪಾಶ್ಚಾತ್ಯ ಜಗತ್ತು ಇಬ್ಭಾಗವಾಗಿ ಹೋರಾಡಿ ಸೃಷ್ಟಿಸಿದ ಸಾಮಾಜಿಕ ವಿಷಮಸ್ಥಿತಿ ಯಾವ ಬಗೆಯ ಪರಿಸರವನ್ನು ಸೃಷ್ಟಿಸಿತ್ತು ಎಂಬುದನ್ನು ಊಹಿಸಿಕೊಳ್ಳಲು ಸಾಧ್ಯವಿಲ್ಲ. ಯುದ್ಧದ ಘೋರ ಪರಿಣಾಮಗಳಿಂದ ಮಾನಸಿಕವಾಗಿ ಜರ್ಜರಿತಗೊಂಡಿದ್ದ ಮಕ್ಕಳು ಗ್ರಹ, ನಕ್ಷತ್ರ, ಚಂದ್ರ ತಾರೆಯರನ್ನೇ ತಮ್ಮ ಸಂಗಾತಿಗಳೆಂದು ಪರಿಭಾವಿಸಿರಬೇಕು. ಹಾಗಾಗಿ ಅದೇ ಸಂದರ್ಭದಲ್ಲಿ ಜೆಂಟ ಟೈಲರ ಎನ್ನುವ ಕವಿಯತ್ರಿ 'Rhymes for the nursery' ಸಂಗ್ರಹದಲ್ಲಿ 'The star' ಎನ್ನುವ ಶೀರ್ಷಿಕೆ ನೀಡಿ ಬರೆದ ಕಾವ್ಯ 'Twinkle Twinkle Little star'. ಈ ಕಾವ್ಯದಲ್ಲಿ ಬರುವ 'How are wonder'...ಎನ್ನುವ ಮಕ್ಕಳ ಮಾನಸಿಕ ಅಭಿವ್ಯಕ್ತಿಯೇ ಇಲ್ಲಿ ಬೆರಗುಗೊಳಿಸುವಂತದ್ದು. ಹಲವು ವಂಡರ್‌ಗಳನ್ನು ತಮ್ಮ ಬದುಕಿನಲ್ಲಿ ಕಾಣಬೇಕಿರುವ ಮಕ್ಕಳು ಯುದ್ಧ ಎನ್ನುವ ವಂಡರನ್ನು ಕಂಡು ವಾಕರಿಕೆ ಹುಟ್ಟಿ ನೈಜ ವಂಡರ್‌ಗಳನ್ನು ಆಕಾಶದ

ಗ್ರಹ-ನಕ್ಷತ್ರಗಳಲ್ಲಿ ಕಾಣುವ ಪ್ರಯತ್ನ ಮಾಡಿದ್ದಾರೆ. ಹಾಗಾಗಿ ನಿನ್ನ ಎತ್ತರಕ್ಕೆ ಈ ಯುದ್ಧದಾಹಿ ಮಾನವಕುಲ ಏರಲಾರದೆನ್ನುವ ಸ್ಥಾಯಿಭಾವವೊಂದನ್ನು ಆ ಕಾವ್ಯದಲ್ಲಿ ಗುರುತಿಸಬಹುದು.

ಸಾಮಾನ್ಯವಾಗಿ ಇಂಗ್ಲೀಷಿನಲ್ಲಿ ಮಕ್ಕಳ ಕಾವ್ಯವನ್ನು 'ನರ್ಸರಿ ರೈಮ್' (Nursery Rhyme) ಎಂದು ಕರೆಯಲಾಗಿದೆ. "ಸುಮಾರು ೫೦೦ಕ್ಕೂ ಹೆಚ್ಚು ಈ ಬಗೆಯ 'Rhyme'ಗಳು ಬಾಯಿಂದ ಬಾಯಿಗೆ ಹರಿದು ಸಾಂಪ್ರದಾಯಿಕ ಮಕ್ಕಳ ಕಾವ್ಯ ಪರಂಪರೆಯನ್ನು ಸೃಷ್ಟಿ ಮಾಡಿವೆ. ಮಧ್ಯಕಾಲೀನ ಪಾಶ್ಚಾತ್ಯದಲ್ಲಿ ಇವುಗಳ ಉಲ್ಲೇಖ ಬಂದರೂ ೧೬೫೦ರ ಸುಮಾರಿಗೆ ಇವು ಜನಪ್ರಿಯಗೊಂಡವು. ಇಂಗ್ಲಿಷಿನಲ್ಲಿ ರಚನೆಯಾದ ಈ ಸಾಹಿತ್ಯಿಕ ಪ್ರಕಾರ ಯುರೋಪಿನಾದ್ಯಂತ ಪ್ರಸಾರಗೊಂಡು ಸ್ವೀಕೃತವಾದವು. ಮುಂದೆ ಕ್ರಿಶ್ಚಿಯನ್ ಮಿಶನರಿಗಳು ಜಗತ್ತಿನ ಬೇರೆ ಬೇರೆ ದೇಶಗಳಿಗೆ ಧರ್ಮ ಪ್ರಸಾರಕ್ಕೆ ತೆರಳಿ ಸ್ಥಾಪನೆಗೊಂಡಿದ್ದರಿಂದ ಇವು ಹಲವು ರಾಷ್ಟ್ರಗಳಲ್ಲಿ ಶೈಕ್ಷಣಿಕ ಕ್ರಾಂತಿಯನ್ನೇ ಸೃಷ್ಟಿ ಮಾಡಿದ್ದರಿಂದ ಶಿಕ್ಷಣ ಕ್ಷೇತ್ರದಲ್ಲಿ ಮಕ್ಕಳಿಗೆ ಇಷ್ಟವಾಗಿರುವ ಈ ಬಗೆಯ 'ರೈಮ್' ಹಾಡುಗಳಿಗೆ ಜಾಗತಿಕ ಮಟ್ಟದ ಪ್ರಸಾರ ನೀಡಿದವು. ಹಾಗಾಗಿ ಈ ಬಗೆಯ ಹಲವು Rhymes ಭಾರತ ದೇಶವನ್ನು ಪ್ರವೇಶಿಸಿವೆ. ಇತಿಹಾಸಕ್ಕೆ ಸಂಬಂಧಪಟ್ಟ ಕೆಲವು ಪ್ರಸಂಗಗಳು ಯುರೋಪಿನಾದ್ಯಂತ ಚಾಲ್ತಿಯಲ್ಲಿದ್ದ ಗಾದೆಗಳು ಸಾಂಪ್ರದಾಯಿಕ ಆಚರಣೆಗಳು, ನೋವು-ನಲಿವು, ಭೀತಿ, ಸೋಲು-ಗೆಲುವು ಈ ಎಲ್ಲ ಅಂಶಗಳನ್ನು ಆಂಗ್ಲ Rhyme ಗಳಲ್ಲಿ ಗುರುತಿಸಬಹುದು. 'A Little book for Little children' ಎನ್ನುವ ೧೮ನೇ ಶತಮಾನದ ಪ್ರೈಮರ್‌ನಲ್ಲಿ ಈ ಬಗೆಯ ರಚನೆ ಮೊಟ್ಟ ಮೊದಲ ಬಾರಿಗೆ ಮುದ್ರಣಗೊಂಡಿತು. ೧೭೪೪ರಲ್ಲಿ ಬಂದ 'Tommy thumb's song book' ಹಾಗೂ 'Tommy thumbb's pretty song book' ಗಳು ಈ ಬಗೆಯ ರಚನೆಗಳ ಪ್ರತ್ಯೇಕ ಸಂಗ್ರಹಗಳು. ೧೭೮೦ರ ಹೊತ್ತಿಗೆ ಹೆಚ್ಚು ಗಮನ ಸೆಳೆದ ಸಂಗ್ರಹ 'Mother gogoose's melody' ಈ ಕೃತಿ ಮೇಲಿಂದ ಮೇಲೆ ಮುದ್ರಣಗೊಂಡು ಜನಪ್ರಿಯವಾಯಿತು. ವಿಶೇಷವಾಗಿ ಅಮೇರಿಕಾದಲ್ಲಿ ಹೆಚ್ಚು ಪ್ರಚಾರವಾಯಿತು. ಅಷ್ಟೇ ಅಲ್ಲ, ಅಲ್ಲಿ ಈ ರಚನೆಗಳಿಗೆ 'Mother goes' ಶಬ್ದ ಗಟ್ಟಿಯಾಗಿ ನಿಲ್ಲಲು ಕಾರಣವಾಯಿತು. ೧೭೮೪ರಿಂದ ೧೮೧೦ರ ಅವಧಿಯಲ್ಲಿ ಪ್ರಕಟಗೊಂಡ ವಿಸ್ತೃತ ಆವೃತ್ತಿಗಳನ್ನು ಕಂಡ ಜೋಸೆಫ್ ರಿಟ್ಸನ್ನನ ಗ್ಯಾಮರ ಗುಟನ್ಸ್ 'ಗಾರ್ಲೆಂಡ್' ಕೃತಿ ಹಾಗೂ ರಾಬರ್ಟ್ ಛೇಂಬರ್‌ನ ೧೮೨೬ರಲ್ಲಿ ಬಂದ ಹಾಗೂ ನಂತರವೂ ಹಲವಾರು ಆವೃತ್ತಿಗಳನ್ನು ಕಂಡ 'Popular Rhymes of scotland' ಗಮನಾರ್ಹವಾದವು".[೨]

ಒಟ್ಟಾರೆ ಪಾಶ್ಚಾತ್ಯ ಮಕ್ಕಳ ಸಾಹಿತ್ಯ ಹೆಚ್ಚು ಅವಲಂಬಿತವಾಗಿರುವುದು ಕಾವ್ಯ ಪ್ರಕಾರದ ಮೇಲೆ. ಈ ಕಾವ್ಯ ಪ್ರಕಾರವನ್ನು ಜನಪ್ರಿಯಗೊಳಿಸಿದ ಕೀರ್ತಿ ಇಂಗ್ಲೆಂಡಿನ ಆ್ಯನ್ ಮತ್ತು ಜೇನ್ ಎನ್ನುವ ಕವಿಯತ್ರಿಯರಿಗೆ ಸಲ್ಲುತ್ತದೆ. ಇವರು ರಚಿಸಿದ ಹಲವು ಕಾವ್ಯಗಳು ಮಕ್ಕಳೊಳಗೆ ಹೊಸಪ್ರಜ್ಞೆ ಮತ್ತು ಆತ್ಮಸ್ಥೈರ್ಯ ತುಂಬುವಲ್ಲಿ ಸಹಕಾರಿಯಾದವು. ದುರದೃಷ್ಟವಶಾತ್ ಪಾಶ್ಚಾತ್ಯ

ಮಕ್ಕಳ ಸಾಹಿತ್ಯಕ್ಕೆ ಅಪೂರ್ವ ಮರೆಯಲಾಗದ ಕಾಣಿಕೆಯನ್ನು ನೀಡಿದ ಆ್ಯನ್ ಮತ್ತು ಜೇನ್ ಸಹೋದರಿಯರಲ್ಲಿ ಜೇನ್ ಮದುವೆಯಾಗದೇ ಕೇವಲ ೪೦ ವರ್ಷದಲ್ಲೇ ಅನಾರೋಗ್ಯದಿಂದ ಸತ್ತು ಹೋಗುತ್ತಾಳೆ. ಮಕ್ಕಳ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆ ನೀಡಿದ ಆ್ಯನ್‌ಳು ೧೮೧೩ರಲ್ಲಿ ಜೋಸೆಫ್ ಗಿಲ್‌ಬರ್ಡ್ ಎನ್ನುವನೊಂದಿಗೆ ವಿವಾಹವಾದರೂ ದಾಂಪತ್ಯ ಸುಖದಿಂದ ನಡೆಯದೇ ಕೊನೆಯವರೆಗೂ ಆನ್ ಒಂಟಿಯಾಗಿಯೇ ಬದುಕಿದಳು. ಇವರಿಬ್ಬರ ಈ ಕೊಡುಗೆ ಚಿರಸ್ಮರಣೀಯ ಎಂಬುದನ್ನು ''It has been suggest that anna and Jane Tailor were first authors to write a Juvenile classic who were only writers for children they were certainly among the first to combain high literary ability with a precise of the child they were writing for ಎಂದು 'The oxford companion to children Literature'ನಲ್ಲಿ ಉಲ್ಲೇಖಗೊಂಡಿರುವುದನ್ನು ಇಲ್ಲಿ ಗಮನಿಸಬಹುದು".[೩]

೧೭ನೇ ಶತಮಾನದ ಮಧ್ಯಯುಗೀನ ಕಾಲದಲ್ಲಿ ಬಾತುಕೋಳಿಗಳನ್ನು ಕಾಯುತ್ತಿದ್ದ ಹಳ್ಳಿಯ ಜನಪದ ಸಾಮಾನ್ಯ ಸ್ತ್ರೀ ಕಟ್ಟಿದ ಕಥೆಗಳು ಪೌರಾತ್ಯ ಕಥೆಗಳೆಂದೇ ಖ್ಯಾತಿ ಪಡೆದವು. ಈಕೆ ಫ್ರಾನ್ಸ್ ದೇಶದವಳು. ಫ್ರೆಂಚ್ ಭಾಷೆಯಲ್ಲಿ ಬಾತುಕೋಳಿಗಳನ್ನು ಸಾಂಕೇತಿಕವಾಗಿ ಬಳಸಿ ಮಾನವ ಬದುಕಿನ ಜೊತೆಗೆ ವಿಶಿಷ್ಟ ಅನುಸಂಧಾನತೆಗಿಳಿಯುವ ಈಕೆಯ ಕಥೆಗಳು ಆಧುನಿಕೋತ್ತರ ಇಂಗ್ಲಿಷ್ ಭಾಷೆಯಲ್ಲಿ ಅನುವಾದಗೊಂಡು 'History's of tails of past times' ಎಂಬ ಹೆಸರಿನಲ್ಲಿ ೧೭೨೯ರಲ್ಲಿ ರೂಪಾಂತರ ಪಡೆದವು. ಈ ಕಥೆಗಳ ೨ನೇ ಭಾಗವು ಶೇಕ್ಸಪಿಯರನು ಮಕ್ಕಳಿಗಾಗಿ ಬರೆದ ಹಾಡುಗಳು ಎನ್ನುವ ರೀತಿಯಲ್ಲಿ ಪಾಶ್ಚಾತ್ಯ ಮಕ್ಕಳ ಸಾಹಿತ್ಯ ಕ್ಷೇತ್ರ ಸ್ವೀಕರಿಸಿತು. ಈಕೆ ಮೌಖಿಕ ಪರಂಪರೆಯ ಮೂಲಕ ಕಟ್ಟಿದ ಕಥೆಗಳು ಹಾಡಾಗಿ ಪರಿವರ್ತನೆಗೊಂಡು

''Old mother goose
when she wanted to wander
would ride through the air
on a very tine gander''[೪]

ಎಂದು ರೂಪಾಂತರಗೊಂಡವು. ಆಕೆಯಿಂದ ಪ್ರೇರಣೆಗೊಂಡು ಖ್ಯಾತಿ ಪಡೆದ 'Mother hubbard' ಎನ್ನುವ ಮಕ್ಕಳ ಕಾವ್ಯ

Old mother hubbard
went to the cupboard
to fetch her poor dog a bone[೫]

ಎಂದು ಪ್ರಕಟವಾಯಿತು. ಇದನ್ನು ೧೮೦೫ರಲ್ಲಿ ಜಾನ್ ಹ್ಯಾರಿಸ್ ಪ್ರಕಟಿಸಿದ. ಪಾಶ್ಚಾತ್ಯ ಮಕ್ಕಳಕಾವ್ಯ ಪರಂಪರೆ ಉಲ್ಲೇಖಿಸುವ 'Mother' ಸಾಮಾನ್ಯವಾಗಿ ಹಳ್ಳಿಗಾಡಿನ ವೃದ್ಧ ಮಹಿಳೆಯನ್ನು ಕುರಿತು ಸಂಬೋಧಿಸುವ ಶೈಲಿಯದ್ದಾಗಿದೆ. ಪಾಶ್ಚಾತ್ಯ ಮಕ್ಕಳ ಜಗತ್ತು ಸಾಮಾನ್ಯವಾಗಿ

ಕೌಟುಂಬಿಕ ಪ್ರೀತಿಯಿಂದ ವಂಚಿತವಾಗಿರುವ ಲೋಕ ಎಂಬುದನ್ನು ನಾವು ಇಂದಿಗೂ ಗಮನಿಸಬಹುದು. ಹೀಗಾಗಿ ಮಕ್ಕಳಿಗಾಗಿ ರಚನೆಯಾದ ಪಾಶ್ಚಾತ್ಯ ಕಥೆ ಮತ್ತು ಕಾವ್ಯ ಜನಪದೀಯ ಪರಂಪರೆ 'Mother'ಎನ್ನುವ ಹೆಸರಿನಲ್ಲಿ ಕಾಣೆಯಾಗಿರುವ ಸ್ತ್ರೀ ಪ್ರೀತಿಯನ್ನು ನೀಡುವ ಪ್ರಯತ್ನಶೀಲತೆ ಸೃಷ್ಟಿಗೆ ಕೈಹಾಕಿದೆ. ಈ ಸ್ಥಿತ್ಯಂತರ ಬ್ರೇಕ್ವನನ್ನು ಬಿಟ್ಟಿಲ್ಲ.

> Who sat and watched my intant head,
> when sleeping on my credle bed.
> when tears of sweet affectionate said my mother

ಎಂದು ಮಕ್ಕಳಿಗೂ ಮತ್ತು ಹಿರಿಯರಿಗೂ ಇಷ್ಟವಾಗುವ ಕಾವ್ಯವೊಂದನ್ನು ಕಟ್ಟಿದ್ದಾನೆ. ಮುಂದುವರೆದು ಬ್ರೆಕ್ಸ್,

> When pain and sikness
> maid me crie
> who gaged open my heavy eye
> and wept for tear
> that i should die my mother

ಎಂದು ಕೌಟುಂಬಿಕ ಮಹೋನ್ನತ ಪ್ರೀತಿಯೊಂದನ್ನು ಸಾರುತ್ತ ಸಾಗುತ್ತಾನೆ

ಚಿಮ್ಮುವ ಕಾರಂಜಿಗಳು ಜೀವನೋತ್ಸಾಹವನ್ನು ಮೆರೆಯಬೇಕು. ಉತ್ಸಾಹವಿಲ್ಲದ ಬದುಕು ವ್ಯರ್ಥ. ಉತ್ಸಾಹ ಬದುಕಿನ ಅನನ್ಯತೆಗಳ ಹುಡುಕಾಟದಲ್ಲಿ ತೊಡಗುವಂತೆ ಪ್ರೇರೇಪಿಸುತ್ತದೆ. ಮಕ್ಕಳ ಬದುಕು ಉತ್ಸಾಹ ಮತ್ತು ಉಲ್ಲಾಸಭರಿತವಾಗಿರಬೇಕು. ಹಾಗಿದ್ದಾಗ ಮಾತ್ರ ಜೀವನಾನ್ವೇಷಣೆಯ ಹೊಸ ಸಾಧ್ಯತೆಗಳನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ. ಬೆಳಿಗ್ಗೆನಿಂದ ಸಂಜೆಯವರೆಗೆ ಮೇಲೇರಿ ಕೆಳಗಿಳಿಯುವ, ಕೆಳಗಿಳಿದು ಮೇಲೆರುವ ಕಾರಂಜಿಗಳ ಚಿಮ್ಮುವಿಕೆಯ ಉತ್ಸಾಹವನ್ನು ಜಿಮ್ ಟೈಲರ್ 'Upword and down word from morn till night' ಎಂದು ತನ್ನ 'fountain' ಎನ್ನುವ ಕಾವ್ಯದಲ್ಲಿ ಹೇಳುತ್ತಾನೆ.

ಸಮಾಜದಲ್ಲಿ ಘಟಿಸುವ ಕೆಲ ಆರೋಗ್ಯ ಸಂಬಂಧಿ ಪ್ರಕರಣಗಳಿಗೂ ಪಾಶ್ಚಾತ್ಯ ಮಕ್ಕಳ ಕಾವ್ಯಕ್ಷೇತ್ರ ಸ್ಪಂದಿಸಿರುವ ಉದಾಹರಣೆಯುಂಟು. ವೈದ್ಯಕೀಯ ವಿಜ್ಞಾನ ಕ್ಷೇತ್ರ ಪ್ರವರ್ಧಮಾನಕ್ಕೆ ಬಾರದಿದ್ದ ಕಾಲಘಟ್ಟದಲ್ಲಿ ಹಲವಾರು ಸಾಂಕ್ರಾಮಿಕ ರೋಗಗಳು ಊರಿಗೆ ಊರನ್ನೇ ಬಲಿತೆಗೆದುಕೊಳ್ಳುತ್ತಿದ್ದ ಪ್ರಸಂಗಗಳಿದ್ದವು. ಪ್ಲೇಗ್ ಮತ್ತು ಸಿಡುಬುಗಳು ಒಂದು ಕಾಲದಲ್ಲಿ ಒಬ್ಬರಿಂದ ಒಬ್ಬರಿಗೆ ಹರಡುವ ಸಾಂಕ್ರಾಮಿಕ ರೋಗಗಳಾಗಿದ್ದವು. ಸಿಡುಬಿನ ಕಾಯಿಲೆಗೆ ತುತ್ತಾಗುವ ಮನುಷ್ಯ ಕೀವು ತುಂಬಿದ ದುಂಡನೆಯ ಗುಳ್ಳೆಗಳು ಕಾಣಿಸಿಕೊಂಡು ದೇಹಪೂರ್ತಿ ಹಬ್ಬಿ ಆತ ಸೀನಿ–ಸೀನಿ, ನರಳಿ–ನರಳಿ ಸಾಯುತ್ತಿದ್ದ, ಆತನ ಸೀನುವಿಕೆಯಿಂದ ಹೊರಬರುವ ವೈರಾಣು ಮತ್ತೊಬ್ಬನಿಗೆ ತಾಕಿ ಆತನೂ ಮತ್ತದೆ ಕಾಯಿಲೆಗೆ ತುತ್ತಾಗಿ ಸಾಯುವ ಜಾಗತಿಕ

ಸನ್ನಿವೇಶಗಳಿದ್ದವು. ಇಂತಹ ಸನ್ನಿವೇಶಗಳು ಪಾಶ್ಚಾತ್ಯ ಮಕ್ಕಳ ಕಾವ್ಯದಲ್ಲಿ ಗಮನಾರ್ಹ ಸ್ಥಾನ ಪಡೆದಿರುವುದನ್ನು ಕಾಣಬಹುದು. 'Ring a Ring o Roses' ಎಂಬ ಕಾವ್ಯ ಈ ನೆಲೆಯಲ್ಲಿ ಸೃಷ್ಟಿಯಾದದ್ದಾಗಿದೆ ಎನ್ನುವುದು ನನ್ನ ಬಲವಾದ ನಂಬಿಕೆ. ಏಕೆಂದರೆ ಸಾಮಾನ್ಯವಾಗಿ ಪ್ಲೇಗ್ ಮತ್ತು ಸಿಡುಬು ಕಾಯಿಲೆಗಳು ೧೯ನೇ ಶತಮಾನದಲ್ಲಿ ಉಲ್ಬಣಗೊಂಡಂತವುಗಳು. ಈ ಕಾವ್ಯವು ೧೯ನೇ ಶತಮಾನದಲ್ಲಿ ರಚಿತಗೊಂಡುದಾಗಿದೆ. ಮಕ್ಕಳ ಆಟದ ಸಂದರ್ಭದಲ್ಲಿ ಹಾಡಲ್ಪಡುವ ಈ ಹಾಡಿನ ಸನ್ನಿವೇಶವನ್ನು ಗಮನಿಸಿದರೆ ಈ ಸಾಧ್ಯತೆ ನಿಶ್ಚಳವಾಗಿದೆ. ಈ ಹಾಡನ್ನು ಹಾಡುತ್ತ ಮಕ್ಕಳು ದುಂಡಾಗಿ ಕೂಡುತ್ತಾರೆ. ದುಂಡಾಗಿ ಕೂತ ಮಕ್ಕಳು ಸರ್ಕಲ್‌ಅನ್ನು ಸುತ್ತುತ್ತಾರೆ. ಸುತ್ತಿ ಸುತ್ತಿ ಸಾಕಾದ ಮೇಲೆ ಸುತ್ತುಹಾಕುತ್ತಿದ್ದ ಮಗು ಸೀನಿ ಸೀನಿ ಸತ್ತಂತೆ ಅಭಿನಯಿಸುತ್ತದೆ. ಸತ್ತಂತೆ ನಟಿಸುವ ಆ ಮಗುವನ್ನು ಉಳಿದ ಮಕ್ಕಳೆಲ್ಲರೂ ಎತ್ತಿಕೊಂಡು ದೂರದಲ್ಲಿ ಮಲಗಿಸಿ ಬರುತ್ತಾರೆ. ಮತ್ತೆ ಆಟ ಮುಂದುವರೆದು ಆಡುತ್ತಿದ್ದ ಎಲ್ಲರೂ ಹಂತಹಂತವಾಗಿ ಅದೇ ಸ್ಥಿತಿಯನ್ನು ತಲುಪುತ್ತಾರೆ. ಆ ಸಂದರ್ಭದಲ್ಲಿ,

A tishoo A tishoo
we all falldown

ಎಂದು ಕೊನೆಗೊಳ್ಳುತ್ತ ರೋಗದ ವಿರುದ್ಧ ಸೆಣಸುವ, ಸೆಣಸುತ್ತಲೇ ಬದುಕುವ ಅನಿವಾರ್ಯ ವಾತಾವರಣ ಇರುವುದನ್ನು ಸಾರುತ್ತದೆ.

ಥಾಮಸ್ ರೆವನ್‌ಕ್ರಾಫ್ಟನು ಸಂಗ್ರಹಿಸಿದ 'Due teromelia' ಎನ್ನುವ ಸಂಗ್ರಹದಲ್ಲಿ ಸಂಗೀತ ಪಾಠದೊಂದಿಗೆ ಕಾಣಿಸಿಕೊಂಡಿರುವ 'The miller and his mery old wife' ಎಂಬ ಶೀರ್ಷಿಕೆಯ ಒಂದು ಕಾವ್ಯ ಸಾಕಷ್ಟು ಕುತೂಹಲವನ್ನು ಸೃಷ್ಟಿಮಾಡಿರುವ ಮಕ್ಕಳ ಕಾವ್ಯ. ಈ ಕಾವ್ಯದಲ್ಲಿ ಇಲಿ ಮತ್ತು ರೈತನ ಚಿತ್ರಣಗಳು ಬರುತ್ತವೆ. ಇಲಿಯನ್ನು ಈ ಕಾವ್ಯದಲ್ಲಿ ರೈತನ ಮಿತ್ರನೆಂದು ಚಿತ್ರೀಕರಿಸಲಾಗಿದೆ. ಈ ಅಂಶ ಸಾಕಷ್ಟು ಕುತೂಹಲವನ್ನು ಮೂಡಿಸುತ್ತದೆ. ಇಲಿ ಮತ್ತು ಹೆಗ್ಗಣಗಳು ರೈತನಿಗೆ ಮಿತ್ರ ಹೇಗೆ ಎನ್ನುವ ಪ್ರಶ್ನೆ ನಿರಂತರ ಕಾಡುತ್ತದೆ. ಮೂಲದಲ್ಲಿ ಈ ಕಾವ್ಯ ಇಲಿಗಳ ಬಾಲಗಳು ತುಂಡಾಗುವ ಉಲ್ಲೇಖವನ್ನು ಹೊಂದಿದೆ. ನರ್ಸರಿ ಕಾವ್ಯಗಳಲ್ಲಿ ಈ ಬಗೆಯ ಹಿಂಸಾತ್ಮಕ ಚಿತ್ರಣಗಳು ಇರಬಾರದೆನ್ನುವ ಕಾರಣಕ್ಕಾಗಿ ಜಫ್ರೀ ಹಾಲ್ ಎನ್ನುವ ಶಿಕ್ಷಕ ಕವಿ ಇಲಿಯನ್ನು ರೈತಮಿತ್ರ ಮತ್ತು ರೈತನ ಹೆಂಡತಿಯೆಂದು ಚಿತ್ರೀಕರಿಸಿಬಿಡುತ್ತಾನೆ. ಸಾಂದರ್ಭಿಕವಾಗಿ ಹಾಲ್‌ನ ಈ ಕಾವ್ಯಾನುಸಂಧಾನತೆಯನ್ನು ಒಪ್ಪಿಕೊಳ್ಳಬಹುದಾಗಿದ್ದರೂ ರೈತನಿಗೆ ಜೀವ ಕಂಟಕವಾಗಿರುವ ಇಲಿಗಳ ಬಾಲ ಕತ್ತರಿಸಿ ಬುದ್ಧಿ ಕಲಿಸಿ ಓಡಿಸುವ ಭಾವವೊಂದು ಕಾಣೆಯಾಗಿದೆ. ಅದೇನೇ ಇರಲಿ ಈ ಕಾವ್ಯ ಮಕ್ಕಳ ಮೇಲೆ ಗಾಢ ಪರಿಣಾಮ ಉಂಟು ಮಾಡಿದೆ.

ಮೌಖಿಕ ಪರಂಪರೆಯ ಜನಪದ ಕವಿಯೊಬ್ಬ 'The ant and the cricket' ಎನ್ನುವ ಕಾವ್ಯದಲ್ಲಿ;

A silly young cricket
Accustomed to sing
Through the warm, sunny month of gay
summer and spring
The degan to began to complain, when
he found that at home
his cupboard was MJ and winter was come.[೬]

ಇರುವೆ ಮತ್ತು ಮಿಡತೆಗಳ ಜೀವನ ಚಿತ್ರಣವನ್ನು ಕಟ್ಟಿಕೊಡುವ ಮೂಲಕ ಅನಾಮಧೇಯ ಜನಪದ ಕವಿಯೊಬ್ಬ ಇರುವೆ ಶ್ರಮಜೀವಿಯಾಗಿದ್ದರೆ, ಮಿಡತೆ ಉದಾಸೀನತೆಯ ಸಂಕೇತವಾಗಿ ನಿಲ್ಲುತ್ತದೆ. ಸುಗ್ಗಿಯ ಕಾಲದಲ್ಲಿ ಆಹಾರ ಸಂಗ್ರಹ ಮಾಡದೇ ಪಶ್ಚಾತ್ತಾಪಪಟ್ಟು ಭಿಕ್ಷೆ ಬೇಡಿ ಬದುಕುವ ಹೀನಾಯ ಸ್ಥಿತಿಯನ್ನು ತಂದುಕೊಳ್ಳುತ್ತದೆ. ಮನುಷ್ಯನಾದವನು ಸಹ ಯಾವ ಯಾವ ಸಂದರ್ಭದಲ್ಲಿ ಏನು ಮಾಡಬೇಕು, ಆ ಕರ್ತವ್ಯವನ್ನು ಪೂರೈಸಿದಾಗ ಮಾತ್ರ ಸುಖದಿಂದಿರಲು ಸಾಧ್ಯ ಎಂಬ ಸಂದೇಶ ಸಾರುತ್ತದೆ. ಪಾಶ್ಚಾತ್ಯ ಸಂದರ್ಭದಲ್ಲಿ ಮಕ್ಕಳ ಸಾಹಿತ್ಯ ಎನ್ನುವ ಈ ಅಧ್ಯಾಯ ಪಾಶ್ಚಾತ್ಯ ಮಕ್ಕಳ ಕಾವ್ಯದಲ್ಲಿ ಐತಿಹಾಸಿಕ ಪ್ರಜ್ಞೆಗಳನ್ನು ಒಳಗೊಂಡ ಹಾಗೆ ಸಾಮಾಜೀಕರಣಗೊಂಡಿರುವ ಮಕ್ಕಳ ಕಾವ್ಯಗಳನ್ನು ಬಳಸಿಕೊಂಡು ಲಭ್ಯ ಮಾಹಿತಿಗಳನ್ನು ಆಧರಿಸಿ ಪ್ರಾತಿನಿಧಿಕ ಸ್ವರೂಪದ ಹಿನ್ನೆಲೆಯಲ್ಲಿ ವಿವರಿಸುವ ಪ್ರಯತ್ನ ಮಾಡಲಾಗಿದೆ.

## ೨.೨. ಭಾರತೀಯ ಸಂದರ್ಭದಲ್ಲಿ ಮಕ್ಕಳ ಸಾಹಿತ್ಯ

ವೈವಿಧ್ಯಪೂರ್ಣ ಭಾರತೀಯ ಭಾಷೆಗಳು ಮಕ್ಕಳ ಸಾಹಿತ್ಯಕ್ಕೆ ಸಂಬಂಧಿಸಿದಂತೆ ತಮ್ಮದೇ ಮಹತ್ವಪೂರ್ಣ ಪ್ರಾಮುಖ್ಯತೆಯನ್ನು ನೀಡುತ್ತಾ ಬಂದಿವೆ. ಕವನ, ಕಥೆ, ನಾಟಕ ಮತ್ತು ಕಾದಂಬರಿ ಪ್ರಕಾರಗಳು ರಚನೆಯಾಗಿವೆ. ಅಸ್ಸಾಮಿ, ಉರ್ದು, ಒರಿಯಾ, ಕನ್ನಡ, ಕಾಶ್ಮೀರ, ಕೊಂಕಣಿ, ಗುಜರಾತಿ, ತಮಿಳು, ತೆಲುಗು, ಪಂಜಾಬಿ, ಬೆಂಗಾಲಿ, ಮರಾಠಿ, ಮಲಯಾಳಿ, ಸಂಸ್ಕೃತ, ಸಿಂಧಿ ಮತ್ತು ಹಿಂದಿ ಭಾಷೆಗಳಲ್ಲಿ ಮಕ್ಕಳ ಸಾಹಿತ್ಯದ ವಿವಿಧ ಸಾಹಿತ್ಯಿಕ ಪ್ರಕಾರಗಳು ಹೇರಳವಾಗಿ ಲಭ್ಯವಿವೆ. ಒಂದು ದೇಶದ ಇತಿಹಾಸ ಮಕ್ಕಳಿಗೆ ಪ್ರಾಮುಖ್ಯತೆ ಕೊಡದೆ ಹೋದರೆ ಆ ದೇಶ ಬೌದ್ಧಿಕ ಗುಲಾಮಗಿರಿಗೆ ಈಡಾಗುತ್ತದೆ. ಮಕ್ಕಳು ದೇಶದ ಜೀವನಾಡಿ. ಮಕ್ಕಳ ಅಭಿವೃದ್ಧಿಯ ಮೇಲೆ ದೇಶದ ಅಭಿವೃದ್ಧಿ ನಿಂತಿರುತ್ತದೆ ಎನ್ನುವ ಮಾತುಗಳನ್ನು ಒಪ್ಪುವುದಾದರೆ, ಮಕ್ಕಳ ಮಾನಸಿಕ ಮತ್ತು ಬೌದ್ಧಿಕ ವಿಕಾಸಕ್ಕೆ ಅವರದೇ ಮನಸ್ಥಿತಿ ಮತ್ತು ಅಭಿಲಾಷೆಗಳನ್ನು ವ್ಯಕ್ತಪಡಿಸುವ ಮಕ್ಕಳೇ ಸ್ವಂತ ರಚಿಸಿದ ಮತ್ತು ಮಕ್ಕಳಿಗಾಗಿ ದೊಡ್ಡವರು ರಚಿಸಿದ ಸಾಹಿತ್ಯದ ನಿರ್ಮಾಣ ಅತಿ ಅಗತ್ಯ. ಮಕ್ಕಳ ಸಾಹಿತ್ಯ ಕುರಿತು ರಾಷ್ಟ್ರ ಮತ್ತು ವಿಶ್ವ ಮಟ್ಟದಲ್ಲಿ ಇಂದು ಚರ್ಚೆಗಳು ನಡೆಯುತ್ತಿರುವುದು ಸ್ವಾಗತಾರ್ಹ ಬೆಳವಣಿಗೆ. ಜಾಗತಿಕ ಮಟ್ಟದಲ್ಲಿ ಏರ್ಪಟ್ಟಿರುವ ಈ ಪ್ರಕ್ರಿಯೆ ಮಕ್ಕಳ ಸಾಹಿತ್ಯ ಅನುಸರಿಸಬೇಕಾದ ಸಿದ್ಧಾಂತಕ್ಕೆ ಸ್ಪಷ್ಟತೆಯನ್ನು ಪ್ರಾಪ್ತ ಮಾಡುತ್ತಿವೆ. ಭಾರತದ ಹಲವಾರು ರಾಜ್ಯಗಳು ಮಕ್ಕಳ ಅಭಿವೃದ್ಧಿ

ಮತ್ತು ಸಾಹಿತ್ಯ ರಚನೆಗಾಗಿ ಅಕಾಡೆಮಿಗಳನ್ನು, ಕಲ್ಯಾಣ ಇಲಾಖೆಗಳನ್ನು ತೆರೆದಿವೆ. ಉದಾಹರಣೆಗೆ ಹೇಳುವುದಾದರೆ ಕೊಲ್ಕತ್ತಾದ ರವೀಂದ್ರ ಬಾಲಭವನ, ಪುಣೆಯ ಬಾಲಮಂಡಲ ಮತ್ತು ಬಾಲವಿಕಾಸ ಸಂಸ್ಥೆಗಳು, ಮದರಾಸಿನ ಕನ್ನಮರಾ ಲೈಬ್ರರಿ, ಹೈದ್ರಬಾದಿನ ಬಾಲ ಅಕಾಡೆಮಿ ಕರ್ನಾಟಕದ ಬಾಲವಿಕಾಸ ಅಕಾಡೆಮಿ, ಶಿಶುಕಲ್ಯಾಣ ಇಲಾಖೆ ಮುಂತಾದವುಗಳನ್ನು ಹೆಸರಿಸಬಹುದು. ಈ ಎಲ್ಲ ಸಂಗತಿಗಳ ಮಧ್ಯ ಯಾವುದೇ ಭಾಷೆಯವರಲ್ಲೂ ಮಕ್ಕಳ ಸಾಹಿತಿಗಳಿಗೆ ಸಾಕಷ್ಟು ಮನ್ನಣೆ, ಪ್ರೋತ್ಸಾಹ ಸಿಗದಿರುವುದು ವಿಷಾದದ ಸಂಗತಿ. ಇಂತಹ ಸ್ಥಿತ್ಯಂತರಗಳ ಮಧ್ಯ ಮಕ್ಕಳ ಸಾಹಿತ್ಯ ಹೇರಳವಾಗಿ ರಚನೆಯಾಗುತ್ತಿರುವುದು, ಬೆಳೆಯುತ್ತಿರುವುದು ಹರ್ಷದಾಯಕ. ಮಕ್ಕಳ ಸಾಹಿತ್ಯದ ಐತಿಹಾಸಿಕ ಹಿನ್ನೆಲೆಯನ್ನು ವಿವರಿಸುವ ಈ ಅಧ್ಯಾಯವು ಮುಖ್ಯವಾಗಿ ಭಾರತೀಯ ಸಂದರ್ಭದಲ್ಲಿ ಮಕ್ಕಳ ಸಾಹಿತ್ಯದಲ್ಲಾಗಿರುವ ರಚನೆ, ಬೆಳವಣಿಗೆಗಳನ್ನು ಕುರಿತು ವಿವರಿಸುವ ಅಧ್ಯಾಯವಾಗಿದೆ. ಮೇಲೆ ಹೇಳಿರುವಂತೆ ಸುಮಾರು ಹದಿನಾರು ಭಾರತದ ವಿವಿಧ ಭಾಷೆಗಳಲ್ಲಿ ಮಕ್ಕಳ ಸಾಹಿತ್ಯ ರಚನೆಯಾಗಿರುವ ಸಂಗತಿಯನ್ನು ನಿರುಪಮಾರವರು ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಿಸಿರುವ 'ಭಾರತೀಯ ಮಕ್ಕಳ ಸಾಹಿತ್ಯ ಸಮೀಕ್ಷೆ' ಕೃತಿಯಲ್ಲಿ ವಿವರಣಾತ್ಮಕ ದಾಖಲಾತಿಗಳನ್ನು ನೀಡುತ್ತಾರೆ. ಆಧುನಿಕ, ಆಧುನಿಕೋತ್ತರ ಭಾರತದಲ್ಲಿ ರಚನೆಯಾದ ಮಕ್ಕಳ ಸಾಹಿತ್ಯದಲ್ಲಿ ಆಧುನಿಕ ಕಾಲ ವೈಜ್ಞಾನಿಕ, ವೈಚಾರಿಕ ಸಾಹಿತ್ಯ ಸೃಷ್ಟಿಗೆ ಮಹತ್ವವನ್ನು ನೀಡಿದರೆ ಆಧುನಿಕ ಪೂರ್ವ ಮಕ್ಕಳ ಸಾಹಿತ್ಯ ಪೌರಾಣಿಕ ಮತ್ತು ಐತಿಹಾಸಿಕ ಸಂಗತಿಗಳಿಗೆ ಮಹತ್ವ ನೀಡಿರುವುದನ್ನು ಗುರುತಿಸಬಹುದು. ಪ್ರಸ್ತುತ ಅಧ್ಯಾಯವು ಉತ್ತರ ಭಾರತದ ಅಸ್ಸಾಮಿ ಮತ್ತು ಮರಾಠಿ, ದಕ್ಷಿಣ ಭಾರತದ ತಮಿಳು, ತೆಲುಗು ಮತ್ತು ರಾಷ್ಟ್ರೀಯ ಭಾಷಾ ಸ್ಥಾನಮಾನವನ್ನು ಪಡೆದ ಹಿಂದಿ ಭಾಷೆಗಳನ್ನು ಪ್ರಾತಿನಿಧಿಕವಾಗಿ ಆಯ್ದುಕೊಂಡು ಭಾರತೀಯ ಸಂದರ್ಭದ ಮಕ್ಕಳ ಸಾಹಿತ್ಯದ ವಿವರಣೆ ನೀಡುವ ಪ್ರಯತ್ನವನ್ನು ಒಳಗೊಂಡಿದೆ.

**ಅಸ್ಸಾಮಿ ಭಾಷೆಯಲ್ಲಿ ಮಕ್ಕಳ ಸಾಹಿತ್ಯ**

ಕನ್ನಡ ಸಾಹಿತ್ಯ ಚರಿತ್ರೆಯನ್ನು ವಿಭಾಗಿಸಿರುವ ರೀತಿಯಲ್ಲಿ ಅಸ್ಸಾಮಿ ಸಾಹಿತ್ಯವನ್ನು ಪ್ರಮುಖವಾಗಿ ನಾಲ್ಕು ಭಾಗವಾಗಿ ವರ್ಗೀಕರಿಸಲಾಗಿದೆ. ಕ್ರಿ.ಶ. ೧೨೦೦ ರಿಂದ ೧೪೫೦ ಮೊದಲ ಯುಗವಾಗಿದ್ದು ಇದಕ್ಕೆ ವೈಷ್ಣವ ಪೂರ್ವಯುಗವೆಂದು ಕರೆಯಲಾಗಿದೆ. ಕ್ರಿ.ಶ. ೧೪೫೦ ರಿಂದ ೧೬೫೦ರವರೆಗಿನ ಎರಡನೇ ಯುಗವನ್ನು ವೈಷ್ಣವ ಯುಗವೆಂದು, ೧೬೫೦ ರಿಂದ ೧೮೩೦ರವರೆಗಿನ ಯುಗವನ್ನು ಮಧ್ಯ ಅಸ್ಸಾಮಿ ಅಥವಾ ವೈಷ್ಣವ ನಂತರದ ಯುಗವೆಂದು, ೧೮೩೦ ರಿಂದ ಆರಂಭವಾದ ಯುಗವನ್ನು ಆಧುನಿಕ ಅಸ್ಸಾಮಿ ಸಾಹಿತ್ಯಯುಗವೆಂದು ವರ್ಗೀಕರಿಸಲಾಗಿದೆ.

ವೈಷ್ಣವಪೂರ್ವ ಅಸ್ಸಾಮಿ ಸಾಹಿತ್ಯದ ಯುಗ(ಕ್ರಿ.ಶ. ೧೨೦೦-೧೪೫೦)ದಲ್ಲಿ ಅಹೋಂ ಮತ್ತು ಕೂಚ್ ದೊರೆಗಳು ಮಾಟ, ಮಂತ್ರ, ತಂತ್ರಗಳಿಗೆ ಪ್ರಾಮುಖ್ಯತೆ ಕೊಟ್ಟಿದ್ದರಿಂದ ಮಾನವ ಸ್ವಭಾವದ ವ್ಯತಿರಿಕ್ತ ಆರಾಧನಾ ಪದ್ಧತಿಗಳನ್ನು ಬೆಳೆಸಲು ಪ್ರೋತ್ಸಾಹ ನೀಡಿದ್ದರಿಂದ

ಅಸ್ಸಾಮಿ ಜನ ಧಾರ್ಮಿಕ ಕಠೋರ ನೀತಿಗಳಿಂದ ಬೇಸತ್ತು ಆ ಪಂಥಗಳಿಂದ ದೂರವಾಗಿ ಧಾರ್ಮಿಕ ವಿಮೋಚನೆಗಾಗಿ ಹಾತೊರೆಯುತ್ತಿದ್ದ ಸಂದರ್ಭ ಏರ್ಪಟ್ಟಿತು. ಸಾಮಾನ್ಯವಾಗಿ ತಾಂತ್ರಿಕ ಮತ್ತು ಶಕ್ತಿ ಪೂಜಾ ಆರಾಧನಾ ಪದ್ಧತಿಗಳಿದ್ದುದರಿಂದ ಆ ಕಾಲಘಟ್ಟದಲ್ಲಿ ರಚನೆಯಾದ ಅಸ್ಸಾಮಿ ಸಾಹಿತ್ಯ ಅಂಥದ್ದೇ ಅವೈಚಾರಿಕ ಸಾಹಿತ್ಯ ರಚನೆಯಲ್ಲಿ ತೊಡಗಿರಲಿಕ್ಕೂ ಸಾಕು ಮತ್ತು ಮಕ್ಕಳಿಗೆ ಸಂಬಂಧಿಸಿದಂತೆ 'ಬಾಲಬಲಿ' ಪದ್ಧತಿಯನ್ನು ಅನುಸರಿಸಿ ಮಕ್ಕಳೊಳಗೆ ಭಯಗ್ರಸ್ತ ವಾತಾವರಣವನ್ನೂ ಸೃಷ್ಟಿಸಿರಲು ಸಾಕು. ಇಂಥ ಸಂದರ್ಭದಲ್ಲಿ ಆರಂಭವಾದುದೇ ವೈಷ್ಣವಯುಗ.

ವೈಷ್ಣವಯುಗ (ಕ್ರಿ.ಶ. ೧೪೫೦–೧೬೫೦)ದ ಜನಕ ಶಂಕರದೇವ. ಶಂಕರದೇವ "ಸಮಾಜದಲ್ಲಿನ ಉಚ್ಚ–ನೀಚ ವರ್ಗಗಳೆಂಬ ಭಾವನೆಯನ್ನು ತೊಡೆದುಹಾಕಿ ಕೇವಲ ಮಾನವ ಸಹಜವಾದ ಪ್ರೇಮ–ವಾತ್ಸಲ್ಯ, ಭಕ್ತಿ–ಭಾವಗಳಿಂದ ಭಗವಂತನಾದ ಕೃಷ್ಣನನ್ನಾರಾಧಿಸುವ ಬನ್ನಿ ಎಂದು ಕರೆಯಿತ್ತು".[೭] ಈಕರೆಗೆ ಓಗೊಟ್ಟ ಜನ ವೈಷ್ಣವರಾಗಿ ಧರ್ಮಾಂತರಗೊಂಡರು. ಶಂಕರದೇವ ಮಕ್ಕಳಿಗಾಗೇ ವಿಶೇಷ ಸಾಹಿತ್ಯ ಪ್ರಕಾರವನ್ನು ರಚಿಸದಿದ್ದರೂ ಆತನ ಕಾನ್‌ಬೋವ, ಭೀಮಚರಿತ, ಶಿವಲೀಲಾ, ಕೀರ್ತನ ಘೋಷಾ ಕೃತಿಗಳು ಸರಳವಾಗಿ ಮಕ್ಕಳಿಗೆ ಅರ್ಥವಾಗುವ ಭಾಷೆಯಲ್ಲಿ ರಚಿತವಾದುದರಿಂದ ಅವು ಅಸ್ಸಾಂ ಪ್ರಾಂತದಲ್ಲಿ ಲೀಲಾಜಾಲವಾಗಿ ಇಂದಿಗೂ ಮಕ್ಕಳ ಬಾಯಲ್ಲಿ ಹರಿದಾಡುತ್ತಿವೆ. ಬಹುಶಃ ಅಸ್ಸಾಂ ಮಕ್ಕಳ ಸಾಹಿತ್ಯದ ಉಗಮ, ವಿಕಾಸಗಳನ್ನು ಇಲ್ಲಿಂದಲೇ ಆರಂಭಿಸಬಹುದು. ಆದಾಗ್ಯು ಇದನ್ನು ನಾವು ತಾಂತ್ರಿಕ ವರ್ಗೀಕರಣವೆಂದೇ ಪರಿಭಾವಿಸಬೇಕು. ಏಕೆಂದರೆ ಯಾವುದೇ ಭಾಷೆಯ ಸಾಹಿತ್ಯದ ಹುಟ್ಟಿನ ಮೂಲ ಬೀಜ ಆ ಭಾಷೆಯ ಜನಪದ ಸಾಹಿತ್ಯದಲ್ಲಿರುತ್ತದೆ. ಹಾಗೆ ನೋಡಿದರೆ ಪ್ರಾಚೀನ ಅಸ್ಸಾಮಿ ಜಾನಪದ ಸಾಹಿತ್ಯ ಸೃಷ್ಟಿಸಿರುವ ಲಾವಣಿ ಪದಗಳು ಹಾಗು ಕವನಗಳು ಹಿರಿಯರ ನಾಲಿಗೆ ಮೇಲೆ ನಲಿದಾಡುವಂತೆ ಮಕ್ಕಳ ಕಂಠದಲ್ಲೂ ಗುನುಗಾಡುತ್ತಿವೆ. ಇವುಗಳಲ್ಲಿ ಲಾವಣಿಗಳೆಂದರೆ ಫೂಲಕುನ್ವರ್ ಮತ್ತು ಮೋನಿ ಕುನ್ವರ್‌ಗಳು ಪ್ರಮುಖವಾದವುಗಳು. ಸಣ್ಣಕಥೆಗಳಲ್ಲಿ ಟೀ ಜಿ ಮೊಲ, ಟುಲ ಮತ್ತು ತೇಜ, ಚೆಲೇನಿಯರ್, ಜೈಕಾರ್ ಸಾಧುಗಳು ಮಕ್ಕಳಲ್ಲಿ ಜನಪ್ರಿಯತೆಯನ್ನು ಸೃಷ್ಟಿಸಿರುವ ಕಥೆಗಳು. ಮಕ್ಕಳ ಹಾಡುಗಳಲ್ಲಿ ಗರಾಖಿಯಾರಗೀತ ಮತ್ತು ನಿಮಕಾನಿ ಗೀತೆಗಳು ಸಾಕಷ್ಟು ಪ್ರಾಮುಖ್ಯತೆಯನ್ನು ಪಡೆದಿವೆ. ಅಸ್ಸಾಮಿ ಜನತೆಗೆ ಚಂದ್ರ ಕುತೂಹಲಕಾರಿ ವಸ್ತು ಹಾಗಾಗಿ ಚಂದ್ರನ ಆಕರ್ಷಣೆ, ಅಂದ–ಚಂದದ ವರ್ಣನೆಗಳು ಸಿಗುತ್ತವೆ. ಅಸ್ಸಾಮಿ ಮಕ್ಕಳಿಗೆ ಚಂದ್ರ ಅತಿ ಇಷ್ಟವಾದ ವಸ್ತು, ಪ್ರಾಚೀನ ಜಾನಪದ ಅಸ್ಸಾಮಿ ಸಾಹಿತ್ಯದ 'ಜೋನ್ ಬೈ ಬೇಟಿ ಎಟಿ ಇಯಾ' ಎನ್ನುವ ಹಾಡು ಮಕ್ಕಳಿಗೆ ಅತಿ ಪ್ರಿಯವಾದ ಹಾಡು. 'ಓ ಚಂದ್ರಕ್ಕ ನನಗೊಂದು ಸೂಜಿ ಕೊಡು' ಎಂಬುದು ಆ ಹಾಡಿನ ಅರ್ಥ. ಅಸ್ಸಾಂ ಜನಪದರ ಪಾಲಿಗೆ ಚಂದ್ರ ಹೆಣ್ಣು. ಆಧುನಿಕ ಅಸ್ಸಾಮಿ ಸಾಹಿತ್ಯವೂ ಕೂಡ ಚಂದ್ರನನ್ನು ಹೆಣ್ಣೆಂದೇ ಪರಿಗಣಿಸುತ್ತದೆ. ಇನ್ನು ಜಾನಪದ ಆಟಗಳ ಕುರಿತಾದ ನೂರಾರು ಹಾಡುಗಳು ಅಸ್ಸಾಮಿ ಸಾಹಿತ್ಯದಲ್ಲಿ

ಸಿಗುತ್ತವೆ. ಇವುಗಳಲ್ಲಿ ಸಿಂಹಪಾಲು ಮಕ್ಕಳ ಹಾಡುಗಳು, ಮಕ್ಕಳ ನಿತ್ಯ ಜೀವನ ಚಟುವಟಿಕೆಗಳನ್ನು ವರ್ಣಿಸುವ ಜೊ ಪೂವಾರ್‌ಗೀತ, ಗೋಲಾಮ್ ದೋವಾನ ಹರಗೀತ್, ಪಂಚ್ ಅಂಗುಲೀರ್ ಗೀತ್, ಶಾಲಿಕಾರ್ ಗೀತ್ ಮತ್ತು ಭೂಕಂಪನ ಕುರಿತಾದ ಗೀತೆಗಳು ಅಸ್ಸಾಮಿ ಮಕ್ಕಳ ಸಾಹಿತ್ಯದ ಭಾಗ.

ವೈಷ್ಣವ ಪೂರ್ವಯುಗದಲ್ಲಿ 'ಮಾಧವಖಂಡಲಿ' ಅನುವಾದಿಸಿದ ವಾಲ್ಮೀಕಿ ರಾಮಾಯಣ ಮಕ್ಕಳ ಸಾಹಿತ್ಯದ ಮೊದಲ ಕಾವ್ಯ. ಮಕ್ಕಳ ಮಾನಸಿಕ ಸ್ಥಿತಿಯನ್ನು ಅರಿತು ಅವರಿಗೆ ಸುಲಭವಾಗಿ ಅರ್ಥವಾಗುವಂತೆ ಮಾಧವ ಖಂಡಲಿ ರಾಮಾಯಣವನ್ನು ಅನುವಾದಿಸಿದ್ದಾರೆ. ಶಂಕರದೇವ ರಾಮಾಯಣದ, ಮಹಾಭಾರತಗಳಲ್ಲಿನ ಅಂಶಗಳನ್ನು ಬಳಸಿ ಸಾಮಾನ್ಯರಿಗೆ ಮತ್ತು ವಿಶೇಷವಾಗಿ ಮಕ್ಕಳಿಗೆ ಅರ್ಥವಾಗುವ ರೀತಿಯಲ್ಲಿ ಒಂದೇ ಅಂಕದ ನಾಟಕ ರೂಪಕಗಳನ್ನು ಸೃಷ್ಟಿಸಿದ. ಮಾಧವ ಖಂಡಲಿ ಹೇಮ ಸರಸ್ವತಿ ವಾಮನ ಪುರಾಣದಿಂದ ಪ್ರಹ್ಲಾದನ ಚರಿತ್ರೆಯನ್ನು ಅನುವಾದಿಸಿದ್ದರಿಂದ ಬಾಲಕ ಪ್ರಹ್ಲಾದ ಅಸ್ಸಾಂ ಮಕ್ಕಳ ಪ್ರೀತಿಯ ಪ್ರಹ್ಲಾದನ ಸ್ಥಾನ ಪಡೆದ. ಹಾಗೆ ಹನುಮಾನ್ ಪಾತ್ರವೂ ಮಕ್ಕಳ ಪಾಲಿಗೆ ಮಹತ್ತರ ಪಾತ್ರವಾಯಿತು. ಶಂಕರದೇವನ ಪ್ರೀತಿಯ ಶಿಷ್ಯ ಮಾಧವ ದೇವ ಕೃಷ್ಣನ ಲೀಲಾವಳಿಗೆ ಸಂಬಂಧಿಸಿದ ನಾಟಕಗಳು ಅಸ್ಸಾಂ ಮಕ್ಕಳ ನಾಟಕಗಳೆಂದೇ ಪ್ರಸಿದ್ಧಿ ಪಡೆದಿವೆ. ಕೃಷ್ಣನ ಬಾಲ್ಯದ ಲೀಲಾವಳಿಗಳು ಅಸ್ಸಾಂ ಮಕ್ಕಳ ಮೇಲೆ ಉಂಟುಮಾಡಿರುವ ಪರಿಣಾಮವನ್ನು ಮತ್ತಾವ ಪಾತ್ರಗಳು ಮಾಡಲಾಗಿಲ್ಲ. ಇನ್ನು ರಾಮ ಸರಸ್ವತಿಯವರು ನೇರವಾಗಿ ಮಕ್ಕಳಿಗಾಗಿಯೇ ಬರೆದ ಪ್ರಮುಖ ಲೇಖಕ. ಈತ ಮಕ್ಕಳಿಗಾಗಿ ಬರೆದ ಕೃತಿಗಳು ಎತ್ತಿನ ಗಾಡಿಯಲ್ಲಿ ಹೇರಿಕೊಂಡು ಹೋಗುವಷ್ಟು ಇದ್ದವೆಂಬ ಪ್ರತೀತಿ ಇದೆ. ವಿಶೇಷವಾಗಿ ಮಾಧವ ದೇವ ಬರೆದ 'ಬಧಾಕಾವ್ಯ' ರಾಕ್ಷಸ ಮತ್ತು ದೈತ್ಯರನ್ನು ಕೊಲ್ಲುವ ವೀರ ರಾಜಕುಮಾರರ ಕಥೆಗಳಿಂದ ಕೂಡಿದ್ದು ಈ ಕಾವ್ಯ ಮಕ್ಕಳಿಗೆ ಪ್ರೀತಿಯ ಕಾವ್ಯವಾಯಿತು. ಇದೇ ಸಂದರ್ಭದಲ್ಲಿ ಶ್ರೀಧರ ಕುಂಡಲ 'ಕಾನ್‌ಕೌನ್; ಪೂರಣ ಅಖ್ಯಾನ; ರಾಮಾಯಣಚಾರ್ ರಹಘರ, 'ಉಪನಿಷದರ್ ಕಹಾನಿ' ಮತ್ತು 'ರಘುವಂಶದ್ ಕಥಾ' ಕಾವ್ಯಗಳನ್ನು ಬರೆದು ಮಕ್ಕಳ ಕವಿಯಾದ.

ಹೀಗೆ ಕ್ರಿ.ಶ. ೧೨೦೦ ರಿಂದ ವೈಷ್ಣವ ಪಂಥದವರಿಂದ ಪ್ರವಾಹೋಪಾದಿಯಲ್ಲಿ ಹರಿದು ಬಂದ ಮಕ್ಕಳ ದೇಸಿ ಸಾಹಿತ್ಯಕ್ಕೆ ಒಂದು ನಿರ್ದಿಷ್ಟ ಬ್ರೇಕ್ ಬಿದ್ದದ್ದು ೧೮೩೬ರಲ್ಲಿ ಬ್ರಿಟಿಷರು ಅಸ್ಸಾಂ ಅನ್ನು ವಶಪಡಿಸಿಕೊಂಡ ನಂತರ ಅಮೇರಿಕಾ ದೇಶದಿಂದ ಬಂದ ಕ್ರೈಸ್ತ ಮಿಷನರಿಗಳು 'ಅರುಣೋದಯ' ಎನ್ನುವ ಅಸ್ಸಾಂ ಭಾಷೆಯ ಮಾಸ ಪತ್ರಿಕೆಯನ್ನು ಪ್ರಕಟಿಸಲು ಶುರುಮಾಡಿದವು. ಈ ಪತ್ರಿಕೆ ಮಕ್ಕಳಿಗಾಗಿ ರಚನೆಯಾಗುವ ಸಾಹಿತ್ಯ ಪ್ರಕಾರಕ್ಕೆ ಸ್ಪಷ್ಟ ಹಾದಿಯನ್ನು ಹಾಕಿಕೊಟ್ಟಿತು. ಮಕ್ಕಳಿಗಾಗಿ ಅರುಣೋದಯ ಪತ್ರಿಕೆ ಬೈಬಲ್ ಕಥೆಗಳನ್ನು ಪ್ರಕಟಿಸಿ ಮಕ್ಕಳಲ್ಲಿ ಹೊಸ ಸಾಹಿತ್ಯಿಕ ಅಭಿರುಚಿಯನ್ನು ಹುಟ್ಟುಹಾಕಿತು. ಮಿಷನರಿಗಳು ಮಕ್ಕಳಿಗೆಂದೇ ಬಿಬಲೇರ್ ಸಾಧು, ಯಾತ್ರಿಕೇರ್ ಯಾತ್ರಿಕ, ಅಪರಿಮಿತ ಆಚಾರ್ ಪರಿಣಾಮ್, ರಾಮಗಡೀರ್ ಕಾಹ್ನಿ, ಅಮೇರಿಕಾರ್

ಆವಿಷ್ಕಾರ್, ಆಫ್ರಿಕಾರ್ ಕುನ್ವರ್ ಪ್ರಕಟಿಸಿ ಮಕ್ಕಳ ಸಾಹಿತ್ಯಕ್ಕೆ ವಿಪುಲ ಕೊಡುಗೆ ನೀಡಿದವು. ಇಂಥ ಕಾರ್ಯಗಳಿಂದ ಸ್ಫೂರ್ತಿ ಪಡೆದ ಅಸ್ಸಾಮಿ ಲೇಖಕರು ಮಕ್ಕಳಿಗಾಗಿ 'ಗೌಹಾತಿಯ ವರ್ಣನೆ' 'ಆಸೆಬುರುಕ ಬೆಸ್ತ', 'ಖರ್ಜೂರದ ಗಿಡ', 'ಚಮತ್ಕಾರ ಪದ್ಯ', 'ಒಗಟುಗಳ ಸಂಕಲನ'ಗಳನ್ನು ಪ್ರಕಟಿಸಿದರು. ಬ್ರಿಟಿಷ್ ಅಸ್ಸಾಮಿನಲ್ಲಿ ಮಕ್ಕಳಿಗಾಗಿ ಬರೆದ ಮತ್ತು ಮಕ್ಕಳ ಸಾಹಿತ್ಯಕ್ಕಾಗಿ ದುಡಿದವರೆಂದರೆ ರೆವೆರೆಂಡ್ ನಾಥನ್ ಬ್ರೌನ್ ಮತ್ತು ಎಸ್.ಆರ್. ಗಾರ್ಡಿಗರ್ನಿ ದಂಪತಿಗಳು. ಇವರು ಹಾಕಿಕೊಟ್ಟ ಮಾರ್ಗದಿಂದಾಗಿ ಮತ್ತು ಅರುಣೋದಯ ಪತ್ರಿಕೆ ಮಕ್ಕಳ ಸಾಹಿತ್ಯಕ್ಕೆ ನೀಡುತ್ತಿದ್ದ ಉತ್ತೇಜನದಿಂದಾಗಿ ಅಸ್ಸಾಮಿನಲ್ಲಿ ಮಕ್ಕಳ ಸಾಹಿತ್ಯ ಪ್ರಕಟಿಸುವ ಪತ್ರಿಕಾ ಕ್ರಾಂತಿಯೇ ನಡೆಯಿತೆನ್ನಬಹುದು. ಜೋನಕಿ, ಬಿಜುಲಿ, ಬಹ್ನಿ, ಉಷ, ಆವಾಹನ್ ಮುಂತಾದ ಪತ್ರಿಕೆಗಳು ಸ್ಥಾಪನೆಗೊಂಡು ಮಕ್ಕಳ ಸಾಹಿತ್ಯದ ಪ್ರಕಟಣೆ ಮತ್ತು ರಚನೆಗೆ ಮಹತ್ತರ ಕಾಣಿಕೆ ನೀಡಿದವು.

ಮಕ್ಕಳ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಅಲ್ಲಿನ ಶೈಕ್ಷಣಿಕ ಕ್ಷೇತ್ರದ ಕ್ರಾಂತಿಯನ್ನು ಉಲ್ಲೇಖಿಸಲೇ ಬೇಕಾಗುತ್ತದೆ. ಅಸ್ಸಾಮ್ ಮಕ್ಕಳ ಸಾಹಿತಿಗಳ ದೃಷ್ಟಿ ಶಿಕ್ಷಣ ಕ್ಷೇತ್ರದ ಕಡೆಗೆ ಹರಿದಿದ್ದರಿಂದ ಮತ್ತು ಕ್ರಿಶ್ಚಿಯನ್ ಮಿಷನರಿಗಳು ಮಕ್ಕಳಿಗಾಗಿ ಪಠ್ಯಪುಸ್ತಕ ತಯಾರಿಸುವ ಕಾರ್ಯದಲ್ಲಿ ತೊಡಗಿದ್ದರಿಂದ ದೇಶೀ ಸೊಗಡನ್ನು ಶಿಕ್ಷಣ ಕ್ಷೇತ್ರದಲ್ಲಿ ಪಸರಿಸುವ ಮಹತ್ತರ ಕಾರ್ಯವನ್ನು ಬಲದೇವ್ ಮಹಂತ, ಪದ್ಮಹಾಸ ಗೋಸ್ವಾಮಿ, ಲಂಬೋದರ ಬೋರ, ಹೇಮಚಂದ್ರ ಬರುವ ಮುಂತಾದ ಕವಿಗಳು ಬರೆದ ಮಕ್ಕಳ ಸಾಹಿತ್ಯ, ಮಕ್ಕಳ ಪಠ್ಯಪುಸ್ತಕಗಳಾಗಿದ್ದವು. ಅಂತಹ ಕೆಲವು ಪುಸ್ತಕಗಳನ್ನಾಗಿ ಹೆಸರಿಸುವುದಾದರೆ ಪ್ರಬಂಧಗಳ ಬರವಣಿಗೆಯಾದ "ಉಜುಕಥ್, ವಿದ್ಯಾರ್ಥಿಗಳಿಗೆ ವಿವೇಕದ ಪಾಠ ಹೇಳಿಕೊಡುವ 'ಲಾರಾಬೋದ್', ಜೀವನದ ಮೊದಲ ಪಾಠವನ್ನು ಕಲಿಸುವ 'ಆದಿಪಥ್', ವ್ಯಾಕರಣ ಕಲಿಕೆಗಾಗಿ 'ಅಸ್ಸಾಮಿಯ ಲಾರಾರಾ ವ್ಯಾಕರಣ ಮುಖ್ಯವಾದವುಗಳು. ವಿಶೇಷವಾಗಿ ಹೇಮಚಂದ್ರ ಬರುವರ ೧೯೦೦ರಲ್ಲಿ ಶಾಲಾ ಮಕ್ಕಳ ನಿಘಂಟು 'ಪರ್ಹ್ ಶಾಲೀರ್ ಅಭಿದಾನ್' ಇಂದಿಗೂ ಪ್ರಖ್ಯಾತಿಯನ್ನು ಪಡೆದಿದೆ. ೨೦ನೇ ಶತಮಾನ ಆರಂಭಿಕ ಕಾಲಘಟ್ಟದಲ್ಲಿ ರಘುನಾಥ ಗೋಸ್ವಾಮಿ ಬರೆದ 'ಹಿತೋಪದೇಶ', ಲಂಬೋದರ ಗೋರ ರಚಿಸಿದ 'ಜ್ಞಾನೋದಯ' ಪದ್ಮಾವತಿದೇವಿ ವಿರಚಿತ 'ಹಿತಸಾಧಕ', ವಿಷ್ಣು ಪ್ರಿಯಾದೇವಿಯವರ ನೀತಿಕಥಾ ಕೃತಿಗಳು ಮಕ್ಕಳ ಸಾಹಿತ್ಯ ಎಂದರೆ ಏನು? ಮತ್ತು ಅದು ಹೇಗಿರಬೇಕೆಂಬುದನ್ನು ಸಾರಿದವು. ಅಷ್ಟೇ ಅಲ್ಲ ಬರಹಗಾರರ, ಶಿಕ್ಷಕರ ಗಮನವನ್ನು ಆ ಕ್ಷೇತ್ರದ ಕಡೆಗೆ ಸೆಳೆದವು. ಅಸ್ಸಾಮ್ ಮಕ್ಕಳ ಸಾಹಿತ್ಯ ಬೇರೆ ಸಾಹಿತ್ಯಿಕ ಪ್ರಕಾರಗಳಲ್ಲಿ ವ್ಯಾಪಿಸಲು ತಳಪಾಯ ಹಾಕಿಕೊಟ್ಟವು".[೮]

ಮಕ್ಕಳೊಳಗೆ ಕುತೂಹಲ ಸೃಷ್ಟಿಸಲಾರದೇ ಹೋದರೆ ಅವರ ಮಾನಸಿಕ ವಿಕಾಸ ಸಾಧ್ಯವಿಲ್ಲ. ಕುತೂಹಲ ಆಲೋಚನಾ ಶಕ್ತಿಯನ್ನು ಹೆಚ್ಚಿಸುತ್ತದೆ. ಕುತೂಹಲ ಅನ್ವೇಷಣಾ ಗುಣವನ್ನು ಸೃಷ್ಟಿಸುತ್ತದೆ. ಕುತೂಹಲ ಪ್ರಜ್ಞೆ ಮತ್ತು ಪರಿಸರವನ್ನು ಹುಟ್ಟುಹಾಕುತ್ತದೆ. ಬಹುಶಃ ಈ ಅಂಶದ ಕಡೆಗೆ ಹೆಚ್ಚು ಗಮನ ನೀಡಿದ ಅಸ್ಸಾಮ್ ಮಕ್ಕಳ ಕವಿಗಳು ಅಂಥಾ ಕುತೂಹಲ

ಕಥೆಗಳ ಆವಿಷ್ಕಾರದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಂತೆ ಕಾಣುತ್ತದೆ. ಈಗಾಗಲೇ ಚರ್ಚಿಸಿದಂತೆ ಸಾಹಿತ್ಯದ ತಾಯಿ ಬೇರು ಜನಪದವಾದ್ದರಿಂದ ಅಸ್ಸಾಮ್ ಮಕ್ಕಳ ಕವಿಗಳು ಜಾನಪದದತ್ತ ತಮ್ಮ ದೃಷ್ಟಿಯನ್ನು ಹಾಯಿಸಿದ್ದು ಕಂಡುಬರುತ್ತದೆ. ಇದೇ ಶತಮಾನದಲ್ಲಿ "ಲಕ್ಷ್ಮೀಕಾಂತ ಬಿಜ್ ಬರುವ ಹಲವು ತಲೆಮಾರಿನಿಂದ ಸಾಗುತ್ತ ಬಂದ 'ಜನಪದ ಕಥಾ ಸಂಗ್ರಹ'ವನ್ನು ಸಂಗ್ರಹಿಸಿ ಪ್ರಕಟಿಸಿದರು. ಅಜ್ಜಿಯ ಕಥೆಗಳನ್ನು ಸಂಗ್ರಹಿಸಿ 'ಬುರಿಯೇರ್ ಸಾಧು', ಅಜ್ಜಿ ಮೊಮ್ಮಗನಿಗೆ ಹೇಳುವ 'ಕವಲ್ ದ್ಯೂತ ನಟಿಲಾರಾ' ಜನಪದ ಕಥೆಗಳನ್ನು ಪ್ರಕಟಿಸಿ ಮಹಾ ಪರಂಪರೆಗೆ ಚಾಲನೆ ನೀಡಿದರು. ಇದರಿಂದ ಪ್ರೇರಣೆ ಪಡೆದ ಗೋಸ್ವಾಮಿ ಅಸ್ಸಾಮಿನ ಜಾನಪದ ಕಥೆಗಳನ್ನು ಸಂಗ್ರಹಿಸಿ 'ಅಸ್ಸಾಮಿಯಾ ಸಾಧುಕಥಾ' ಪ್ರಕಟಿಸಿದರು. ಕುಮುದೇಶ್ವರ ಠಾಕೂರ್ ಜಾನಪದ ಕಥೆಗಳ ಕಣಜಕ್ಕೆ 'ಸಾಧೂರ್ ಬೊರಲ್' ಎಂದು ಹೆಸರಿಟ್ಟು ಹೊರತಂದರು. ವಿಷ್ಣುಪ್ರಿಯಾದೇವಿಯವರು ಸಂಗ್ರಹಿಸಿದ ಜಾನಪದ ಕಥೆಗಳಿಗೆ 'ಸಾಧುಕಥಾ' ಎಂದು ಪ್ರಕಟಗೊಳಿಸಿದರು. ೧೯೩೧ರಲ್ಲಿ ಬನಿಕಾಂತ ಕಕಾಟಿ 'ಫಕೀಲಾ' ಬಣ್ಣದ ಚಿಟ್ಟೆ ಎಂಬ ಪುಸ್ತಕವನ್ನು ಬಹು ಸುಂದರವಾಗಿ ಆಕರ್ಷಕವಾಗಿ ಪ್ರಕಟಿಸಿದರು. ಈ ಪುಸ್ತಕದ ಅನೇಕ ಆವೃತ್ತಿಗಳು ಇದುವರೆಗೂ ಪ್ರಕಟವಾಗುತ್ತಲೇ ಇವೆ. ನವಕಾಂತ್ ಬರುವಾರ 'ಆಖರಾರ್ ಝುಕಾಲ'(ಅಕ್ಷರದ ಏಣಿ) ಒಂದು ವೈಶಿಷ್ಟ್ಯಪೂರ್ಣ ಪುಸ್ತಕ. ೧೯೫೬ರಲ್ಲಿ ಪ್ರಕಟವಾದ ಈ ಕಥೆಗಳಲ್ಲಿ ಮಕ್ಕಳನ್ನು ತೊಡಗಿಸಿ ಪದ ಜೋಡಣೆಯ ಅದ್ಭುತ ಲೋಕಕ್ಕೆ ಕೊಂಡೊಯ್ಯುತ್ತಾರೆ ಲೇಖಕರು. ಇದರಿಂದ ಸ್ಫೂರ್ತಿ ಪಡೆದ ಇತ್ತೀಚಿನ ಕೆಲ ಲೇಖಕರು ಇದರ ಅನುಕರಣೆಯಲ್ಲಿ ತೊಡಗಿದ್ದಾರೆ".[೯]

ಹೀಗೆ ಜಾನಪದದ ಮೂಲಕ 'ಪ್ರವೇಶಿಸಿ, ಪೌರಾಣಿಕ ಐತಿಹಾಸಿಕ ಕ್ಷೇತ್ರವನ್ನು ಬಳಸಿ, ಶಿಕ್ಷಣ ಕ್ಷೇತ್ರಕ್ಕೆ ವ್ಯಾಪಿಸಿ, ಮತ್ತೆ ಜಾನಪದವನ್ನು ಹೊಕ್ಕು ಕೊನೆಗೆ ಪೌರಾಣಿಕ ಕ್ಷೇತ್ರದ ಕಥಾವಳಿಗಳನ್ನು ಆಯ್ದುಕೊಂಡರು. ಸವಿಸ್ತಾರ ಮಕ್ಕಳ ಸಾಹಿತ್ಯವನ್ನು ಸೃಷ್ಟಿಸಿರುವ ಅಸ್ಸಾಮನ ಮಕ್ಕಳ ಸಾಹಿತ್ಯ ಕ್ಷೇತ್ರವನ್ನು ನೋಡಿದರೆ ಪಂಪಮಹಾಕವಿಯ 'ದೇಶಿಯೊಳಪುಗುವುದು ಪೊಕ್ಕು ಮಾರ್ಗದೊಳ್ ತಳ್ವುದು' ಎಂಬ ದೇಶಿಮಾರ್ಗಗಳ ಕಾವ್ಯಾನುಬಂಧದ ಮಾತು ನೆನಪಾಗುತ್ತದೆ. "ಇತ್ತೀಚೆಗೆ ಅಸ್ಸಾಮ್ ಸರ್ಕಾರ ಮಕ್ಕಳ ಸಾಹಿತ್ಯದ ಬೆಳವಣಿಗೆಗಾಗಿ ಪಂಚವಾರ್ಷಿಕ ಯೋಜನೆಗಳನ್ನು ಹಾಕಿಕೊಂಡಿದೆ. ದೇಶೀ ಭಾಷೆ ಅಸ್ಸಾಮಿ ಅಲ್ಲದೆ ಆ ರಾಜ್ಯದ ವಿವಿಧ ಬುಡಕಟ್ಟು ಭಾಷೆಗಳಾದ ಬೋರೋ, ಡಿಮೋಕುರುಬಿ, ಮಿಚೆಂಗ, ರಾಭ ಭಾಷೆಗಳಲ್ಲೂ ಮಕ್ಕಳ ಸಾಹಿತ್ಯವನ್ನು ಪ್ರಕಟಿಸುವ ಯೋಜನೆಯನ್ನು ರೂಪಿಸಿದೆ".[೧೦] ಅಸ್ಸಾಮಿನಲ್ಲಿ ಸರ್ಕಾರದ ಜೊತೆಗೆ ಖಾಸಗಿ ಸಂಘ-ಸಂಸ್ಥೆಗಳು, ಶಿಕ್ಷಣ ಸಂಸ್ಥೆಗಳು ಈ ಕಾರ್ಯಕ್ಕೆ ಕೈ ಜೋಡಿಸಿವೆ.

**ಮರಾಠಿ ಭಾಷೆಯಲ್ಲಿ ಮಕ್ಕಳ ಸಾಹಿತ್ಯ**

ಭಾರತೀಯ ಇತರೆ ಭಾಷೆಗಳಂತೆ ಮರಾಠಿಯಲ್ಲೂ ಕೂಡ ೫೭೦ರಲ್ಲಿ ಪಂಚತಂತ್ರದ ಕಥೆಗಳಿಂದ ಮಕ್ಕಳ ಸಾಹಿತ್ಯ ಆರಂಭವಾಗುತ್ತದೆ. ಕ್ರಿ.ಶ. ೧೮೨೨ರಲ್ಲಿ ಆರಂಭವಾದ 'ಮುಂಬಯಿ

ಶಿಕ್ಷಣ ಮಂಡಳಿ' ಆಯ್ಕೆ ಮಾಡಿಕೊಂಡ ಮಕ್ಕಳ ಪಠ್ಯದಲ್ಲಿ ಪಂಚತಂತ್ರವೂ ಸೇರಿತ್ತು. ನೀತಿಬೋಧನೆ ಮಕ್ಕಳ ಮನಸ್ಸಿನ ಮೇಲೆ ಅಗಾಧ ಪರಿಣಾಮವನ್ನುಂಟು ಮಾಡುವುದರ ಜೊತೆಗೆ ಸದೃಢ ವ್ಯಕ್ತಿತ್ವವನ್ನು ರೂಪಿಸುತ್ತದೆ. ಪಂಚತಂತ್ರ ಮತ್ತು ಇತರೆ ಪೌರಾಣಿಕ, ಐತಿಹಾಸಿಕ ಕಥನ ಪರಂಪರೆಗಳು ಈ ಬಗೆಯ ಛಾತಿ ಹೊಂದಿರುವುದರಿಂದ ಮಕ್ಕಳಿಗಾಗಿ ರಚಿಸಿದ ಸಾಹಿತ್ಯದಲ್ಲಿ ಅವುಗಳು ತಪ್ಪಿಸಿಕೊಳ್ಳಲು ರಿಯಾಯಿತಿ ಸಿಕ್ಕಿಲ್ಲ. ಐತಿಹಾಸಿಕವಾಗಿ ನೋಡುವುದಾದರೆ 'ಸಭಾ ಪಂಡಿತ' ಬರೆದ 'ಬಾಲಬೋಧ ಮುಕ್ತಾವಳಿ' ಮಕ್ಕಳ ಪ್ರಥಮ ಅಧಿಕೃತ ಕೃತಿ. ೧೮೦೬ರಲ್ಲಿ ತಂಜಾವೂರನ್ನು ಆಳುತ್ತಿದ್ದ ಶರಭೋಜ ರಾಜನ ಪ್ರೋತ್ಸಾಹದಿಂದ ಸಭಾಪಂಡಿತ ಈ ಕೃತಿಯನ್ನು ರಚಿಸುತ್ತಾನೆ. ಈ ಕೃತಿಯು ಈಸೋಪನ ನೀತಿಕಥೆಗಳ ಸಂಗ್ರಹವಾಗಿದ್ದು ಹತ್ತಾರು ಮುದ್ರಣಗಳನ್ನು ಕಂಡಿದೆ. ೧೮೩೦ರಲ್ಲಿ ಸಂಸ್ಕೃತದಿಂದ 'ಪಂಚವಿಂಶತಿ'ಯನ್ನು ಮರಾಠಿಗೆ ಅನುವಾದಿಸಿದರು. ಬಂಗಾಲಿಯ ತಾರಾಚಂದದತ್ತರ 'ಬೋಧಕಥಾ' ಮರಾಠಿಗೆ ಅನುವಾದಗೊಂಡಿತು. ಮುಂಬಯಿ ಶಿಕ್ಷಣ ಮಂಡಳಿ ಮಕ್ಕಳ ಕಥೆಗಳನ್ನೆಲ್ಲಾ ಒಟ್ಟುಗೂಡಿಸಿ 'ನೀತಿದರ್ಪಣ' ಹೆಸರಿನಲ್ಲಿ ವಿಷ್ಣುಶಾಸ್ತ್ರಿಬಾಪಟರಿಂದ ಬರೆಸಿ ಪ್ರಕಟಿಸಿತು. ಇದೇ ಸಾಹಿತಿ ಬರೆದ 'ಬಾಲಲೋಕ ದೇಶಕಥಾ' ಮರಾಠಿ ಮಕ್ಕಳ ಸಾಹಿತ್ಯದ ಅದ್ಭುತ ಕೃತಿ. ಸರಳತೆಯಿಂದ ಕೂಡಿರುವ ಈ ಕಥೆಗಳು ಮಕ್ಕಳಿಗೆ ಸುಲಭವಾಗಿ ಅರ್ಥವಾಗುವ ಜೊತೆಗೆ ಮಾನಸಿಕ ವಿಕಾಸಕ್ಕೆ ಕಾರಣೀಕರ್ತವಾಗಿವೆ.

"೧೮೪೦ರಲ್ಲಿ ಮುಂಬಯಿ ಹಿಂದ್ ಶಿಕ್ಷಣ ಮಂಡಲಿ ಸ್ಥಗಿತಗೊಂಡಿತು. ಸರ್ಕಾರದ ವತಿಯಿಂದ ಹೊಸ ಶಿಕ್ಷಣ ಮಂಡಲಿಯೊಂದು ಸ್ಥಾಪನೆಯಾಗಿ ಹರಿಕೇಶವ ಕಠಾರ ನೇತೃತ್ವದಲ್ಲಿ ಮಕ್ಕಳಿಗಾಗಿ ಹೊಸ ಬಗೆಯ ಪಠ್ಯಪುಸ್ತಕಗಳನ್ನು ತಯಾರಿಸತೊಡಗಿದರು. ಶಾಲೆಗಳಲ್ಲಿ ಉಪಯೋಗಿಸುತ್ತಿದ್ದ 'Moral Class book' ಮಾದರಿಯ ಶಾಲೋಪಯೋಗಿ, ನಿತ್ಯೋಪಯೋಗಿ ಎಂಬ ಹೆಸರಿನಲ್ಲಿ ಕಥೆಗಳನ್ನು ಪ್ರಕಟಿಸಿದರು. ಅವುಗಳಲ್ಲಿ ಹರ್ಕ್ಯುಲಸ್‌ನಂತಹ ವೀರರ, ನ್ಯೂಟನ್‌ನಂತಹ ವಿಜ್ಞಾನಿಗಳ, ಸಾಕ್ರಟೀಸ್‌ನಂತಹ ತತ್ವಜ್ಞಾನಿಗಳ ಕಥೆಗಳು ಇರುತ್ತಿದ್ದವು. ಇವುಗಳಲ್ಲಿ ಮಕ್ಕಳಿಗೆ ಉಪಯೋಗವಾಗುವಂತಹ ಪ್ರಬಂಧಗಳು ಸಹ ಇದ್ದವು. ಸರ್ಕಾರದ ವತಿಯಿಂದ ನಡೆಯುತ್ತಿದ್ದ ಈ ಶಿಕ್ಷಣ ಮಂಡಲಿಗೆ ಕಾರ್ಯದರ್ಶಿಯನ್ನಾಗಿ ಮೇಜರ್ ಟಿ. ಕ್ಯಾಂಡಿಯನ್ನು ನೇಮಿಸಿದ ಮೇಲೆ ಪಠ್ಯಪುಸ್ತಕಗಳೆಲ್ಲ ಹೊಸ ಹೊಸ ಬಗೆಯ ರೂಪರೇಷೆಗಳನ್ನು ಪಡೆದುಕೊಳ್ಳ ತೊಡಗಿದವು."[೧೧] ಮೇಜರ್ ಟಿ.ಕ್ಯಾಂಡಿ ಶಿಕ್ಷಣ ಪ್ರೇಮಿ ಮತ್ತು ತಜ್ಞನಾಗಿದ್ದರಿಂದ ಮಕ್ಕಳ ಸೂಕ್ಷ್ಮ ಮನಸ್ಥಿತಿಯನ್ನು ಅರ್ಥಮಾಡಿಕೊಂಡಿದ್ದರಿಂದ ಯಾವ ಸಾಹಿತ್ಯ ಮಕ್ಕಳಿಗೆ ರುಚಿಸಬಹುದು ಮತ್ತು ಮಕ್ಕಳ ಮನೋವಿಕಾಸಕ್ಕೆ ಕಾರಣವಾಗಬಹುದೆಂಬ ಸ್ಪಷ್ಟ ಅರಿವು ಕ್ಯಾಂಡಿಯದಾಗಿತ್ತು. ಹಾಗಾಗಿ ಕ್ಯಾಂಡಿ 'ಮಾರಲ್‌ಕ್ಲಾಸ್ ಬುಕ್' ಹೆಸರಿನ ಪಠ್ಯ ನೀತಿಯೊಂದನ್ನು ಜಾರಿಗೆ ತರುತ್ತಾನೆ. ಈ ಪ್ರಕ್ರಿಯೆಯ ಹಿಂದೆ ಕ್ಯಾಂಡಿಯ ಸೂಕ್ಷ್ಮ ಚಿಂತನೆಗಳು ಅಡಗಿದೆ. ದೇಶದಲ್ಲೇ ಈ ಪ್ರಯೋಗ ಪ್ರಥಮವಾಗಿತ್ತು.

ಯಾವುದೇ ಸಾಹಿತ್ಯ ಪ್ರಕಾರವನ್ನು ಪ್ರಖ್ಯಾತಗೊಳಿಸುವ ಕಾರ್ಯದಲ್ಲಿ ಪತ್ರಿಕೆಗಳ ಮಹತ್ವ ತುಂಬಾ ಮುಖ್ಯ. ಪತ್ರಿಕೆಗಳು ತಮ್ಮದೇ ಆದ ಓದುವ ಬೌದ್ಧಿಕ ಲೋಕವನ್ನು ಸೃಷ್ಟಿಸಿಕೊಂಡಿರುತ್ತವೆ. ಹಾಗಾಗಿ ಭಾರತೀಯ ಯಾವುದೇ ಭಾಷೆಯಲ್ಲಿ ರಚಿತವಾದ ಸಾಹಿತ್ಯಕ್ಕೆ ಒಂದು ಹೊಸ ಬಗೆಯ ಪ್ರಚಾರವನ್ನು ನೀಡಿದ ಕೀರ್ತಿ ಪತ್ರಿಕಾರಂಗಕ್ಕೆ ಸಲ್ಲುತ್ತದೆ. ಮಕ್ಕಳ ಸಾಹಿತ್ಯದ ಪ್ರಕಾರವನ್ನು ಉಳಿಸುವ ವಿಚಾರದಲ್ಲಿಯೂ ಈ ಮಾತು ಅನ್ವಯವಾಗುತ್ತದೆ. ಮರಾಠಿಯಲ್ಲಿ ಮಕ್ಕಳಿಗಾಗಿಯೇ ಪ್ರತ್ಯೇಕವಾದ ಮಾಸಪತ್ರಿಕೆಯನ್ನು ತಂದದ್ದು ಅಮೆರಿಕನ್ ಮಿಷನ್‌ನವರು. ೧೮೭೭ರಲ್ಲಿ 'ಬಾಲಬೋಧ ಮೇವಾ' ಎಂಬ ಹೆಸರಿನಲ್ಲಿ ಮಕ್ಕಳ ಮಾಸಪತ್ರಿಕೆ ಆರಂಭವಾಗುತ್ತದೆ. ಪ್ರಾರಂಭದಲ್ಲಿ ಇದು ಕ್ರೈಸ್ತ ಧರ್ಮದ ಮಕ್ಕಳಿಗಾಗಿ ಏಸುಕ್ರಿಸ್ತನ ಮತ್ತು ಬೈಬಲ್‌ನ ಕಥೆಗಳನ್ನು ಪ್ರಕಟಿಸಿತಾದರೂ ಮುಂದೆ 'ಬಾಲಬೋಧ' ಎಂದು ಹೆಸರನ್ನು ಬದಲಾಯಿಸಿಕೊಂಡು ಕಥೆ, ಕವನ, ಚುಟುಕು ಇತ್ಯಾದಿ ಪ್ರಕಾರಗಳನ್ನು ಎಲ್ಲಾ ಧರ್ಮದ ಮಕ್ಕಳಿಗೂ ಅರ್ಥವಾಗುವಂತೆ ಜಾತಿ, ಪಂಥಗಳನ್ನು ಮೀರಿ ಪ್ರಕಟಗೊಳಿಸಹತ್ತಿತು. 'ಬಾಲಬೋಧ' ಮಾಸಪತ್ರಿಕೆಯ ಸಂಪಾದಕತ್ವದ ಹೊಣೆಗಾರಿಕೆಯನ್ನು 'ಓಕ್'ವಹಿಸಿಕೊಂಡ ಮೇಲಂತೂ ಅದಕ್ಕೊಂದು ಸೈದ್ಧಾಂತಿಕ ಚೌಕಟ್ಟು ಪ್ರಾಪ್ತವಾಯಿತು. ಓಕ್ ಈ ಮಕ್ಕಳ ಮಾಸಪತ್ರಿಕೆಯನ್ನು ಮೂರು ವರ್ಷಗಳ ಕಾಲ ಒಬ್ಬರೇ ನಡೆಸಿದ ಕೀರ್ತಿಗೆ ಪಾತ್ರರಾಗಿದ್ದಾರೆ. ೪೦೨ ಜೀವನ ಚರಿತ್ರೆ, ೪೦೨ ಸಾಮಾನ್ಯ ವಿಷಯ, ೩೭೧ ವಿಜ್ಞಾನ ಲೇಖನ ಮತ್ತು ೮೫೦ ಬೇರೆ ಬೇರೆ ಸಾಹಿತ್ಯ ಪ್ರಕಾರಗಳ ಲೇಖನಗಳನ್ನು ಬಾಲಬೋಧ ಮಕ್ಕಳ ಮಾಸಪತ್ರಿಕೆಗಳಲ್ಲಿ ಪ್ರಕಟಿಸಿದ ಕೀರ್ತಿ ಓಕ್‌ರವರಿಗೆ ಸಲ್ಲುತ್ತದೆ.

ಭಾರತೀಯ ಯಾವುದೇ ಭಾಷೆಯಲ್ಲಿ ಪ್ರಕಟವಾಗದಷ್ಟು ಮಕ್ಕಳ ಪತ್ರಿಕೆಗಳು ಮರಾಠಿಯಲ್ಲಿ ಪ್ರಕಟವಾಗಿರುವುದು ಆ ಭಾಷೆಯ ವಿಶೇಷ. ನೂರಾರು ಪತ್ರಿಕೆಗಳು ೧೯ನೇ ಶತಮಾನದ ಉತ್ತರಾರ್ಧದಲ್ಲಿ ಪ್ರಕಟಗೊಂಡಿವೆ. ಅಂಥ ಕೆಲವು ಪತ್ರಿಕೆಗಳು ಹೀಗಿವೆ. ಗೋವಿಂದ ಆಪ್ಟೆ ಸಂಪಾದಕತ್ವದ ೧೯೦೬ರಲ್ಲಿ ಬಂದ 'ಆನಂದ' ಮಾಸಪತ್ರಿಕೆ, ತುಸು ದೊಡ್ಡ ಮಕ್ಕಳಿಗಾಗಿ ಇವರೇ ಸಂಪಾದಿಸಿ ಪ್ರಕಟಿಸುತ್ತಿದ್ದ 'ಆನಂದಾಚಿ ಪೂಲ್‌ಬಾಗ್' ಪತ್ರಿಕೆ. ಕೃಷ್ಣಶಾಸ್ತ್ರಿ ಚಿಪ್ಳೂಣಕರರ ಸಂಪಾದಕತ್ವದಲ್ಲಿ ೧೮೬೫ರಲ್ಲಿ ಪ್ರಾರಂಭಗೊಂಡು ಪುಣೆಯ ಛಾತ್ರಶಾಲದಿಂದ ಪ್ರಕಟಗೊಳ್ಳುತ್ತಿದ್ದ 'ಶಾಲಾಪತ್ರ' ಮಾಸಪತ್ರಿಕೆ, ೧೯೧೯ರಲ್ಲಿ ಆರ್.ಕೆ. ಸಹಸ್ರಬುದ್ಧೆ ಸಂಪಾದಕತ್ವದ ಬಾಲೋಧ್ಯಾನ ಪತ್ರಿಕೆ, ೧೯೨೭ರಲ್ಲಿ ನಾಸಿಕ್‌ದಿಂದ ಪ್ರಕಟಗೊಳ್ಳುತ್ತಿದ್ದ 'ಮುಲಾಂಚೆ ಮಾಸಿಕ' ಪತ್ರಿಕೆ, ಮುಂಬಯಿಯಿಂದ 'ಖೇಲಗಾಡಿ' ಪತ್ರಿಕೆ, ನಾಗಪುರದಿಂದ ವಿ.ಕೆ. ಭಾವೆ ಸಂಪಾದಕತ್ವದಲ್ಲಿ ಪ್ರಕಟಗೊಳ್ಳುತ್ತಿದ್ದ 'ಸುಮನಾ' ಚಿಕ್ಕಮಕ್ಕಳ ಮಾಸಪತ್ರಿಕೆ, ೧೯೩೫ರಲ್ಲಿ ಪ್ರಕಾಶ್ ಮಹದಿಕರ್ ಮತ್ತು ಬಾಳಠಾಕ್ರೆ ಜಂಟಿಯಾಗಿ ಪ್ರಕಟಿಸುತ್ತಿದ್ದ 'ಶಾಮಾ' ಪತ್ರಿಕೆ, ೨೫ ವರ್ಷಗಳ ಕಾಲ ಪ್ರಕಟಗೊಂಡು ಮಹಾರಾಷ್ಟ್ರದಾದ್ಯಂತ ಪ್ರಸಾರಗೊಳ್ಳುತ್ತಿದ್ದ ೧೯೩೫ರಲ್ಲಿ ನಾರಾಯಣ ಮಿಶಾಲ ಸಂಪಾದಕತ್ವದ 'ಬಾಲಸನ್ಮಿತ್ರ' ಪತ್ರಿಕೆ, ದುರ್ಗಾ ಭಾಗವತರ 'ಮಾಲಾಂಚ ಶ್ಯಾಮಾ' ಪತ್ರಿಕೆ,

ವಿ.ವಾ. ಶಿರವಾಡ್‌ಕರ್‌ರವರ 'ಕುಮಾರ್' ಪತ್ರಿಕೆ, ಅಮರೇಂದ್ರ ಗಾಡ್ಗೀಳ್‌ರವರ 'ಗೋಕುಲ' ಪತ್ರಿಕೆ, ಎಸ್.ಬಿ. ಹುದ್ಲಿಕರ್‌ರವರ 'ಬಾಲಮಂದಿರ್' ಪತ್ರಿಕೆ, ಕೊಲ್ಲಾಪುರದ ದಾಸರಾಂ ಪ್ರಕಾಶನದ 'ಬಾಲಮಾಸಿಕ' ಪತ್ರಿಕೆ ಮುಂತಾದವುಗಳನ್ನು ಹೆಸರಿಸಬಹುದು. ಆ ದಶಕದಲ್ಲಿ ಪ್ರಾರಂಭಗೊಂಡು ಇಂದಿಗೂ ಪ್ರಕಟಗೊಳ್ಳುತ್ತಿರುವ ಮಕ್ಕಳ ಪತ್ರಿಕೆಗಳು ಚಂದೋಬಾ, ಚಂಪಕ್, ಉಪಮನ್ಯು, ಕಿಶೋರ್, ಬಾಲವಿಕಾಸ್, ತಾರ್ಜಾನ್, ಬೀರ್‌ಬಲ್ಲ, ಮುಲಾಂಚೆ ಮಾಸಿರ, ಕುಮಾರ ಮುಂತಾದವುಗಳು. ಒಟ್ಟಿನಲ್ಲಿ ಮರಾಠಿ ಮಕ್ಕಳ ಸಾಹಿತ್ಯಿಕ ಪತ್ರಿಕೆಗಳು ದೊಡ್ಡ ಕ್ರಾಂತಿಯನ್ನೇ ಮಾಡಿವೆ.

ಮರಾಠಿ ಮಕ್ಕಳ ಸಾಹಿತ್ಯದಲ್ಲಿ ಮಕ್ಕಳ ಕಾವ್ಯದ ಹೊಸ ಯುಗ ಪ್ರಾರಂಭವಾದದ್ದು ೧೯೧೦ರಲ್ಲಿ. ಇದಕ್ಕೆ ಪ್ಲಾಟ್‌ಫಾರಂ ದೊರಕಿಸಿಕೊಟ್ಟದ್ದು 'ಆನಂದ' ಎನ್ನುವ ಮಾಸಪತ್ರಿಕೆ. ಪತ್ರಿಕೆ ೧೯೩೭ರಲ್ಲಿ ಮುಲಾಂಚಿ, ಗೋಡಗಾನಿ ಎಂಬ ಕಾವ್ಯಗಳನ್ನು ಪ್ರಕಟಗೊಳಿಸಿತು. ಇದೇ ಸಂದರ್ಭದಲ್ಲಿ ಎನ್.ಕೆ. ಬೆಹರೆಯವರು ಸಂಗೀತದ ಛಾಯೆ ಮತ್ತು ಮಾಧುರ್ಯ ತುಂಬಿದ ಮಕ್ಕಳ ಕಾವ್ಯಗಳನ್ನು ರಚಿಸಲಾರಂಭಿಸಿದರು. ಭಾಸ್ಕರರಾವ್ ತಾಂಬೆಯವರು ರಚಿಸಿದ ಆತನಗಟ್ಟಿ ಪುದದಕಿ, ಚಿಂವ್-ಚಿಂವ್, ಚಿಮಣಿ ಚಾತಂಕ್ ಕಾವ್ಯಗಳು ಇಂದಿಗೂ ಜನಪ್ರಿಯ ಮಕ್ಕಳ ಕಾವ್ಯಗಳಾಗಿವೆ.

> "ರುಣು ಝುಣು ಯೆ
> ರುಣು ಝುಣು ಯೆ
> ಝುನ ಕಾರಿತ ವಾಲಾ"

ಎಂಬ ಈ ಮಕ್ಕಳ ಪ್ರಾಸಗೀತೆ ಸಂಗೀತಮಯವಾಗಿದ್ದು ಹಾಡಲು, ಹಾಡಿಸಲು ಸೊಗಸಾದ ಗೀತೆ. ಯಶವಂತ ಕವಿ ಪ್ರಕಟಿಸಿದ 'ಮೋತಿಬಾಗ್' ಸಂಕಲನದ ಮಿಠಾಯಿ ಮತ್ತು ಫರಕುಲ ಕವನಗಳು ಮಕ್ಕಳ ಆಂತರಿಕ ಮನೋವ್ಯಾಪಾರವನ್ನು ಅನಾವರಣಗೊಳಿಸುತ್ತವೆ. ಮಾಧವ ಪಟವರ್ಧನ್‌ರವರು ರಚಿಸಿರುವ,

> "ದೊಲ್ಯಾ ಭಾಯಿ ದೊಲಾ
> ಹಟಾಚಾ ಘ್ಯಾ ಝೋಲಾ"

ಕವನ ಮಕ್ಕಳ ಮೇಲೆ ತನ್ನದೇ ಘನ ಪರಿಣಾಮವನ್ನುಂಟು ಮಾಡಿದೆ.

ಇದೇ ಕಾಲಘಟ್ಟದಲ್ಲಿ ಮಾಂಟೆಸ್ಸರಿ ಶಿಕ್ಷಣಾಧಿಕಾರಿಣಿ ಮಕ್ಕಳ ಸೈಕಾಲಜಿಯ ಹಿನ್ನೆಲೆಯಲ್ಲಿ ಶೈಕ್ಷಣಿಕ ಕಾರ್ಯನಿರ್ವಹಿಸಹತ್ತಿದಳು. ಈ ಪ್ರಕ್ರಿಯೆ ಮರಾಠಿ ಮಕ್ಕಳ ಸಾಹಿತ್ಯದ ಮೇಲೆ ಭಾರೀ ಪರಿಣಾಮವನ್ನೇ ಬೀರಿತು. ಹೊಸ ಸಂಚಲನದೊಂದಿಗೆ ರಚಿತಗೊಂಡ ಮರಾಠಿ ಮಕ್ಕಳ ಕಾವ್ಯ ಸರಳ ಮತ್ತು ರೋಮಾಂಚನಕಾರಿ ಸಂಗತಿಗಳನ್ನು ತನ್ನ ಕಾವ್ಯಗಳ ಮುಖ್ಯ ಧಾತುವಾಗಿ ಪರಿಗಣಿಸಿ ರಚನೆಗಿಳಿಯಿತು. ಇದು ಹೊಸ ಪಂಥಗಳನ್ನಷ್ಟುವಷ್ಟರಮಟ್ಟಿಗೆ ಖ್ಯಾತಿ

ಗಳಿಸಿದವು. ಮರಾಠಿ ಮಕ್ಕಳ ಸಾಹಿತ್ಯದಲ್ಲಿ ಈ ಹೊಸ ಬಗೆಯ ಪ್ರಯೋಗವನ್ನು ಮಾಡಿದ ಕವಿ ವಿ.ಜಿ. ಮಾಯದೇವ. ಮಕ್ಕಳು ಪ್ರಕೃತಿಯ ಪಕ್ಷಿ-ಪ್ರಾಣಿಗಳಿಗೆ ಪ್ರಶ್ನೆ ಹಾಕಿ ಉತ್ತರವನ್ನು ಪಡೆದುಕೊಂಡು ಪುಳಕಿತಗೊಳ್ಳುವ ರೋಮಾಂಚನಕಾರಿ ಸನ್ನಿವೇಶಗಳನ್ನು ತಮ್ಮ ಹಲವು ಕಾವ್ಯಗಳಲ್ಲಿ ಮಾಯದೇವ ಸೃಷ್ಟಿಸುತ್ತಾರೆ. ಇವರ 'ಮಿಥು ಮಿಥು ಪೋಪಾಟಾ' ಪದ್ಯ ಇದಕ್ಕೊಂದು ನಿದರ್ಶನ. ಈ ಕಾವ್ಯದಲ್ಲಿ ಗಿಳಿಗೆ ಪ್ರಶ್ನೆ ಹಾಕಿ ಉತ್ತರ ಪಡೆಯಲಾಗುತ್ತದೆ. ಮಾಯದೇವ ಮರಾಠಿ ಮಕ್ಕಳ ಸಾಹಿತ್ಯ ಕ್ಷೇತ್ರ ಕಂಡ ವಿಶೇಷ ಮತ್ತು ಧೀಮಂತ ಕವಿ. ಇವರ ಶಿಶುಗೀತಂ, ಬಾಲಗೀತ್, ಅಭಿನಯಗೀತ್, ಛಾಂದಗೀತ್‌ಗಳಲ್ಲಿ ಕಾವ್ಯ ಪ್ರಕಾರದ ಭಿನ್ನ ಹೊಳಹುಗಳನ್ನು ಗುರುತಿಸಬಹುದು. ಸ್ವಂತಿಕೆಯನ್ನೆಂದೂ ಬಿಟ್ಟುಕೊಡದ ಕವಿ ಮಾಯದೇವ.

ಆಧುನಿಕ ಮರಾಠಿ ಮಕ್ಕಳ ಸಾಹಿತ್ಯದ ಲೋಕದ ಮತ್ತೊಂದು ಶ್ರೇಷ್ಠ ಸಂಗತಿಯೇನೆಂದರೆ, ಸಾಂಪ್ರದಾಯಿಕ ಪೊರೆಯನ್ನು ಕಳಚಿಕೊಂಡು ಸ್ವತಂತ್ರವಾಗಿ ಕಲ್ಪನಾ ಲೋಕವನ್ನು ನಿರ್ಮಿಸಿ ಅದರಲ್ಲಿ ವಿಹರಿಸಿದ ಕೀರ್ತಿ ಇದರದ್ದು. ಈ ಬಗೆಯ ನವೀನ ಪರಂಪರೆಯಲ್ಲಿ ತೊಡಗಿಸಿಕೊಂಡು ಸಾಹಿತ್ಯ ರಚನೆಗೆ ತೊಡಗಿದ ಕವಿಗಳಲ್ಲಿ ಅಪರ್ಣಾ ದೇಶಪಾಂಡೆ, ಗೋಪಿನಾಥ್ ತಲ್ವಲಕರ್, ವಿ.ಎಂ. ಕುಲಕರ್ಣಿ, ಭವನಾಶಂಕರಪಂಡಿತ್, ಎನ್.ಜಿ. ಲಿಮಯೆ, ಜಿ.ಎಚ್. ಪಾಟೀಲ್, ಶಾಂತರಾಮ ಅಠವರೆ, ಸೂರ್ಯಕಾಂತ ಖಾಂಡೇಕರ್, ಸುಮತಿ ಪಾಯಗಾಂವಕರ, ಶಾಂತಾ ಶೇಳೆ ಮುಂತಾದವರನ್ನು ಹೆಸರಿಸಬಹುದು.

ಸೂರ್ಯ-ಚಂದ್ರರನ್ನು ಕೈಯಲ್ಲಿಡಿದು ಅಲ್ಲಾಡಿಸುವ ಆಸೆ ಹೊತ್ತ ಮಗುವಿನ ಮನೋ ಸೂಕ್ಷ್ಮತೆಯನ್ನು ಚಿತ್ರಿಸುವ ಸಂಜೀವಿನಿ ಮರಾಠೆಯವರ ಶಿಶುಕಾವ್ಯ ಇಂದಿಗೂ ಮರಾಠಿ ಮಕ್ಕಳ ಅಚ್ಚುಮೆಚ್ಚಿನ ಕಾವ್ಯ. ಆಯಾ ವಯೋಮಾನದ ಮಾನಸಿಕ ತುಮುಲಕ್ಕೆ ಸ್ಪಂದಿಸಿರುವುದು ಮರಾಠಿ ಮಕ್ಕಳ ಸಾಹಿತ್ಯದ ಹೆಚ್ಚುಗಾರಿಕೆ. "ಕೌತುಕದ ಅಂಶದಿಂದ ಕೂಡಿದ ಪ್ರಸಿದ್ಧ ಕತೆಗಳು ಎಲ್ಲಾ ಕಾಲದ ಮಕ್ಕಳನ್ನೂ ಆಕರ್ಷಿಸಿವೆ. ಕಥೆಯಲ್ಲಿನ ಅಭಿವೃದ್ಧಿ ಮತ್ತು ಸಮೃದ್ಧತೆ ಅಂಶಗಳು ಮಕ್ಕಳಿಗೆ ಪ್ರಿಯವಾದವುಗಳು. ಶೈಶವದಿಂದ ಪ್ರೌಢಾವಸ್ಥೆಗೆ ಬಂದಾಗ ಕಾಲ್ಪನಿಕ ವಸ್ತುವಿಗಿಂತ ವಾಸ್ತವತೆಯ ಅಂಶಕ್ಕೆ ವಿಷಯಗಳು ವಾಲುತ್ತವೆ."[೨] ಈ ಅಂಶ ಮರಾಠಿ ಮಕ್ಕಳ ಸಾಹಿತ್ಯ ಕಾಲ್ಪನಿಕ ವಿಷಯಗಳಿಗಿಂತ ವಾಸ್ತವ ವಸ್ತು ವಿಷಯಗಳನ್ನು ಕಟ್ಟಿಕೊಡುವುದರ ಮಹತ್ತರ ಉದ್ದೇಶದ ಹಿಂದೆ ಬಿದ್ದಿರುವ ಸಂಗತಿಯನ್ನು ತಿಳಿಸುತ್ತದೆ. ಈ ಅಂಶ ವಯೋಮಾನವನ್ನು ಅವಲಂಬಿಸಿದೆ ಎನ್ನುವುದನ್ನು ಮರೆಯುವ ಹಾಗಿಲ್ಲ.

ಮರಾಠಿ ಮಕ್ಕಳ ಸಾಹಿತ್ಯ ಐತಿಹಾಸಿಕ ಕಥನಗಳಿಗೆ ಸಾಕಷ್ಟು ಮಹತ್ವವನ್ನು ನೀಡಿದೆ. ಐತಿಹಾಸಿಕ ಪ್ರಜ್ಞೆ ಮಕ್ಕಳ ಮನೋವಿಕಾಸಕ್ಕೆ ಬೇಕಾದ ಬೇಸ್ ಒದಗಿಸುತ್ತದೆ. ಬಿ.ಡಿ. ಖೇರ್‌ರವರ ಐತಿಹಾಸಿಕ ಗೋಷ್ಠಿ, ಗೋಪಾಲರಾವ್ ಕುಲಕರ್ಣಿಯವರ ಮೋತ್ಯಾಮನ ಸಾಂಚ್ಯಾ ಗೋಷ್ಠಿ, ಜಿ.ಎಮ್. ವೈದ್ಯರ ಥೋರಂಚ್ಯಾ ಗೋಷ್ಠಿ, ಜಿ.ಎಸ್. ಸರದೇಸಾಯಿಯವರ ಮರಾಠಾಂಚಿರಾಜಕನ್ಯಾ ವಿ.ಜಿ. ಲೀಲೆಯವರ ಮರಾಠಾಂಚ್ಯ ವೀರಕಥಾ, ಡಿ. ಹಡವರರವರ ಸತ್ತಾವನ ಚಿ. ಸತ್ಯಕಥಾ,

ಎಸ್.ಕೆ. ದೇವಧರ್‌ರವರ ಶಾಸನ ಮತ್ತು ಜರಿಪತಾಕೆ, ಬಿ.ಆರ್. ಭಾಗವತರ ಸೋವಿದುತಾಚಾ ಸಮರಕಥಾ, ಡಿ.ಬಿ. ದೇಸಾಯರವರ ಸಾಹಾ ಸಾಸಸೆ, ಬಿ.ಡಿ. ಖೇರ್‌ರವರ ಸಾಹಸಿ ಸತ್ಯಕಥಾ ಮುಂತಾದ ಐತಿಹಾಸಿಕ ಕಥನಗಳಲ್ಲಿ ಮಕ್ಕಳ ಮನೋವಿಕಾಸಕ್ಕೆ ಸಹಕಾರಿಯಾಗುವ ಮತ್ತು ಸ್ಫೂರ್ತಿಯನ್ನು ನೀಡಬಲ್ಲ ಕಥಾವಸ್ತುವಿರುವುದನ್ನು ಗುರುತಿಸಬಹುದು.

ಇನ್ನು ಆಧುನಿಕ ಮರಾಠಿ ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ಸಾಕಷ್ಟು ಜನ ಕವಿಗಳು ಅಭೂತ ಪೂರ್ವ ಕಾರ್ಯ ಮಾಡುತ್ತಿದ್ದಾರೆ. ಮಹಿಳಾ ಲೇಖಕಿಯರದ್ದೂ ಇಲ್ಲಿ ಸಿಂಹ ಪಾಲಿದೆ. “ಆಧುನಿಕ ಮಹಿಳಾ ಲೇಖಕಿಯರಲ್ಲಿ ಲೀಲಾವತಿ ಭಾಗವತ ಮತ್ತು ಗಿರಿಜಾ ಕೀರ್‌ರ ಹೆಸರು ಕೇಳಿ ಬರುತ್ತವೆ. ಲೀಲಾವತಿ ಭಾಗವತರು ೧೯೫೪ರ ಹೊತ್ತಿಗೆ ಈ ಮೊದಲು ಕವಯತ್ರಿಯಾಗಿ ಮತ್ತು ಕಥೆಗಾರ್ತಿಯಾಗಿ ಈ ಕ್ಷೇತ್ರಕ್ಕೆ ಕಾಲಿರಿಸಿದವರು. ೧೯೭೦ರಷ್ಟೊತ್ತಿಗೆ ‘ಸ್ವರ್ಗಾಚಿ ಸಹಲವ ಆನ್ಯ ಕಹಾನಿಯಾನ್’ ಸಣ್ಣಕಥೆಗಳ ಕಥಾ ಸಂಕಲನ ಹೊರತಂದು ಒಳ್ಳೆಯ ಹೆಸರು ಮಾಡಿದರು. ಮಕ್ಕಳ ಪದ್ಯಕ್ಕಾಗಿ ಭಾರತ ಸರಕಾರವು ಅವರಿಗೆ ಬಹುಮಾನ ಕೊಟ್ಟಿದೆ.”[೧೩] ಒಟ್ಟಾರೆಯಾಗಿ ಮರಾಠಿ ಮಕ್ಕಳ ಸಾಹಿತ್ಯ ಪುರಾಣಗಳಲ್ಲಿ ಪ್ರವೇಶಿಸಿ, ಕೌತುಕ ಲೋಕವನ್ನಾಯ್ದು, ಐತಿಹಾಸಿಕ ಕಥನಗಳನ್ನು ಬಳಸಿಕೊಂಡು, ಆಧುನಿಕ ವಾಸ್ತವ ಪ್ರಜ್ಞೆಯೊಳಗೆ ತೇಲಿ ಬಂದಿದೆ. “ಮಹಾರಾಷ್ಟ್ರದಲ್ಲಿನ ಪ್ರಮುಖ ಪ್ರಕಾಶನ ಸಂಸ್ಥೆಗಳು ಮಕ್ಕಳಿಗಾಗಿಯೇ ಇರುವ ಸಾಹಿತ್ಯ ಪುಸ್ತಕಗಳನ್ನು ಪ್ರದರ್ಶನದಲ್ಲಿಡುವ ಜವಾಬ್ದಾರಿ ಹೊತ್ತಿವೆ. ಪ್ರತಿ ವರ್ಷ ಎಲ್ಲಾ ವಯಸ್ಸಿನ ಮಕ್ಕಳಿಗೆ, ಎಲ್ಲಾ ಸಾಹಿತ್ಯ ಪ್ರಕಾರಗಳಲ್ಲಿ ಭಾಗವಹಿಸಲು ಸ್ಪರ್ಧೆಗಳನ್ನೇರ್ಪಡಿಸಿ, ಗೆದ್ದವರಿಗೆ ಬಹುಮಾನ ಕೊಡುವ ಸಂಪ್ರದಾಯವನ್ನು ಈ ಪ್ರಕಾಶನ ಸಂಸ್ಥೆಗಳು ಮುಂದುವರೆಸಿಕೊಂಡು ಹೋಗುತ್ತಿವೆ. ‘ಮಕ್ಕಳ ರಂಗಭೂಮಿ’ ಸಂಸ್ಥೆ ಹಾಗೂ ‘ಬಾಲ ರಂಗಭೂಮಿ’ ಸಂಸ್ಥೆಗಳು ರಂಗಭೂಮಿಯ ಅಭಿವೃದ್ಧಿಗೆ ತುಂಬಾ ಪ್ರಯತ್ನಿಸುತ್ತಿವೆ. ಉದ್ದಾಮ ಲೇಖಕರಿಂದ, ವಿವೇಚನಾಪೂರ್ಣ ಪಾಲಕರಿಂದ ಮರಾಠಿ ಪ್ರಕಾಶಕರಿಗೆ ಸಹಕಾರ ಸಿಗುವ ಸಾರ್ಥಕತೆಯೇ ಹೆಚ್ಚಿದೆ.”[೧೪] ಹೀಗಾಗಿ ಮರಾಠಿ ಮಕ್ಕಳ ಸಾಹಿತ್ಯ ಹೊಸ ಬೆಳವಣಿಗೆಯನ್ನು ಕಾಣುವುದರಲ್ಲಿ ಸಂಶಯವಿಲ್ಲ.

### ತಮಿಳು ಭಾಷೆಯಲ್ಲಿ ಮಕ್ಕಳ ಸಾಹಿತ್ಯ

ತಮಿಳು ಭಾಷಾ ಸಾಹಿತ್ಯ ಕ್ರಿಪೂ. ೩ನೇ ಶತಮಾನದಿಂದ ಪ್ರಾರಂಭವಾಗುತ್ತದೆ. ಈ ಶತಮಾನದ ತಮಿಳು ಸಾಹಿತ್ಯವನ್ನು ಸಂಗಂ ಸಾಹಿತ್ಯವೆಂದು ಗುರುತಿಸಲಾಗಿದೆ. ಸಂಗಂ ಸಾಹಿತ್ಯದಲ್ಲಿ ಮೂರು ವಿಧ.

೧. ಪ್ರಾರಂಭದ ಸಂಗಂ ಯುಗ

೨. ಇಡೈಚ್ಚಂಗಂ – ಎರಡನೇ ಸಂಗಂ ಯುಗ

೩. ಕಡೈಚ್ಚಂಗಂ – ಕಡೆಯ ಸಂಗಂ ಯುಗ

ಈ ಮೂರೂ ಸಂಗಂ ಸಾಹಿತ್ಯ ಯುಗಗಳು ಮಕ್ಕಳಿಗಾಗಿ ಯಾವ ಪ್ರಕಾರವನ್ನೂ ರಚಿಸಲಿಲ್ಲ. ವಿಮರ್ಶೆ ಮತ್ತು ಸಾಹಿತ್ಯಿಕವಾಗಿ ಅತಿ ಮಹತ್ವದ ಕೃತಿಗಳು ಮಾತ್ರ ಈ ಕಾಲದಲ್ಲಿ ರಚಿಸಲ್ಪಟ್ಟವು. ಆದರೆ ತೊಲ್ಕಾಪ್ಪಿಯಂ ಕ್ರಿಪೂ. ೫ನೇ ಶತಮಾನದಿಂದಲೇ ಮಕ್ಕಳಿಗಾಗಿ ಯಥೇಚ್ಛ ಜಾನಪದ ಸಾಹಿತ್ಯವಿತ್ತು ಎಂದು ಗುರುತಿಸುತ್ತದೆ. ತಾಯಿ ಮಕ್ಕಳಿಗೆ, ಅಜ್ಜಿ ಮೊಮ್ಮಕ್ಕಳಿಗೆ ಇಂಥ ಕಥೆಗಳನ್ನು ಹೇಳುತ್ತಿದ್ದರೆಂದು, ಪ್ರಕೃತಿ, ಪ್ರಾಣಿ–ಪಕ್ಷಿಗಳು ಮಾನವರಂತೆ ಮಾತನಾಡುವ, ಮಾನವರಂತೆ ವಾಸಿಸುವ, ವರ್ತಿಸುವ ಸುಂದರ ಕಥಾ ಪ್ರಸಂಗಗಳ ಗುಚ್ಛಗಳೇ ತಮಿಳಿನಲ್ಲಿ ಸಿಗುತ್ತಿದ್ದವು. ಇವು ಮಕ್ಕಳ ಬೌದ್ಧಿಕ ವಿಕಾಸಕ್ಕೆ ಸಹಕಾರಿಯಾಗಿದ್ದವಲ್ಲದೆ ಅದೇ ಸಂದರ್ಭದಲ್ಲಿ ಬಳಕೆಯಲ್ಲಿದ್ದ ಒಗಟು, ನಾಣ್ಣುಡಿ, ಹಾಡುಗಳು ಅದ್ಭುತ ಲೋಕವನ್ನೇ ಸೃಷ್ಟಿಸಿದ್ದವು. ಬಾಲರಿಗಾಗಿ ಪುರಾತನ ತಮಿಳು ಸಾಹಿತ್ಯದಲ್ಲಿ ಇದ್ದ ಜಾನಪದ ಲೋಕವನ್ನು ಹಿಡಿದಿಡುವ ಪ್ರಥಮ ಪ್ರಯತ್ನ ಮಾಡಿದ ಕವಿ ಆರ್. ಅಯ್ಯಸ್ವಾಮಿ, ಇವರು ೨೦ನೇ ಶತಮಾನದ ಆರಂಭದ ಹೊತ್ತಿಗೆ 'ಕುಳೆಂದೈಗಳುಕ್ಕಾಗ ನಾಡೋಡಿ ಪಾಡಲ್ಗಳ್' ಎಂಬ ಹೆಸರಿನಲ್ಲಿ ಜಾನಪದ ಕಥೆ, ಒಗಟು, ನಾಣ್ಣುಡಿ, ಹಾಡುಗಳನ್ನು ಸಂಗ್ರಹಿಸಿ ಪ್ರಕಟಿಸಿದರು.

ಭಾರತೀಯ ಹಲವು ಭಾಷಾ ಮಕ್ಕಳ ಸಾಹಿತ್ಯಕ್ಕೆ ಕ್ರೈಸ್ತ ಮಿಶನರಿಗಳ ಕೊಡುಗೆ ಅಪಾರ ಎನ್ನುವುದನ್ನು ಅಸ್ಸಾಮ್ ಮಕ್ಕಳ ಸಾಹಿತ್ಯದ ಸಂದರ್ಭದಲ್ಲಿ ಗಮನಿಸಿದ್ದೇವೆ. ತಮಿಳು ಮಕ್ಕಳ ಸಾಹಿತ್ಯಕ್ಕೂ ಈ ಮಾತು ಅನ್ವಯವಾಗುತ್ತದೆ. ನಾಗರ ಕೋಯಿಲ್ ಕ್ರೈಸ್ತ ಸಮಾಜವು ೧೮೪೦ರಲ್ಲಿ ಮಕ್ಕಳಿಗಾಗಿ 'ಬಾಲ ದೀಪಿಕೈ' ಎಂಬ ತ್ರೈಮಾಸಿಕ ಪತ್ರಿಕೆಯನ್ನು ಪ್ರಕಟಿಸಿತು. ನಂತರ ಪಾಲಯನ್ ಕೋರ್ಟ್ಟೆ ಕರ್ಸ್ಟ್ರೈ ಸಮಾಜ 'ತಿರುವೆಳ್ಳೆಯಿನ್ ನೇಸತೋಳನ್' ಅಂದರೆ 'ಮಕ್ಕಳ ಪ್ರಾಣ ಸ್ನೇಹಿತ' ಎಂಬ ನಿಯತಕಾಲಿಕೆಯನ್ನು ಆರಂಭಿಸಿತು. ೧೮೫೯ರಲ್ಲಿ ಶ್ರೀಲಂಕ ಅಮೇರಿಕನ್ ರಿಲೀಜಿಯನ್ ಸೊಸೈಟಿಯು 'ಬಾಲಿಯರ್ ನೇಷನ್' ನಿಯತಕಾಲಿಕೆಯನ್ನು ಹೊರತಂದಿತು. ಈ ಮೂರೂ ನಿಯತಕಾಲಿಕೆಗಳನ್ನು ಹೊರತಂದದ್ದು ಕ್ರೈಸ್ತ ಮಿಷನರಿಗಳು ಎಂಬುದನ್ನು ಗಮನಿಸಬೇಕು. ಇದಕ್ಕಿಂತಲೂ ಮಹತ್ವಪೂರ್ಣ ಸಂಗತಿ ಎಂದರೆ ಈ ನಿಯತಕಾಲಿಕೆಗಳು ಮಕ್ಕಳ ಸಾಹಿತ್ಯಕ್ಕೆ ಜೊತೆ ಜೊತೆಗೆ ತಮಿಳು ಭಾಷೆಯ ಅಭಿವೃದ್ಧಿಗೆ ಶ್ರಮಿಸಿದವು. "೨೦ನೆಯ ಶತಮಾನದವರೆಗೆ ಮಕ್ಕಳಿಗಾಗಿ ತಮಿಳಿನಲ್ಲಿ ಪ್ರಸಿದ್ಧವಾದ ವಿವಿಧ ಸಾಹಿತ್ಯ ಪ್ರಕಾರಗಳು, ದೇವ, ದೇವತೆಗಳಿಗೆ ಸಂಬಂಧಪಟ್ಟ ಹಾಗೆ ಕಥೆಗಳು, ಕಾವ್ಯಗಳು, ಗಾದೆಗಳು, ಐತಿಹಾಸಿಕ, ಪೌರಾಣಿಕ ಚರಿತ್ರೆಗಳು, ಮಾಂತ್ರಿಕ ಕೌಶಲ್ಯ ಹಾಗೂ ನೈತಿಕ ವಿವೇಚನೆಗಳು ಮುಂತಾದವು ಪ್ರಕಟಗೊಂಡವು."[೧೫]

ಮಕ್ಕಳ ಪ್ರಪಂಚವೇ ಬೇರೆ. ಮಕ್ಕಳು ತಮ್ಮ ಆಟಿಕೆಗಳ ಜೊತೆಗೆ ಸಂಭಾಷಿಸುವ ಮಾತುಗಳೇ ಬೇರೆ. ಮಕ್ಕಳು ತಾವು ಹೊಂದಿರುವ ಪ್ರತ್ಯೇಕ ವ್ಯಕ್ತಿತ್ವದಿಂದಾಗಿಯೇ ಹಿರಿಯರ ಗಮನ ಸೆಳೆಯುತ್ತಿರುತ್ತಾರೆಂದು 'The God of small things' ಕೃತಿಗಾಗಿ ಪ್ರತಿಷ್ಠಿತ ಬೂಕರ್ ಪ್ರಶಸ್ತಿ ಪಡೆದ ಖ್ಯಾತ ಲೇಖಕಿ ಅರುಂಧತಿರಾಯ್ ಅಭಿಪ್ರಾಯ ಪಡುತ್ತಾರೆ. ತಮಿಳು ಮಕ್ಕಳ

ಸಾಹಿತ್ಯವನ್ನು ಗಮನಿಸಿದರೆ ಈ ತಾತ್ವಿಕತೆಯನ್ನು ೨೦ನೇ ಶತಮಾನದಷ್ಟೊತ್ತಿಗೆ ತಮಿಳು ಲೇಖಕರು ಅರಿತಿದ್ದರೆಂದೇ ಅನ್ನಿಸುತ್ತದೆ. ವಿವಿಧ ವಯೋಮಾನದ ಮಕ್ಕಳ ಮನಸ್ಥಿತಿಯನ್ನು ಅರಿತು ರಚಿತವಾದ ಸಾಹಿತ್ಯ ಪ್ರಕಾರಗಳನ್ನು ನಾವು ಆ ಶತಮಾನದಲ್ಲಿ ಗುರುತಿಸಬಹುದು. ದೇಶೀಯ ಮತ್ತು ವಿದೇಶೀಯ ಬೇರೆ ಬೇರೆ ಭಾಷೆಗಳಿಗೆ ಪೈಪೋಟಿ ನೀಡಬಲ್ಲ ಸಾಹಿತ್ಯ ಈ ಅವಧಿಯಲ್ಲಿ ರಚಿತವಾಯಿತು. ವಿಶೇಷವಾಗಿ ಈ ಅವಧಿಯನ್ನು 'ಮಕ್ಕಳ ಸಾಹಿತ್ಯದ ಸುವರ್ಣಯುಗದ ಆರಂಭದ ಕಾಲ'ವೆಂದೇ ಗುರುತಿಸಬಹುದು.

ಭಾರತಿ, ಕವಿಮಣಿ, ಭಾರತಿದಾಸನ್, ಕುದ್ಧಾನಂದ ಭಾರತಿ, ವಾಣಿರಾಸನ್, ತಮಿಳ್ ಬಲಿ ಮುಂತಾದ ಸುಪ್ರಸಿದ್ಧ ಸಾಹಿತಿಗಳು ಮಕ್ಕಳು ಹಾಗೂ ಹಿರಿಯರಿಗಾಗಿ ಬರೆದ ಬರಹಗಾರರಾಗಿ ನಿಲ್ಲುತ್ತಾರೆ. ೧೯೧೫ರಲ್ಲಿ ಸುಬ್ರಮಣ್ಯ ಭಾರತಿಯವರು 'ಪಾಪ್ಪ-ಪಾಟ್ಟು' ಅಂದರೆ ಮಗುವಿನ ಹಾಡು, ಬೆಳೆಯುವ ಮಕ್ಕಳಿಗಾಗಿ ಜೀವನ ಸಿದ್ಧಾಂತ ಹಾಗು ದೈನಿಕ ಕ್ರಮಗಳನ್ನು ಸೂಚಿಸುತ್ತಾ ಮಕ್ಕಳ ಹೃದಯದಲ್ಲಿ ಪ್ರಾಣಿ, ಪಕ್ಷಿ, ಮಾನವ, ದೇವರು ಕುರಿತ ಪ್ರೀತಿ, ಪ್ರೇಮಗಳನ್ನು ಈ ಕೃತಿಯ ಮೂಲಕ ತುಂಬಿದರು. ಇದಕ್ಕೂ ಮೊದಲು ಸುಬ್ರಮಣ್ಯ ಭಾರತಿಯವರು ರಚಿಸಿದ 'ಪುದಿಯ ಆರಿ ಚೂಡಿ' ಕೃತಿಯು ಇಂದಿಗೂ ತಮಿಳು ಮಕ್ಕಳಿಗೆ ಅಕ್ಷರ ಮಾಲೆಯನ್ನು ಸುಲಭವಾಗಿ ಕಲಿಯಲು ಮಾರ್ಗದರ್ಶಿ ಕೃತಿಯಂತಿದೆ. ಜೊತೆಗೆ ಲೇಖಕರು ಪ್ರಸ್ತುತ ಕೃತಿಯಲ್ಲಿ ಕಾದಂಬರಿಯ ಕಲ್ಪನೆಗಳನ್ನು ಹಾಗು ಸಾಂಪ್ರದಾಯಿಕ ವ್ಯವಸ್ಥೆಯ ನೈತಿಕ ಮೌಲ್ಯದ ಶಿಕ್ಷಣ ವಿಷಯವನ್ನು ಪ್ರಸ್ತಾಪಿಸುತ್ತಾರೆ. ಭಾರತಿದಾಸನ್‌ರವರು ರಚಿಸಿದ ಕವನಗಳು ಹೊಸ ಬಗೆಯ ಛಂದಸ್ಸುಗಳನ್ನು ಒಳಗೊಂಡಿರುವುದು ವಿಶೇಷ.

ತಮಿಳು ಮಕ್ಕಳ ಸಾಹಿತ್ಯಕ್ಕೆ ಶ್ರೇಷ್ಟ ಕೊಡುಗೆ ನೀಡಿದ ಲೇಖಕರೆಂದರೆ ಕವಿಯೋಗಿ ಶುದ್ಧಾನಂದ ಭಾರತಿ, ವಾಣಿದಾಸನ್, ತಮಿಳ್ ಅಳಗನ್, ಮಿನ್ನೂರ್ ಶ್ರೀನಿವಾಸನ್‌ರವರ 'ಕುಳಂದ್ಯೆ ಇಲಕ್ಕಿಯವಂ' ತಮಿಳ್ ಅಳಗನ್ ಬರೆದ 'ಮಳಲ್ಯೆ ಅಮುದಂ' ಮಿನ್ನೂರ್ ಶ್ರೀನಿವಾಸನ್‌ರವರ 'ವಣ್ಣ ವಣ್ಣ ಮಿನ್‌ಗಳ್' ಅಲಟ್ಟೂರ್ ಮೋಹನರಂಗಮ್‌ರ 'ಪಳ್ಳಿ ಪರವ್ವೆಗಳ್' ಕವನ ಸಂಕಲನಗಳು ಶ್ರೇಷ್ಟ ಮಕ್ಕಳ ಕಾವ್ಯ ಕೃತಿಗಳೆನಿಸಿವೆ. ಎ.ಕೆ. ಪರಂಧಾಮನ್‌ರವರ 'ಎಂಗಳ ತೋಟ್ಟಮ್' ಸಂಕಲನ ಭಾರತ ಸರ್ಕಾರದ ಪ್ರಶಸ್ತಿಯನ್ನು ಪಡೆದು ಶ್ರೇಷ್ಠ ಕೃತಿ ಎನಿಸಿದೆ. ಹಾಗೆ ಶಶಿದೇವನ್ ಮತ್ತು ಲೆಮನ್ ಮಕ್ಕಳ ಹಾಸ್ಯಕವಿಗಳನ್ನು ಕೂಡ ತಮಿಳು ಮಕ್ಕಳ ಸಾಹಿತ್ಯ ಕ್ಷೇತ್ರ ಒಳಗೊಂಡಿದೆ. ವಿಶೇಷವಾಗಿ ಲೆಮನ್ ಮಕ್ಕಳ ಹಾಸ್ಯ ಕವಿ ಬರೆದ 'ಕೊಕ್ಕರೊಕ್ಕೊ' ಸಂಕಲನ ಕೇಂದ್ರ ಸರ್ಕಾರದ ಪ್ರಶಸ್ತಿ ಪಡೆದಿದೆ.

ಈ ಎಲ್ಲಾ ಮಾತುಗಳು ತಮಿಳು ಮಕ್ಕಳ ಸಾಹಿತ್ಯದಲ್ಲಿ ಕಾರ್ಯನಿರ್ವಹಿಸಿದ ಪುರುಷ ಕವಿಗಳಿಗೆ ಸಂಬಂಧಿಸಿರುವುದಾಗಿದೆ. ಸ್ತ್ರೀ ಕವಯಿತ್ರಿಯರೂ ಈ ಕ್ಷೇತ್ರದಲ್ಲಿ ಗಮನಾರ್ಹ ಸೇವೆ ಸಲ್ಲಿಸಿದ್ದಾರೆ. ಅವರಲ್ಲಿ ಮುಖ್ಯವಾದ ಕವಯಿತ್ರಿಯರನ್ನು ಹೆಸರಿಸುವ ಪ್ರಯತ್ನ ಮಾಡಲಾಗಿದೆ.

ಕಾಮಾಕ್ಷಿ ಶ್ರೀನಿವಾಸನ್, ಜ್ವಾಲಾ ಜಯರಾಮನ್, ಮದಿ ಒಲಿ, ಭಾಗ್ಯ ಶಂಕರ್ ಮಕ್ಕಳ ಸಾಹಿತ್ಯ ಕ್ಷೇತ್ರದ ಗಮನಾರ್ಹ ಕವಯಿತ್ರಿಯರು. ವಿಶೇಷವಾಗಿ ಈ ಕವಯಿತ್ರಿಯರಲ್ಲಿ ಕಾಮಾಕ್ಷಿ ಶ್ರೀನಿವಾಸನ್‌ರವರು ರಚಿಸಿದ 'ಕುಳಂದೈ ಪಾಡಲಗಳ್' ಮಕ್ಕಳ ಅತ್ಯಂತ ಜನಪ್ರಿಯ ಕಾವ್ಯ. ಜ್ವಾಲಾ ಜಯರಾಮನ್‌ರವರ 'ಮಾಂಬಳಮ್' ಅಂದರೆ ಮಾವಿನಹಣ್ಣು ಎಂಬ ಪದ್ಯ ಅತ್ಯಂತ ಜನಪ್ರಿಯ ಮಕ್ಕಳ ಪದ್ಯ. ಈ ಪದ್ಯ ತಮಿಳು ಸಾಹಿತಿಗಳ ಸಂಘ ಏರ್ಪಡಿಸಿದ್ದ ಮಕ್ಕಳ ಕಾವ್ಯ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನವನ್ನು ಗಳಿಸಿತು. ತಮಿಳು ಸಾಹಿತ್ಯಕ್ಷೇತ್ರ ನಿರಂತರ ಕ್ರಿಯಾಶೀಲ ಸಾಹಿತ್ಯಿಕ ಚಟುವಟಿಕೆಗಳನ್ನು ನಡೆಸುತ್ತ ಬಂದ ಕ್ಷೇತ್ರ. ಕಥಾ ಸ್ಪರ್ಧೆ, ಕವನ ಸ್ಪರ್ಧೆ, ಲೇಖನ ಸ್ಪರ್ಧೆ, ಪ್ರಬಂಧ ಸ್ಪರ್ಧೆ, ಚರ್ಚಾಸ್ಪರ್ಧೆಗಳು ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ನಡೆಯುತ್ತಾ ಬಂದಿರುವುದು ಆ ಭಾಷಾ ಸಾಹಿತ್ಯದ ಹೆಗ್ಗಳಿಕೆ. "ಶ್ರೀಲಂಕಾ ಮತ್ತು ಮಲೇಷಿಯಾದಿಂದ ಬಂದ ಕೆಲವು ಲೇಖಕರೂ ಕೂಡ ತಮಿಳಿನಲ್ಲಿ ಮಕ್ಕಳ ಸಾಹಿತ್ಯದ ಅಭಿವೃದ್ಧಿಗೆ ವಿಶೇಷ ಕೊಡುಗೆಯನ್ನು ನೀಡಿದ್ದಾರೆ. ಶ್ರೀಲಂಕಾದಲ್ಲಿ ಶಿಕ್ಷಣಾಧಿಕಾರಿಯಾಗಿರುವ ಕೆ.ಎಸ್. ಆರುನಂದಿಯವರು ಮೊಟ್ಟಮೊದಲ ಬಾರಿಗೆ ಕವನ ಸ್ಪರ್ಧೆಯನ್ನು ಮಕ್ಕಳ ಸಾಹಿತ್ಯ ಲೇಖಕರಿಗಾಗಿ ಏರ್ಪಡಿಸಿದರು. ೧೯೩೩ರಲ್ಲಿ ಏರ್ಪಡಿಸಲಾದ ಈ ಸ್ಪರ್ಧೆಯಲ್ಲಿ ಉತ್ತಮ ಕೃತಿಗಳಿಗಾಗಿ ಆರು ಪ್ರಶಸ್ತಿಗಳನ್ನು ಸ್ಥಾಪಿಸಲಾಗಿತ್ತು. ಆನಂತರದಲ್ಲಿ ಆರುನಂದಿಯವರು ಸ್ಪರ್ಧೆಯಲ್ಲಿ ಪ್ರಶಸ್ತಿ ಪಡೆದ ಕವನಗಳು ಹಾಗು ಸ್ಪರ್ಧೆಗೆ ಬಂದಿದ್ದ ಇತರೆ ಮುಖ್ಯ ಕವಿತೆಗಳನ್ನೊಳಗೊಂಡ 'ಪಿಳ್ಳೆಪಾಟ್ಟು' (ಮಗುವಿನ ಹಾಡು) ಎಂಬ ಪುಸ್ತಕವನ್ನು ಪ್ರಕಟಿಸಿದರು. ಆನಂತರದಲ್ಲಿ ತಮಿಳುನಾಡಿನ ಪೂವಣ್ಣನ್ ಮತ್ತು ಅಯ್ಯಾಸಾಮಿಯವರು ೧೯೭೦ರಲ್ಲಿ ಕವನ ಸಂಗ್ರಹಗಳನ್ನೊಳಗೊಂಡ 'ಮುತ್ತು ಕುವಿಯಲ್' (ಮುತ್ತುಗಳ ರಾಶಿ) ಎಂಬ ಪುಸ್ತಕವನ್ನು ಹೊರತಂದರು. ಇವರ ನಂತರ ಶ್ರೀಲಂಕಾದಲ್ಲಿ ಪ್ರಕಟವಾದ ತಮಿಳು ಕವನ ಸಂಕಲನಗಳು ಎಂ.ವಿ. ಎಂ. ಸುಷ್ಕರ್ ಅವರ 'ಮಲರುಮ್ ಮನುಮುಂ', ಗೋಸುಧಾ ಅವರ 'ಬಾಲರ್ ಪಾಡಲ್', ಸುರಾನಖಯ್ಯುಂ ಅವರ 'ಕುಳಂದೈ ಇಲಕ್ಕಿಯವರ್' ಹಾಗೂ ಎನ್. ಮಹೇಶನ್ ಅವರ 'ಪಾಟ್ಟುಂ ಪದ್ಯೆಯುಮ್' ಇವು ಹೆಸರಿಸಬಹುದಾದ ಕೆಲವು ಶ್ರೇಷ್ಠ ಕೃತಿಗಳು".[೧೬]

ತಮಿಳು ಮಕ್ಕಳ ಸಾಹಿತ್ಯದಲ್ಲಿ ಈತನಕ ಸುಮಾರು ೨೫೦ ಶ್ರೇಷ್ಠ ಪುಸ್ತಕಗಳು ಹೊರಬಂದಿವೆ. ಇವುಗಳಲ್ಲಿ ಆಧುನಿಕ ಲೇಖಕರು ಮಕ್ಕಳಿಗಾಗಿ ರಾಮಾಯಣ, ಮಹಾಭಾರತ, ಜನಪದ, ಯಕ್ಷಿಣಿ ಕಥೆಗಳು, ಬುದ್ಧಿಸ್ಟ್ ಜಾತಕ ಕಥೆಗಳು, ಜಗತ್ತಿನ ಬೇರೆ ಬೇರೆ ರಾಷ್ಟ್ರಗಳ ಮಕ್ಕಳ ಕಥೆಗಳು, ಈ ಸೋಪನ ಕಥೆಗಳು, ಗ್ರಿಮ್ ಸೋದರರ ಕಥೆಗಳು, ಅರೇಬಿಯನ್ ನೈಟ್ಸ್ ಕಥೆಗಳನ್ನು ತಮಿಳಿಗೆ ತಂದಿದ್ದಾರೆ. ಹೀಗೆ ಬೇರೆ ಬೇರೆ ಮೂಲಗಳಿಂದ ಬಂದ ಕಥೆಗಳಲ್ಲಿ ಬಾಲ ದೀವಿಗೈ, ಸಿರುತಿಳ್ಳೆಯಿನ್ ನೇಸತೋಳನ್, ಬಾಲಯರ್ ಪೇಷನ್, ಬಾಲ ವಿನೋದಿನಿ ಹಾಗೂ ತಮಿಳರ್ ನೇಷನ್, ಆನಂದ ವಿಕಟನ್, ಕಲ್ಕಿ, ಸುದೇಸ ಮಿತ್ರನ್, ಕಲೈಮಗಳ್, ಅಮುದ ಸುರಭಿ, ಕಾಲ್ಮೆಕವಿರ್ ದಿನಮಣಿ ಕದಿರ್ ಮುಂತಾದವು ಪ್ರಕಟಗೊಂಡಿವೆ.

ತಮಿಳು ಸಾಹಿತ್ಯದಲ್ಲಿ ಅದರಲ್ಲೂ ವಿಶೇಷವಾಗಿ ತಮಿಳು ಮಕ್ಕಳ ಸಾಹಿತ್ಯದ ಕಾದಂಬರಿ ಕ್ಷೇತ್ರದಲ್ಲಿ ಹೆಸರು ಪಡೆದಿರುವ ಕವಿಕಣ್ಣನ್‌ರವರು ಸುಮಾರು ೫೦ ಕಾದಂಬರಿಗಳನ್ನು ಮಕ್ಕಳಿಗಾಗೇ ಬರೆದಿದ್ದಾರೆ. ಈ ಕಾದಂಬರಿಗಳು ಮಕ್ಕಳ ನಿಯತಕಾಲಿಕೆಗಳಲ್ಲಿ ಪ್ರಕಟಗೊಂಡು ಹೆಸರು ಮಾಡಿವೆ. ಸಾಹಿತ್ಯ ಮತ್ತು ಕಲಾ ಕ್ಷೇತ್ರಗಳಲ್ಲಿ ಕಣ್ಣನ್‌ರವರು ಸ್ಪರ್ಧೆಗಳನ್ನು ಏರ್ಪಡಿಸಿ ಹಲವು ಯುವ ಬರಹಗಾರರನ್ನು ಬೆಳಕಿಗೆ ತಂದ ಕೀರ್ತಿ ಸಂಪಾದಿಸಿದ್ದಾರೆ. ಅವರು ಬರೆಸಿದ ಮಕ್ಕಳ ಕೃತಿಗಳಲ್ಲಿ ಪ್ರಾಮುಖ್ಯತೆಯನ್ನು ಪಡೆದವುಗಳೆಂದರೆ ನೀಲಮ್ ಬರೆದ ಅಭಯಚ್ಛಾಗುಂ, ಆರ್ವಿಯವರ ಚಿನ್ನಚುಚು ಮತ್ತು ಪುದಿಯ ಮುಗಮ್ ಚಾಕ್ಕುಂ, ಮಯೂರನ್‌ರವರ ಗೆಟ್ಟಿಕ್ಕಾರನ್, ಇಳಿಯವನ್‌ರವರ ಪುದುಮೈನಂಜಮ್, ಜೋತಿರ್ಲತ ಗಿರಿಜಾರವರ ಸೆನ್ನಿದಿಲ್ಲೈ, ರೇವತಿಯವರ ಪಗಯಾಯ್ ವೆನ್ರಪಲ್ಲಾರನ್, ಕೆ. ವಿಜಯಲಕ್ಷ್ಮಿಯವರ ಅನ್ಬಿನ್ ವಲಿಮೈ, ಕೆ. ಕಣ್ಣುಸ್ವಾಮಿಯವರ ಅಣ್ಣನುಮ್ ತಂಗೈಯುಮ್, ಕೆ.ಆರ್. ಮೀನಾಕ್ಷಿಯವರ ವಳಿಕಾಟ್ಟಿ ಹಾಗೂ ಇನಿಯವನ್ ಪ್ರಕಟಿಸಿದ ಪೊನಮನಮ್‌ಗಳು ಮುಂತಾದವು ತಮಿಳು ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ಹೊರಬಂದ ಈ ಕೃತಿಗಳು ಹಲವು ಪ್ರಶಸ್ತಿ ಮತ್ತು ಬಹುಮಾನಗಳನ್ನು ಪಡೆದಿವೆ.

ತಮಿಳು ಮಕ್ಕಳ ಸಾಹಿತ್ಯ ಕ್ಷೇತ್ರ ಐತಿಹಾಸಿಕ ನಾಟಕಗಳಿಗೂ ಪ್ರಸಿದ್ಧಿ ಪಡೆದಿದೆ. ಐತಿಹಾಸಿಕ ಪ್ರಜ್ಞೆ ಮಕ್ಕಳ ಮನೋವಿಕಾಸಕ್ಕೆ ಕಾರಣವಾಗುತ್ತದೆ. ಇತಿಹಾಸ ಭೂತಕಾಲದ ಸಂಗತಿಗಳನ್ನು ತಿಳಿಸುವುದಾಗಿದ್ದರೂ ಅದು ವರ್ತಮಾನವನ್ನು ಬಳಸಿಕೊಂಡು ಭವಿಷತ್‌ಕಾಲ ಸಾಕ್ಷೀಕರಿಸುತ್ತದೆ. ಹಾಗಾಗಿ ಮಾನವ ಜನಾಂಗ ತನ್ನ ಇತಿಹಾಸವನ್ನು ರಚಿಸಿಕೊಳ್ಳುವ ಕ್ರಿಯೆಯಲ್ಲಿ ತೊಡಗುವಾಗ ಹಿಂದೆ ಆದ ಐತಿಹಾಸಿಕ ಸಂಗತಿಗಳ ಪ್ರಜ್ಞೆ ಬೇಕೇ ಬೇಕು. ಹಾಗಾಗಿಯೇ ಅಂಬೇಡ್ಕರ್‌ರವರು 'ಇತಿಹಾಸವನ್ನು ಮರೆತವನು ಇತಿಹಾಸವನ್ನು ಸೃಷ್ಟಿಸಲಾರ' ಎಂದು ಹೇಳಿದ್ದಾರೆ. ಇತಿಹಾಸದ ಸೃಷ್ಟಿಯ ಹಿಂದೆ ಒಂದು ಇತಿಹಾಸವಿರುತ್ತದೆ. ಹಾಗಿದ್ದಾಗ ಮಾತ್ರ ಸೃಷ್ಟಿಗೊಳ್ಳಲಿರುವ ಇತಿಹಾಸ ಎನಿಸಿಕೊಳ್ಳಲು ಯೋಗ್ಯವಾಗುತ್ತದೆ. ತಮಿಳು ಮಕ್ಕಳ ಸಾಹಿತ್ಯದಲ್ಲಿ ಐತಿಹಾಸಿಕ ನಾಟಕಗಳನ್ನು ಬರೆದ ಲೇಖಕರಲ್ಲಿ ಪ್ರಮುಖ ಹೆಸರು ಕೆ.ಎಮ್. ಭಕ್ತವತ್ಸಲಮ್‌ರವರದು. ಭಕ್ತವತ್ಸಲಮ್, ಚಕ್ರವರ್ತಿ ಅಶೋಕ, ರಾಣಿ ಪದ್ಮಿನಿ ಮತ್ತು ಮಂಜುಮ್ಮಾಳ್, ನೂರ್‌ಜಹಾನ್, ಛತ್ರಪತಿ ಶಿವಾಜಿ ಮುಂತಾದ ಖ್ಯಾತ ಐತಿಹಾಸಿಕ ನಾಟಕಗಳನ್ನು ರಚಿಸಿ ಮಕ್ಕಳ ಸಾಹಿತ್ಯಕ್ಕೆ ಗಮನಾರ್ಹ ಕಾಣಿಕೆ ಸಲ್ಲಿಸಿದ್ದಾರೆ.

ತಮಿಳು ಮಕ್ಕಳ ಸಾಹಿತ್ಯದ ಮತ್ತೊಂದು ವಿಶೇಷವೇನೆಂದರೆ ಮಹಾತ್ಮರ ಜೀವನ ಚರಿತ್ರೆಗೆ ಸಂಬಂಧಿಸಿದ ಕೃತಿಗಳನ್ನು ಹೊರತಂದಿರುವುದು. ಜೀವನ ಚರಿತ್ರೆಗೆ ಸಂಬಂಧಿಸಿದ ಕೃತಿಗಳು ಆದರ್ಶ ಮತ್ತು ಪ್ರಾಮಾಣಿಕತೆಗಳ ಬೋಧನೆಯನ್ನು ಮಾಡುತ್ತವೆ. ಮಕ್ಕಳ ಮುಂದಿನ ಜೀವನವನ್ನು ರೂಪಿಸುವಲ್ಲಿ ಜೀವನ ಚರಿತ್ರೆಗಳ ಪಾತ್ರ ತುಂಬಾ ಮುಖ್ಯ ಮತ್ತು ಅಗತ್ಯವೂ ಕೂಡ. 'ನಾನೂ ಹೀಗೆ ಬದುಕಬೇಕು' ಎಂಬ ಅಭೀಪ್ಸೆಯನ್ನು ಮಕ್ಕಳಲ್ಲಿ ಸೃಷ್ಟಿಸುವ ಸಾಹಿತ್ಯ

ಪ್ರಕಾರ ಆತ್ಮಚರಿತ್ರೆ, ತಮಿಳು ಮಕ್ಕಳ ಸಾಹಿತ್ಯ ಆತ್ಮಚರಿತ್ರೆ ಪ್ರಕಾರದಲ್ಲಿ ಮುಖ್ಯವಾಗಿ ಮಹಾತ್ಮಗಾಂಧಿ, ಪಂಡಿತ್ ಜವಾಹರಲಾಲ್ ನೆಹರು, ಸರ್ದಾರ್ ವಲ್ಲಭಭಾಯಿ ಪಟೇಲರನ್ನು ಆಯ್ದುಕೊಂಡು ರಚಿತವಾಗಿದೆ. ವಿವಿಧ ವಯೋಮಾನದ ಮಕ್ಕಳನ್ನು ಪರಿಗಣಿಸಿ ಆತ್ಮಚರಿತ್ರೆಗಳು ರಚನೆಯಾಗಿರುವುದು ವಿಶೇಷ. ಸರಳ ಭಾಷೆಯಲ್ಲಿ ರಚಿತವಾದ 'ಸೀತಾ'ರವರ ಕುಳಂದೈಗಾಂಧಿ, ವಕೀಲಗಾಂಧಿ, ಮತ್ತು ಪರ್ಕೈರ್ ಗಾಂಧಿ ಕೃತಿಗಳು ಜನಪ್ರಿಯ ಆತ್ಮಚರಿತ್ರೆ ಕೃತಿಗಳು. ಟಿ.ಜೆ. ರಂಗನಾಥನ್‌ರವರ ಪಾಪ್ಪಾವುಕ್ಕುಗಾಂಧಿ ಮತ್ತು ಪಾಪ್ಪಾವುಕ್ಕು ಭಾರತಿ ಆತ್ಮಚರಿತ್ರೆಗಳು. ಗಾಂಧೀಜಿಯವರ ಕಟ್ಟಾ ಅನುಯಾಯಿಯಾಗಿದ್ದ 'ಅಳವಳ್ಳಿ ಪುರವರ' ಅವರು ಕುಳಂದೈ ಕವಿಂಜರ್ ಎನ್ನುವ ಹೆಸರಿನಿಂದ ಪ್ರಸಿದ್ಧಿ ಪಡೆದ ಸಾಹಿತಿ ಯುಸೋಫನ ಕಥಾ ರೀತಿಯಲ್ಲಿ ಗಾಂಧೀಜಿಯ ಆತ್ಮಚರಿತ್ರೆಯನ್ನು ಮಕ್ಕಳಿಗಾಗಿ ರಚಿಸಿದ್ದಾರೆ.

ಗಾಂಧೀಜಿವಯರ ಬಗೆಗೆ ಸಾಕಷ್ಟು ವಿಷಯಗಳನ್ನು ಸಂಗ್ರಹಿಸಿ 'ಅಕವಳ್ಳಿಯತ್ತ'ರವರು ಸುಲಭವಾಗಿ ಮಕ್ಕಳಿಗೆ ಅರ್ಥವಾಗುವಂತೆ ಜನ್ನಂಜಿರುವರಿಯಲ್, ಪೆರಿಯೋರ್‌ವಾಳ್ ವಿಲೆ ಮತ್ತು ಪಿಳ್ಳೈಪರ್ವನೆಲೆ ಎಂಬ ಮೂರು ಆತ್ಮಚರಿತ್ರೆಗಳನ್ನು ರಚಿಸಿದ್ದಾರೆ. ಕಲ್ವಿಗೋಪಾಲ ಕೃಷ್ಣನ್‌ರವರು ಗಾಂಧೀಜಿ, ನೆಹರೂ ಮತ್ತು ಪಟೇಲರ ಆತ್ಮಚರಿತ್ರೆಯ ಮಕ್ಕಳ ಕೃತಿಗಳನ್ನು ರಚಿಸಿ ಮಕ್ಕಳ ಮನಸ್ಸು ಸೂರೆಗೊಳ್ಳಲು ಕಾರಣರಾದವರು. ಗಂಡುಪ ಇರೈಯಾನವರ್ ವಿಶಿಷ್ಟ ಪಾಟ್ಟೈ, ತೊಟ್ರುಂ ಬೆನ್ರದರ್, ತಂಗನಾತ್ತ ಮತ್ತು ಬಾನೋಲಿ ವಳಂಗಿಯವರ್ ಎನ್ನುವ ಮುಖ್ಯ ಕೃತಿಗಳನ್ನು ರಚಿಸಿದ ಸುಂದರವಡಿವೇಲರು ರಾಜಕೀಯ, ವಿಜ್ಞಾನ ಮತ್ತು ಸಾಹಿತ್ಯ ರಂಗಗಳ ಪುಸ್ತಕಗಳು ಪ್ರಶ್ನೆ ಉತ್ತರ ಮಾದರಿ ಮತ್ತು ಮಧ್ಯ ಸುಲಭ ಚಿತ್ರಗಳನ್ನು ಒಳಗೊಂಡಿವೆ.

ನೆಹರೂ ಆತ್ಮಕತೆಗೆ ಸಂಬಂಧಿಸಿದಂತೆ ತಿರುಕುದಾ ಸುಂದರಮ್ ರಚಿಸಿದ ಜವಹರ ಕದೈ, ಎಂ. ಷಣ್ಮುಗ ಸುಂದರ ಮಣಿಯಮ್‌ರವರ ನೆಹರು ಮಾಮ ಮತ್ತು ವೃಗೈ ಸುಬ್ರಮಣಿಯಮ್‌ರ ನೆಹರುವಿನ ಕದೈ ಖ್ಯಾತ ಕೃತಿಗಳು. ಈ ಕೃತಿಗಳು ನೆಹರೂರವರಿಗೆ ಮಕ್ಕಳ ಮೇಲಿದ್ದ ಪ್ರೀತಿ ಕುರಿತ ಕಥಾವಸ್ತುವನ್ನೊಳಗೊಂಡಿವೆ. ಈ ಕೃತಿಗಳಲ್ಲಿ ನೆಹರೂರವರನ್ನು ಭೇಟಿಯಾದ ನೂರಕ್ಕೂ ಹೆಚ್ಚು ಮಕ್ಕಳ ಚಿತ್ರಗಳು ಮತ್ತು ನೆಹರೂರವರ ಬಗ್ಗೆ ಮಕ್ಕಳು ಬರೆದ ಪ್ರಬಂಧಗಳೂ ಪ್ರಕಟಗೊಂಡಿವೆ.

ಒಟ್ಟಾರೆ ಹೇಳುವುದಾದರೆ ತಮಿಳು ಮಕ್ಕಳ ಸಾಹಿತ್ಯ ಮಕ್ಕಳಿಗಾಗಿ ಬರೆಯಲಾಗದ ಕ್ಷೇತ್ರವೇ ಇಲ್ಲ. ಎಲ್ಲಾ ಸಾಹಿತ್ಯ ಪ್ರಕಾರಗಳಲ್ಲೂ ತಮಿಳು ಮಕ್ಕಳ ಸಾಹಿತ್ಯ ರಚನೆಯಾಗಿದೆ. ಭಾರತೀಯ ವಿವಿಧ ಭಾಷೆಗಳ ಮಕ್ಕಳ ಸಾಹಿತ್ಯದಲ್ಲಿ ಗಣನೀಯ ಮತ್ತು ಹೇರಳ ಕೃತಿಗಳನ್ನು ಕೊಟ್ಟ ಕೀರ್ತಿ ತಮಿಳು ಸಾಹಿತ್ಯ ಕ್ಷೇತ್ರಕ್ಕೆ ಸಲ್ಲುತ್ತದೆ. ಜಗತ್ತಿನ ಅತಿ ಪುರಾತನ ಭಾಷಾ ಪರಂಪರೆಗೆ ಸೇರಿದ ಭಾಷೆಗಳಲ್ಲೊಂದಾದ ತಮಿಳು, ತನ್ನ ಭಾಷಾ ಕೀರ್ತಿಗೆ ಆ ಮೂಲಕ

ಮತ್ತೊಂದು ಗರಿಯನ್ನು ಮೂಡಿಸಿಕೊಂಡಿದೆ. ಮಕ್ಕಳ ಮನೋವಿಕಾಸದ ಇಚ್ಛಾಶಕ್ತಿಯನ್ನು ಪ್ರದರ್ಶಿಸಿದೆ.

**ತೆಲುಗು ಭಾಷೆಯಲ್ಲಿ ಮಕ್ಕಳ ಸಾಹಿತ್ಯ**

ಸುಮಾರು ೧೫೦೦ ವರ್ಷಗಳ ಭಾಷಾ ಚರಿತ್ರೆಯನ್ನು ಹೊಂದಿರುವ ತೆಲುಗು ಸಂಪದ್ಭರಿತ ಸಾಹಿತ್ಯ ಪರಂಪರೆಯ ಭಾಷೆ. ತನ್ನ ಸುದೀರ್ಘ ಸಾಹಿತ್ಯ ಚರಿತ್ರೆಯ ಸಂದರ್ಭದಲ್ಲಿ ತೆಲುಗು ಸಾಹಿತ್ಯವನ್ನು ಅಭ್ಯಾಸದ ಅಥವಾ ತಾತ್ವಿಕ ಅನುಕೂಲಕ್ಕಾಗಿ ಆರು ಭಾಗಗಳಾಗಿ ವರ್ಗೀಕರಿಸಲಾಗಿದೆ. ಕ್ರಿ.ಶ. ೧೦೦ ರಿಂದ ೧೦೨೦ರಲ್ಲಿ ಬಂದ ಸಾಹಿತ್ಯಕ್ಕೆ ನನ್ನಯ್ಯ ಪೂರ್ವಯುಗವೆಂದು, ಕ್ರಿ.ಶ. ೧೨೨೦ ರಿಂದ ೧೪೦೦ರ ಸಾಹಿತ್ಯವನ್ನು ಪುರಾಣಯುಗವೆಂದು, ಕ್ರಿ.ಶ. ೧೪೦೦ ರಿಂದ ೧೫೧೦ರ ಮಧ್ಯ ರಚನೆಯಾದ ಸಾಹಿತ್ಯವನ್ನು ಶ್ರೀನಾಥಯುಗವೆಂದು, ಕ್ರಿ.ಶ. ೧೫೧೦ ರಿಂದ ೧೬೦೦ರಲ್ಲಿ ರಚಿತವಾದ ಸಾಹಿತ್ಯವನ್ನು ಪ್ರಬಂಧಯುಗವೆಂದು, ಕ್ರಿ.ಶ. ೧೬೦೦ ರಿಂದ ೧೮೨೦ರ ಸಾಹಿತ್ಯವನ್ನು ದಕ್ಷಿಣಾತ್ಯಯುಗವೆಂದು ಮತ್ತು ೧೮೨೦ ರ ನಂತರದ ಸಾಹಿತ್ಯವನ್ನು ಆಧುನಿಕ ಯುಗವೆಂದು ತೆಲುಗು ವಿದ್ವಾಂಸರು ಗುರುತಿಸಿದ್ದಾರೆ.

ಭಾರತದ ಎಲ್ಲಾ ಭಾಷೆಗಳಲ್ಲಿ ಹೇರಳವಾಗಿ ದೊರಕುವಂತೆ ತೆಲುಗು ಭಾಷೆಯಲ್ಲಿಯೂ ವಿಪುಲ ಜಾನಪದ ಸಾಹಿತ್ಯ ಪ್ರಕಾರಗಳಿವೆ. ತೆಲುಗಿನಲ್ಲಿ ದೊರೆಯುವ ಈ ಜಾನಪದ ಹಾಡು ಮತ್ತು ಕಥೆಗಳು ಆ ಸಾಹಿತ್ಯದ ತಾಯಿ ಬೇರು. ಲಾಲಿ ಪಾಟಲು, ಉಗ್ಗು ಪಾಟಲು, ಜೋಲಪಾಟಲು ತೆಲುಗಿನಲ್ಲಿ ಸಾಕಷ್ಟು ದೊರಕುತ್ತವೆ. ಇವುಗಳನ್ನು ಮಕ್ಕಳಿಗಾಗಿ ದೊಡ್ಡವರು ಕಟ್ಟಿದ್ದಾರೆ. ದೊಡ್ಡವರು ಕಟ್ಟುವ ಮಕ್ಕಳ ಹಾಡುಗಳನ್ನು ಚಿಕ್ಕವರು ಹಾಡಿದಾಗಲೇ ಮಕ್ಕಳ ಸಾಹಿತ್ಯದ ಶ್ರೇಷ್ಟತೆ ಏನೆಂಬುದು ತಿಳಿಯುತ್ತದೆ. ಸಾಮಾನ್ಯವಾಗಿ ಬಟ್ಟೆಯಿಂದ ಮಾಡಿದ ಚಿಕ್ಕ ತೊಟ್ಟಿಲಿನಲ್ಲಿ ಮಗುವಿನ ಗೊಂಬೆಯನ್ನಾಕಿ ಎರಡು ಚಿಕ್ಕ ಗಿಡದ ಕೊಂಬೆಗಳಿಗೆ ದಾರಕಟ್ಟಿ ಲಾಲಿಹಾಡು ಅಥವಾ ಜೋಗುಳ ಹಾಡನ್ನು ಹಾಡಿ ತೂಗುವ ಚಿಕ್ಕ ಚಿಕ್ಕ ಹೆಣ್ಣು ಮಕ್ಕಳ ಆಟವನ್ನು ನಾವು ನೋಡಿರುತ್ತೇವೆ. ಮಗುವಿನ ಈ ಆಟದ ಕ್ರಿಯೆ ಜಗತ್ತಿಗೆ ತಾಯಿ ಹಾಡುವ ಹಾಡಿನ ಶ್ರೇಷ್ಟತೆಯನ್ನು ಸಾರುವ ಪ್ರಕ್ರಿಯೆ. ಜಾನಪದ ಜಗದ ಹಾಡು ಮತ್ತು ಕಥೆಗಳಲ್ಲಿ ಈ ಬಗೆಯ ಪಾರಂಪರಿಕ ಸಾಗಾಟದ ಪ್ರಕ್ರಿಯೆಯನ್ನು ಗುರುತಿಸಬಹುದು. ಶಿಷ್ಟ ಸಾಹಿತ್ಯದಲ್ಲಿ ಈ ಭಾವ ಗೌಣ. ಪ್ರೌಢ ಮಗುವೊಂದು ಪ್ರಾಥಮಿಕ ಮಕ್ಕಳನ್ನು ಸುತ್ತ ಕೂಡಿಸಿಕೊಂಡು 'ಒಂದೂರಲ್ಲಿ ಒಬ್ಬ ರಾಜ ಇದ್ದ' ಎಂದು ಕಥೆ ಹೇಳುವ ಪರಿಯೇ ಅಜ್ಜಿ ಅಥವಾ ಅಮ್ಮನ ಜನಪದ ಪರಂಪರೆಯ ದ್ಯೋತಕವಾಗಿ ನಿಲ್ಲುತ್ತದೆ.

ದಕ್ಷಿಣ ಭಾರತದ ಜಾನಪದ ಕವನಗಳನ್ನು 'Folk songs of south india' ಎಂಬ ಹೆಸರಿನಲ್ಲಿ ಆಂಗ್ಲ ವಿದ್ವಾಂಸ ಚಾರ್ಲ್ಸ್ ಈ. ಗ್ರೋವರ್ ೧೮೭೧ರಲ್ಲಿ ಸಂಗ್ರಹಿಸಿ ಪ್ರಕಟಿಸಿದ. ಗ್ರೋವರ್ ಪ್ರಕಟಿಸಿದ ಆ ಕೃತಿಯಲ್ಲಿ ಹೆಚ್ಚಿನ ಹಾಡುಗಳು ತೆಲುಗು ಭಾಷೆಯವಾಗಿದ್ದವು ಎಂಬುದು ವಿಶೇಷ. ಅದರ ಮಾರನೆ ವರ್ಷ ಅಂದರೆ ೧೮೭೨ರಲ್ಲಿ ರಾಘವಯ್ಯ ಮತ್ತು

೧೯೦೦ರಲ್ಲಿ ನಂದಿರಾಜ ಚಲಪತಿ ಎಂಬ ಕವಿಗಳು ಮಕ್ಕಳ ಪದ್ಯಗಳನ್ನೊಳಗೊಂಡ ಜಾನಪದ ಹಾಡುಗಳ ಬೃಹತ್ ಸಂಪುಟಗಳನ್ನು ಹೊರತಂದರು. ಅಧಿಕೃತವಾಗಿ ಈ ಇಸ್ವಿಗಳನ್ನು ತೆಲುಗು ಮಕ್ಕಳ ಸಾಹಿತ್ಯದ ಉಗಮ ಕಾಲವೆಂದು ಗುರುತಿಸಬಹುದು. ಶಿಕ್ಷಣ ಸಾರ್ವಜನಿಕ ವಲಯವನ್ನು ವ್ಯಾಪಿಸುತ್ತಿದ್ದ ಸಂದರ್ಭದಲ್ಲಿ ಉಪಾಧ್ಯಾಯರು ಕಲಿಸುತ್ತಿದ್ದ ಶಿಕ್ಷಣ ಪದ್ಧತಿ ಅರ್ಥ ಪ್ರಾಧಾನ್ಯಕ್ಕಿಂತ ಶಬ್ದ ಪ್ರಾಧಾನ್ಯಕ್ಕೆ ಹೆಚ್ಚು ಒತ್ತು ಕೊಟ್ಟು ಕಲಿಸುತ್ತಿದ್ದ ಸಂಗತಿಯನ್ನು ತೆಲುಗು ಮಕ್ಕಳ ಸಾಹಿತ್ಯದ ಆರಂಭದ ಚರಿತ್ರೆ ಹೊಂದಿದೆ. ಅಮರಕೋಶ, ಆಂಧ್ರನಾಮ ಸಂಗ್ರಹ, ಶಬ್ದಮಂಜರಿ, ರಾಮಾಯಣದ ಕೆಲವು ಭಾಗಗಳು, ಮಹಾಭಾರತ, ಭಾಗವತ, ಮನುಚರಿತ್ರೆ, ವಸುಚರಿತ್ರೆ, ಪಾರಿಜಾತಾಪಹರಣಗಳ ಕಲಿಕೆಗಳು ಈ ಅಂಶವನ್ನು ಸ್ಪಷ್ಟಪಡಿಸುತ್ತವೆ. ಇಂಗ್ಲಿಷ ಶಾಲೆಗಳು ಪ್ರಾರಂಭವಾದ ಮೇಲೆ ಈ ಪದ್ಧತಿ ತಪ್ಪಿತು. ಆದರೂ ಗಜೇಂದ್ರ ಮೋಕ್ಷ, ರುಕ್ಮಿಣೀ ಕಲ್ಯಾಣ, ಅಂಬರೀಷೋಪಾಖ್ಯಾನ, ಧ್ರುವೋಪಾಖ್ಯಾನ, ಅಜಮಿಳೋಪಾಖ್ಯಾನ, ವಾಮನ ಚರಿತ್ರೆ, ಪ್ರಹ್ಲಾದೋಪಾಖ್ಯಾನ ಇತ್ಯಾದಿ ಗ್ರಂಥಗಳ ಕೆಲ ಭಾಗಗಳು ಪಠ್ಯದಲ್ಲಿ ಸೇರಿದ್ದವು. ಮತ್ತು ಉಪಾಧ್ಯಾಯರು ಈ ಗ್ರಂಥಗಳ ಕೆಲ ಅಂಶಗಳನ್ನು ಮಕ್ಕಳಿಗೆ ಪರಿಚಯಿಸುತ್ತಾ ನೀತಿ ಬೋಧನೆಗೆ ನಾಂದಿ ಹಾಕಿದ್ದರು.

ಕನ್ನಡದಲ್ಲಿ ಉಪಲಬ್ಧವಿರುವ ಗೋವಿನ ಹಾಡು ತೆಲುಗು ಮಕ್ಕಳ ಸಾಹಿತ್ಯದಲ್ಲೂ ಉಪಲಬ್ಧವಿದೆ. ಗೋವಿನ ಹಾಡು 'ಅನಂತಾ ಮಾತ್ಯ' ಕವಿಯ 'ಭೋಜ ರಾಜೀಯ' ಕಾವ್ಯದಲ್ಲಿ ಕಂಡು ಬರುತ್ತದೆ. ತೆಲುಗು ಮಕ್ಕಳಿಗೆ ಈ ಹಾಡು ತುಂಬಾ ಪ್ರಿಯವಾದದ್ದು. ೧೯ನೆಯ ಶತಮಾನದಲ್ಲಿ ತೆಲುಗು ಭಾಷೆಯ ಖ್ಯಾತ ಪಂಡಿತ ಕವಿಗಳು ಬಾಲ ಸಾಹಿತ್ಯ ರಚನೆಗೆ ತೊಡಗಿದ್ದು ಭಾರತೀಯ ಮಕ್ಕಳ ಸಾಹಿತ್ಯದಲ್ಲೇ ತೆಲುಗು ಮಕ್ಕಳ ಸಾಹಿತ್ಯದ ವಿಶೇಷ ಎನ್ನಬಹುದು. ತಮ್ಮದೇ ಆದ ಪ್ರತ್ಯೇಕ ಸಾಹಿತ್ಯಿಕ ಶೈಲಿಯಲ್ಲಿ ತೆಲುಗಿನ ಖ್ಯಾತನಾಮಧೇಯ ಪಂಡಿತರಾದ 'ನಾಳಂ ಕೃಷ್ಣರಾವ್', ನ್ಯಾಯಪತಿ ರಾಘವರಾವ್, ವೆಂಕಟ ಪಾವತೀಶ್ವರ ಕವುಲು, ಗೆಜ್ಜೆಲ ರಾಮಾನುಜಲುನಾಯ್ಡು, ಕಂದುಕೂರಿ ವೀರೇಶ ಲಿಂಗಂ ಪಂತುಲು, ವಾವಿಕೊಲನು ಸುಬ್ಬಾರಾವು, ಗಿಡುಗು ವೆಂಕಟ ಸೀತಾಪತಿ ಕವಿಗಳು ಪ್ರಮುಖ. ವಿಶೇಷವಾಗಿ ಗೆಜ್ಜೆಲ ರಾಮಾನುಜನಾಯ್ಡು ಹುಡುಗಿಯರಿಗೆಂದು 'ಸತಿಹಿತ ಸಂಗ್ರಹಂ' ಮತ್ತು ಹುಡುಗರಿಗಾಗಿ 'ವಿವೇಕ ಸಂಗ್ರಹಂ' ಎಂಬ ಎರಡು ಕೃತಿಗಳನ್ನು ೧೮೩೪ರಲ್ಲಿ ಬರೆದು ಪ್ರಕಟಿಸಿದರು. ಈ ಎರಡು ಕೃತಿಗಳು ತೆಲುಗು ಮಕ್ಕಳ ಸಾಹಿತ್ಯ ಕ್ಷೇತ್ರಕ್ಕೆ ಸಂದ ಗಟ್ಟಿ ಸಾಹಿತ್ಯ ಬೇರು. ೧೦ ವರ್ಷದ ಮಕ್ಕಳಲ್ಲಿ ಓದುವ ಆಸಕ್ತಿಯನ್ನು ಬೆಳೆಸಿ ಅವರ ಮಾನಸಿಕ ವಿಕಾಸ ಮತ್ತು ಉಲ್ಲಾಸಕ್ಕಾಗಿ ನಾಯ್ಡುರವರು ಬರೆದು ಪ್ರಕಟಿಸಿದ 'ಕಾಶೀಮಜಲೀ ಕಥಲು, ಕಾಂಬೋಜರಾಜ ಕಥಲು, ತಾತಾಚಾರ್ಯನು ಕಥಲು, ತೆನಾಲಿ ರಾಮಕೃಷ್ಣನು ಕಥಲು, ಶುಕಸಪ್ತತಿ ಕಥಲು, ಬೇತಾಳ ಪಂಚವಿಂಶತಿ ಕಥಲು, ಪಲುಕನಿ ಪದ್ಮಾಕ್ಷಿ ಕಥಲು' ಕೃತಿಗಳು ತೆಲುಗು ಮಕ್ಕಳ ಸಾಹಿತ್ಯಕ್ಕೆ ಭದ್ರಬುನಾದಿಯನ್ನು ಹಾಕಿದವು.

ಇನ್ನು ಕಂದಕೂರಿ ವೀರೇಶ ಪಂತುಲು ೧೮೭೪ರಲ್ಲಿ ಬಾಲಕಿಯರಿಗಾಗಿ ಬರೆದ 'ಸ್ತ್ರೀ ದೀಪಿಕ' ಮತ್ತು ಬಾಲ ಬಾಲಕಿಯರಿಬ್ಬರಿಗೂ ಸೇರಿ ೧೮೮೩ರಲ್ಲಿ 'ನೀತಿ ದೀಪಿಕ' ಕೃತಿಗಳನ್ನು ರಚಿಸಿದರು. ೧೯ನೇ ಶತಮಾನದ ಮಹಾನ್ ಸಾಮಾಜಿಕ ಸುಧಾರಕರೆಂದು ಕಂದಕೂರಿ ವೀರೇಶ ಪಂತುಲು ಅವರನ್ನು ಆಂಧ್ರನಾಡು ಗುರುತಿಸುತ್ತದೆ. ಸ್ತ್ರೀ ದೀಪಿಕ ಕೃತಿಯಲ್ಲಿ ಈಸೋಪನ ನೀತಿಕಥೆಗಳ ೧೫೮ ಕಥೆಗಳಿವೆ. ೧೯೦೪ರಲ್ಲಿ ಮಕ್ಕಳಿಗಾಗಿಯೇ ತೆಲುಗಿನಲ್ಲಿ 'ಚಿಂತಾಮಣಿ' ಎಂಬ ಪತ್ರಿಕೆಯನ್ನು ಹೊರತರಲಾಯ್ತು. ಈ ಪತ್ರಿಕೆ ಪಂತುಲು ಅವರ ಅನೇಕ ನೀತಿಕಥೆಗಳನ್ನು ಪ್ರಕಟಿಸಹತ್ತಿತು. ಸುಳ್ಳು ಹೇಳುವುದರಿಂದ ಆಗುವ ಅನಾಹುತ ಮತ್ತು ಸತ್ಯಕ್ಕೆ ಎಂದೂ ಸಾವಿಲ್ಲ ಎಂಬ ನೀತಿಗಳು ಪಂತುಲು ಅವರ ಕಥೆಗಳಲ್ಲಿ ಕಂಡು ಬರುತ್ತಿದ್ದರಿಂದ 'ಪರೋಪಕಾರಂತಿಯ್ಯ ಮಂದಲು, ಬಾದಂಕಾಯ ವರಿಕಂಕಲು, ವೆಲಲೇನಿ ಚಿನ್ನ ಮೂಲಕ' ಕಥೆಗಳು ಮೊಟ್ಟಮೊದಲಬಾರಿಗೆ ಚಿಂತಾಮಣಿ ಪತ್ರಿಕೆ ಪ್ರಕಟಿಸಿತು.

ಭಾರತ ದೇಶದ ಅನೇಕ ಭಾಷೆಗಳ ಮೇಲೆ ಪಾಶ್ಚಾತ್ಯ ಸಾಹಿತ್ಯದ ಪ್ರಭಾವ ತನ್ನದೇ ಆದ ಛಾಪನ್ನು ಮೂಡಿಸಿದಂತೆ ತೆಲುಗು ಸಾಹಿತ್ಯದ ಮೇಲೂ ಮೂಡಿಸಿತು. ಇದರ ಪರಿಣಾಮವಾಗಿ ತೆಲುಗು ಮಕ್ಕಳ ಸಾಹಿತ್ಯ ಹೊಸ ನೀರಲ್ಲಿ ಮೀಯಹತ್ತಿತು. ಇದರಿಂದಾಗಿ ಮಕ್ಕಳ ಪುಸ್ತಕಗಳು ಹೊಸ ಹೊಸ ಚಿಂತನಾಶೀಲತೆಯನ್ನು ಪಡೆದು ಪ್ರಕಟಗೊಳ್ಳತೊಡಗಿದವು. ವಸ್ತು, ತಂತ್ರ ಮತ್ತು ಶೈಲಿಗಳಲ್ಲಿ ಬದಲಾವಣೆಗಳು ಸಂಭವಿಸಿ ಅನೇಕ ಮಕ್ಕಳ ಕೃತಿಗಳು ರಚನೆಯಾಗತೊಡಗಿದವು. ಆಧುನಿಕತೆ ಮತ್ತು ಪರಂಪರೆಗಳೆರಡನ್ನೂ ಹಿತಮಿತವಾಗಿ ಬೆರೆಸಿ ಮಕ್ಕಳಿಗಾಗಿ ಕೃತಿ ರಚಿಸಿದ ಪ್ರಥಮರು 'ಗುರುರಾಜ ಅಪ್ಪಾರಾವ್' ಅವರು 'ಕನ್ಯಕ' ಮತ್ತು 'ಪೂರ್ಣಮ್ಮ' ಎಂಬ ಎರಡು ಕಾದಂಬರಿಗಳನ್ನು ಮಕ್ಕಳಿಗಾಗಿಯೇ ಬರೆದರು. 'ಮುತ್ಯಾಲ ಸರಾಲು', 'ಡಾಮನ್ ಪಿತಿಯಸ್' ಕೃತಿಗಳು ಮಕ್ಕಳ ಕಾವ್ಯ ಸಂಗ್ರಹಗಳು. ತೆಲುಗು ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ಅಪ್ಪಾರಾವ್‌ರವರ ಈ ನಾಲ್ಕು ಕೃತಿಗಳು ತನ್ನದೇ ಆದ ಶ್ರೇಷ್ಠ ಸ್ಥಾನವನ್ನು ಪಡೆದುಕೊಂಡಿವೆ. ಅಷ್ಟೇ ಅಲ್ಲ ತೆಲುಗು ಮಕ್ಕಳಿಗೆ ಇಂದಿಗೂ ಅತಿ ಪ್ರೀತಿಯ ಕೃತಿಗಳಾಗಿವೆ.

ಆಧುನಿಕ ತೆಲುಗು ಮಕ್ಕಳ ಸಾಹಿತ್ಯ ಎಂದೂ ಮರೆಯದ ಮತ್ತೊಬ್ಬ ಶ್ರೇಷ್ಠ ಕವಿ ನಾಳಂ ಕೃಷ್ಣಾರಾವ್‌ರವರು. ಕೃಷ್ಣಾರಾವ್ 'ಗೋರು ಮುದ್ದಲು, ಮೀಗಡ ತರಕಲು, ತೇನೆ ಚಿನುಕುಲು, ವೆನ್ನಲ ವೆಲುಗುಲು, ವೆನ್ನ ಬುಡಗಲು, ಪಾಲ ತರಗಲು, ದೀಪಾವಳಿ, ಬಂಗಾರು ಪಂಡ್ಲು ಇತ್ಯಾದಿ ಕಥೆ, ಕವನ, ನಾಟಕಗಳನ್ನು ರಚಿಸಿ ಮಕ್ಕಳ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. ಕನ್ನಡದಲ್ಲಿ 'ಕಾಡಿನೊಳಗೊಂದು ಗುಡಿಸಲಿನಲ್ಲಿ ವಾಸವಾಗಿದ್ದ ಹಣ್ಣು ಹಣ್ಣಾದ ಮುದುಕ ನೆಲ ಬಗೆದು ಮಾವಿನ ಗೊಟ್ಟಗಳನ್ನು ಹೂಳುತ್ತಿದ್ದುದನ್ನು ಬೇಟೆಗೆ ಬಂದ ರಾಜ ಹುಚ್ಚು ಮುದುಕ, ಈತ ನೆಟ್ಟ ಮಾವಿನ ಗೊಟ್ಟಗಳು ಗಿಡವಾಗಿ ಮರವಾಗಿ ಹಣ್ಣು ಬಿಡುವುದರೊಳಗೆ ಈತನೇ ಇರುವುದಿಲ್ಲ ಎಂದುದನ್ನು ಕೇಳಿಸಿಕೊಂಡ ಮುದುಕ ನಾನು ನೆಡುವ ಗಿಡಗಳಿಂದ ಮಾವಿನ ಹಣ್ಣನ್ನು ತಿನ್ನಬೇಕೆಂಬ ಆಸೆಯಿಂದ ನೆಡುತ್ತಿಲ್ಲ ಬದಲಿಗೆ ನಮ್ಮ

ಹಿರಿಯರು ಮಾಡಿದ ಕೆಲಸವನ್ನೇ ನಾನೂ ಮಾಡುತ್ತಿದ್ದೇನೆ. ನಮ್ಮ ಹಿರಿಯರು ನಿಸ್ವಾರ್ಥದಿಂದ ಆ ಕೆಲಸ ಮಾಡಿದ್ದರಿಂದ ತಾನೇ ನಾನು, ನೀವು ಈಗ ಮಾವಿನ ಹಣ್ಣನ್ನು ತಿನ್ನುತ್ತಿರುವುದು ಎಂದು ಉತ್ತರ ಕೊಡುವ ಕಥೆ ಮೂಲ ತೆಲುಗಿನ ಕಥೆ. ಆ ಕಥೆಯ ಸೃಷ್ಟಿಕರ್ತ ನಾಳಂ ಕೃಷ್ಣರಾವ್. ನಾಳಂರವರು ಈ ಕಥೆಯನ್ನು ತಮ್ಮ 'ಬಂಗಾರು ಪಂಡ್ಲು' ಅಂದರೆ ಬಂಗಾರದ ಹಣ್ಣು ಎಂಬ ಕವನ ಸಂಕಲನದಲ್ಲಿ ಪದ್ಯ ರೂಪದಲ್ಲಿ ಪ್ರಕಟಿಸಿದ್ದಾರೆ.

"ಅಡವಿ ಲೋಪಲನೊಕ ಪೂರಿ ಗುಡಿಸೆಯಂದು
ಕಾಪುರ ಮುಂಡು ಮುದುಸಲಿ ಕಾಪುವಾಡು
ಅತಡೊಕನಾಡು ಭೂಮಿಲೋ ಪಾತುಚುಂಡೆ
ಚೆನ್ನಿ ಮಾಮಿಡಿ ಟಂಕಲ ಕೊನ್ನಿ ತೆಚ್ಚಿ..."[೧೭]

ಎಂದು ಆ ಕಥನ ಕವನ ಪ್ರಾರಂಭಗೊಳ್ಳುತ್ತದೆ. ಇಂದಿಗೂ ಈ ಮಕ್ಕಳ ಹಾಡು, ಹಾಡಾಗಿ ಮತ್ತು ಕಥೆಯಾಗಿ ತೆಲುಗು ಮಕ್ಕಳ ಮನಸ್ಸಿನಲ್ಲಿ ನೆಲೆನಿಂತಿದೆ ಅಷ್ಟೇ ಅಲ್ಲ ಕನ್ನಡ ಮಕ್ಕಳಲ್ಲೂ ಈ ಕಥೆ ಖ್ಯಾತಿಗಳಿಸಿದೆ.

ತೆಲುಗು ಮಕ್ಕಳ ಸಾಹಿತಿಗಳಿಗೆಂದೇ ಆಂಧ್ರ ಪ್ರದೇಶಲ್ಲಿ 'ತೆಲುಗು ಬಾಲಲ ರಚಯಿತಲ ಸಂಘಂ' ಎಂಬ ಸಂಘಟನೆಯನ್ನೇ ಹುಟ್ಟುಹಾಕಲಾಗಿದೆ. ಈ ಸಂಘದ ಅಧ್ಯಕ್ಷರಾಗಿ ಸುಧೀರ್ಘಕಾಲ ಕಾರ್ಯ ನಿರ್ವಹಿಸಿದ ಮದ್ದಲೂರು ರಾಮಕೃಷ್ಣರವರು ಮಕ್ಕಳೊಳಗೆ ಕುತೂಹಲ ಮೂಡಿಸುವ ಕಥೆಗಳನ್ನು ಬರೆಯುವಲ್ಲಿ ಖ್ಯಾತಿಗಳಿಸಿದವರು. ಮಕ್ಕಳಿಗಾಗಿ ಬರೆಯುವ ಅನೇಕ ಯುವ ಕವಿಗಳಿಗೆ ಮಾರ್ಗದರ್ಶನ ನೀಡುತ್ತಿದ್ದ ರಾಮಕೃಷ್ಣರವರು 'ಮುದ್ದು ಬಿಡ್ಜಲು', ಅಂದಾಲ ಪಾಪಲು, ಪಕ್ಷುಲ ಕಥಲು, ಅಂದರಿದೀ ಈ ತೋಟ, ಎಸ್ಕಿಮೋ ಕಥಲು, ಆಫ್ರಿಕಾ ಬಾಲಲ ಕಥಲು, ಬುದ್ಧುನಿ ಬೊಮ್ಮ, ಮಾ ಕಥ ವಿಂಟಾರಾ, ಭೂಮಾತುಕು ವಂದನಂ, ಗೋಮುಖಯಾತ್ರ, ನಿತ್ಯ ಜೀವನಂಲೊ ವಿಜ್ಞಾನಂ, ಪದ ಸಂಪದಂ ಮುಂತಾದ ಮಹತ್ವ ಪೂರ್ಣ ಮಕ್ಕಳ ಕೃತಿಗಳನ್ನು ನೀಡಿದ್ದಾರೆ. ವಿಶೇಷವಾಗಿ 'ಮಾ ಕಥಾ ವಿಂಟಾರಾ' ಕೃತಿಯಲ್ಲಿ ಪ್ರಾಣಿ, ಪಕ್ಷಿಗಳ ಸ್ವಗತದ ಕಥೆಗಳನ್ನು ಬರೆದರು. ಮತ್ತು ಮಕ್ಕಳಲ್ಲಿ ಪರಿಸರ, ದೇಶಾಭಿಮಾನ ಮತ್ತು ಮಾನವೀಯ ಮೌಲ್ಯಗಳನ್ನು ಬಿತ್ತಲು ತಂದ ಕೃತಿಯೇ 'ಭೂಮಾತಕು ವಂದನಂ' ಕೃತಿ. ಹೀಗೆ ಮದ್ದಲೂರು ರಾಮಕೃಷ್ಣರವರು ಹಲವು ಮಗ್ಗಲುಗಳಲ್ಲಿ ಸಾಗಿ ಮಕ್ಕಳ ಕೃತಿಗಳನ್ನು ರಚಿಸಿದ್ದಾರೆ. ಇವರ ಸಾಹಿತ್ಯ ಕೃಷಿಯನ್ನು ಗಮನಿಸಿ ಕೇಂದ್ರ ಸರ್ಕಾರ ಇವರಿಗೆ 'ಬಾಲಸಾಹಿತೀ ವಿಭೂಷಣ' ಬಿರುದನ್ನು ಕೊಟ್ಟು ಗೌರವಿಸಿದೆ.

ಭಾರತೀಯ ಮಕ್ಕಳ ಸಾಹಿತ್ಯ ಕ್ಷೇತ್ರ ದೇಶೀ ಭಾಷೆಗಳಲ್ಲೇ ವಿಶೇಷ ಕೀರ್ತಿಯನ್ನು ಪಡೆದ ಹೊಸ ಛಾಪನ್ನು ಮೂಡಿಸಿದ ಕೀರ್ತಿಗೆ ಭಾಜನವಾಗಿದೆ. ಮಕ್ಕಳ ಮೃದು ಮನಸು ಹಿರಿಯರು ಹೇಳುವ ಮತ್ತು ಹೊಗಳುವ ಕೆಲವು ಪ್ರಾಣಿ-ಪಕ್ಷಿಗಳ ದೈನಂದಿನ ಜೀವನಕ್ರಮಗಳನ್ನು ಬಹುಬೇಗ

ಹಿಡಿದಿಟ್ಟುಕೊಳ್ಳುತ್ತದೆ. ಎಷ್ಟೋ ಬಾರಿ ಹಿರಿಯರು ಕೋಗಿಲೆಯ ಕಂಠವನ್ನು ಹಾಡಿ ಹೊಗಳುತ್ತಾ ಸುಂದರವಾಗಿ ಹಾಡುವ ಮಗುವಿನ ಕಂಠವನ್ನು ಕೋಗಿಲೆ ಕಂಠಕ್ಕೆ ಹೋಲಿಸುವುದುಂಟು. ಹೀಗಾಗಿ ಗಿಳಿ, ಕೋಗಿಲೆಗಳಿಗೆ ಸಾಹಿತ್ಯ ಲೋಕ ನೀಡಿದ ವಿಶೇಷ ಸ್ಥಾನದಿಂದಾಗಿ ಮಕ್ಕಳ ಮನಸ್ಸೂ ಅವುಗಳಿಗೆ ತಮ್ಮದೇ ಸ್ಥಾನಮಾನ ನೀಡಿರುತ್ತದೆ. ಅಂತಹ ಮನಸ್ಸುಗಳನ್ನು ವಾಸ್ತವ ಲೋಕಕ್ಕೆ ಸೆಳೆದ ಕೀರ್ತಿ ತೆಲುಗಿನ ಮಕ್ಕಳ ಸಾಹಿತಿ 'ಗೋಗಿರ ಸೀತಾರಾಮ್'ರವರದು. ಅವರು ಏನೇ ಬರೆದರೂ, ಹೇಗೆ ಹಾಡಿದರೂ ಚಿಕ್ಕ ಮಕ್ಕಳಿಗಾಗಿಯೇ ಬರೆಯುತ್ತಿದ್ದರು. ಮತ್ತು ಅವರಿಗಾಗಿಯೇ ಹಾಡುತ್ತಿದ್ದರು. ಅವರು ಹಾಡುತ್ತಿದ್ದುದರ ಹಿಂದೆ ರಂಜನೆ ಮಾತ್ರವಿರದೆ ಸಾಮಾಜಿಕ ತಿಳಿವನ್ನು ಕೊಡುವ ಉದ್ದೇಶವಿರುತ್ತಿತ್ತು. 'ಕೊಕ್ಕೋ ರೋಕ್ಕೋ, ಕಾವ್‌ಕಾವ್, ಕುಹೂಕುಹೂ, ಜಂಟಪದಲು' ಎಂಬ ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಸೀತಾರಾಮ್‌ರವರ 'ಚಿಟ್ಟಿಬೊಮ್ಮಲಾಟ', ನಾಟಕ ಸಂಪುಟ, ಬಾಲಲ ಚೆಂಡಾ, ಸುನ್ನಾವಾಚಕಾಲು, ವೆನ್ನಲವಿಂದು, 'ದೇಶಭಕ್ತಿಗೀತಾಲು' ಕವನಗಳು ಮಕ್ಕಳ ಮನಸ್ಸನ್ನಾಕ್ರಮಿಸಿಕೊಂಡಿವೆ. "ಒಂದು ಸಂಸ್ಥೆಯವರು ಹಿರಿಯರೇ ನಿಮಗೆ ಕವಿಕೋಗಿಲೆ ಬಿರುದು ಕೊಡುತ್ತೇವೆ ಸನ್ಮಾನಕ್ಕೆ ಒಪ್ಪಿಕೊಳ್ಳಿ" ಎಂದು ಕರೆದಾಗ ಅವರು ನಿರಾಕರಿಸಿ 'ಸ್ವಾಮಿ! ನನಗೆ ಕವಿಕೋಗಿಲೆ ಬಿರುದು ಖಂಡಿತ ಬೇಡ ಕವಿಕಾಕಿ (ಕವಿಕಾಗೆ) ಎಂಬ ಬಿರುದನ್ನು ನೀಡುವುದಾದರೆ ಬರುತ್ತೇನೆ' ಎಂದರಂತೆ. ಅದಕ್ಕೆ ಅವರ ಸ್ನೇಹಿತರು ಕಾರಣ ಕೇಳಿದಾಗ, "ಕೋಗಿಲೆ ವಂಸತ ಋತುವಿನಲ್ಲಿ ಗಿಡಮರಗಳಲ್ಲಿ ಚಿಗುರು ತಿನ್ನುತ್ತ ಹಾಡುತ್ತದೆಯೇ ಹೊರತು ಉಳಿದ ದಿನಗಳಲ್ಲಿ ಅದರ ಸುಳಿವೇ ಇರುವುದಿಲ್ಲ. ಕಾಗೆಯಾದರೋ ದಿನಾಲು ಕೋಳಿ ಕೂಗಿದೊಡನೆ ತಾನೂ ಅರಚುತ್ತಾ ಜನರನ್ನು ಎಬ್ಬಿಸುತ್ತದೆ. ಸರ್ವಕಾಲ ಸರ್ವಾವಸ್ಥೆಗಳಲ್ಲಿ ಅದು ಜನರನ್ನು ಬಿಟ್ಟಿರಲಾರದು. ನನಗೆ ಬೇಕಾಗಿರುವುದೂ ಅದೇ' ಎಂದು 'ಕವಿಕಾಕಿ' ಎಂಬ ಬಿರುದನ್ನೇ ಪಡೆದರಂತೆ."[೭೮] ಇಂಥ ಮಕ್ಕಳ ಮಹನೀಯ ಕವಿ ವಿದ್ಯಾರ್ಥಿಗಳಲ್ಲಿ ಮಕ್ಕಳಲ್ಲಿ ಹೊಸ ದೃಷ್ಟಿಕೋನವನ್ನು ಬಿತ್ತಿದರು. ಪರಿಸ್ಥಿತಿಗೆ ತಕ್ಕಹಾಗೆ ಹೊಂದಿಕೊಳ್ಳುವ, ಬರೆಯುವ ಶೈಲಿ ಕವಿಗಳದ್ದಾಗಿರಬೇಕೆಂಬುದಕ್ಕೆ ಕವಿಕಾಕಿ ಒಂದು ಉದಾಹರಣೆ. ಅವರು ದೇಶೀ ಭಾಷೆಯ ಶ್ರೇಷ್ಠತೆಯನ್ನು ಸಾರುವ ಮತ್ತು ಇಂಗ್ಲೀಷ್ ಭಾಷೆಯ ಪೊಳ್ಳುತನವನ್ನು ವಿವರಿಸುವ ಕಾವ್ಯವೊಂದು ಹೀಗಿದೆ.

"ಇಂಗ್ಲೀಷು ಭಾಷಾ–ಎಂತೋ ತಮಾಷಾ
ಸಾಲ್ಟ್ ಅಂತೆ ಕಾಕಿ–ಫಾಲ್ಟಂಟೆ ತಪ್ಪು
ಕ್ರೋ ಅಂಟೆ ಕಾಕಿ – ಕಾಕ್ ಅಂಟೆ ಪುಂಜು
ಷೋ ಅಂಟೆ ಚೂಪು–ಕ್ಷೂ ಅಂಟೆ ಚೆಪ್ಪು"[೭೯]

ಇಂಥ ಪರ್ಯಾಯ ಚಿಂತನೆಯನ್ನು ಮಾಡಿದ ಕವಿಕಾಕಿ ಮಕ್ಕಳೊಳಗೆ ಹೊಸ ಪ್ರಜ್ಞೆಯನ್ನು ಮೂಡಿಸಲು ಕಾರಣಕರ್ತರಾದವರು.

ತೆಲುಗು ಮಕ್ಕಳ ಸಾಹಿತ್ಯ ಅಗಾಧವಾದುದನ್ನೇ ಸಾಧಿಸಿದೆ. ಹತ್ತು ಹಲವು ಬಾಲ ಸಂಘಗಳು ಸ್ಥಾಪನೆಗೊಂಡಿದೆ. ಬಾಲಲ ಅಕಾಡೆಮಿಗಳು ಸ್ಥಾಪನೆಗೊಂಡಿವೆ. ಮಕ್ಕಳ ಸಾಹಿತ್ಯಕ್ಕೆ ವಿಶೇಷ ಪ್ರೋತ್ಸಾಹ ನೀಡುತ್ತ ಬರಲಾಗುತ್ತದೆ. ಮಕ್ಕಳಿಗಾಗಿ ಹಲವು ಪತ್ರಿಕೆಗಳನ್ನು ತರಲಾಗುತ್ತಿದೆ. ಸಾಮಾಜಿಕ ಸಂಘ-ಸಂಸ್ಥೆಗಳು ಮಕ್ಕಳ ಬರಹಕ್ಕೂ ಉತ್ತೇಜನ ನೀಡುತ್ತಿದ್ದಾರೆ. ಸರ್ಕಾರವೂ ಇದಕ್ಕೆ ಸಕಾರಾತ್ಮಕವಾಗಿ ಸ್ಪಂದಿಸುತ್ತ ಬರುತ್ತಿದೆ. ೧೯೭೬ರಲ್ಲಿ ಸರ್ಕಾರ 'ಬಾಲಲ ಅಕಾಡೆಮಿ'ಯನ್ನು ಸ್ಥಾಪಿಸಿದೆ. ತೆಲುಗು ಚಲನಚಿತ್ರರಂಗವೂ ಹಲವು ಮಕ್ಕಳ ಚಲನಚಿತ್ರಗಳನ್ನು ತೆಗೆದಿದೆ. ಬಾಲಲ ಅಕಾಡೆಮಿ ಮಕ್ಕಳಿಗಾಗಿ ಸ್ಪರ್ಧೆಗಳನ್ನು ಏರ್ಪಡಿಸುತ್ತಾ, ಮಕ್ಕಳ ಸಾಹಿತ್ಯ ಉಳಿಯಲು, ಬೆಳೆಯಲು ಸಹಾಯ, ಸಹಕಾರ ನೀಡುತ್ತಿದೆ.

### ಹಿಂದಿ ಭಾಷೆಯಲ್ಲಿ ಮಕ್ಕಳ ಸಾಹಿತ್ಯ

ಹಿಂದಿ ಭಾಷೆಗೆ ಸ್ವತಂತ್ರ ಅಸ್ತಿತ್ವವೇ ಇಲ್ಲ. ಇದು ಇಂಡೋಆರ್ಯನ್ ಭಾಷೆಯ ಅಪಭ್ರಂಷ ರೂಪ. ಹಿಂದಿ ರೂಪಗೊಂಡ ಚರಿತ್ರೆಯೇ ವಿಚಿತ್ರ. ಶೌರಸೇನಿ, ಮೈಥಿಲಿ, ಅವಧಿ, ರಾಜಸ್ತಾನಿ, ವಜ್ರಭಾಷೆ, ಭೋಜಪುರಿ, ಖಡಿಬೋಲಿ ಮುಂತಾದ ಭಾಷಾ ಬೆರೆಯುವಿಕೆಯಿಂದ ಹುಟ್ಟಿದ ಹಿಂದಿ ಭಾಷೆ ಭಾರತದಲ್ಲಿ ಮೊಗಲ ಆಳ್ವಿಕೆಯಿಂದಾಗಿ ಉರ್ದು, ಅರೇಬಿಕ್ ಮತ್ತು ಪರ್ಷಿಯನ್ ಭಾಷೆಯ ಶಬ್ದಗಳನ್ನು ತನ್ನೊಳಗೆ ಅಡಗಿಸಿಕೊಂಡು ಒಂದು ಸ್ವತಂತ್ರ ಭಾಷೆಯಾಗಿ ೧೮ನೇ ಶತಮಾನದಲ್ಲಿ ರೂಪಗೊಂಡಿತು. ದುರಾದೃಷ್ಟವಶಾತ್ ಸ್ವತಂತ್ರ ಭಾಷಾ ಲಕ್ಷಣವಿರದ ಹಿಂದೀ ಭಾಷೆ ಈ ಹೊತ್ತು ರಾಷ್ಟ್ರೀಯ ಭಾಷೆಯಾಗಿ ರೂಪಗೊಂಡಿದ್ದು ಜೊತೆಗೆ ಇಡೀ ಭಾರತೀಯ ಪ್ರಾಂತೀಯ ಭಾಷೆಗಳನ್ನು ಬದಿಗೊತ್ತಿ, ದ್ರಾವಿಡ ಭಾಷಾ ಪರಂಪರೆಗಳ ಮೇಲೆ ಸವಾರಿ ಮಾಡುತ್ತ ಸಾಗುತ್ತಿದೆ ಹಿಂದಿ ಭಾಷೆ. ಹಿಂದಿ ಭಾಷಾ ಚರಿತ್ರೆಯನ್ನು ೧೮ನೇ ಶತಮಾನದಿಂದಲೇ ಆರಂಭಿಸುವುದು ಸೂಕ್ತ. ದ್ರಾವಿಡ ಮತ್ತು ಉತ್ತರ ಭಾರತದ ಭಾಷಾ ಚರಿತ್ರೆಗಳನ್ನು ಅರಗಿಸಿಕೊಂಡು ಮುಕ್ಕಿದ ಹಿಂದಿ ಲಭ್ಯ ಮಾಹಿತಿಗಳ ಪ್ರಕಾರ ೧೯ನೇ ಶತಮಾನದ ಮಧ್ಯ ಭಾಗದಿಂದ ತನ್ನ ಸಾಹಿತ್ಯಿಕ ಪರಂಪರೆಯನ್ನು ದಾಖಲಿಸಿದೆ. ಇದಕ್ಕೆ ಹೊಸ ಪರಿಕಲ್ಪನೆಯನ್ನು ನೀಡಿದ ಕೀರ್ತಿ ಭಾರತೇಂದು ಹರಿಶ್ಚಂದ್ರ ಕವಿಗಳಿಗೆ ಸಲ್ಲುತ್ತದೆ. ಈ ಅವಧಿಯಲ್ಲಿ ಹಿಂದೀ ಸಾಹಿತ್ಯಕ್ಕೆ ಭದ್ರಬುನಾದಿ ಪ್ರಾಪ್ತವಾಯಿತು.

ಬ್ರಿಟಿಷ್ ಆಡಳಿತದಲ್ಲಿ ಶಾಲಾ ಇನ್‌ಸ್ಪೆಕ್ಟರ್‌ಗಳಾಗಿದ್ದ ರಾಜಾ ಶಿವಪ್ರಸಾದ್ ಮತ್ತು ಸಿತಾರೆ ಹಿಂದ್‌ರವರು ಹಿಂದಿ ಸಾಹಿತ್ಯಕ್ಕೆ ಒಂದು ರೂಪರೇಷೆ ನೀಡಿದ ಕವಿಗಳು. ರಾಜಾ ಶಿವಪ್ರಸಾದ್‌ರವರು ಮಕ್ಕಳಿಗಾಗಿ ಬಚ್ಚೋಂಕಿ ಕಹಾನಿ, ಲಡ್ಕೋಂಕಿ ಕಹಾನಿ ಎಂಬ ಕೃತಿಗಳನ್ನು ರಚಿಸಿದರು. ಬಹುಶಃ ಹಿಂದಿ ಮಕ್ಕಳ ಸಾಹಿತ್ಯದ ಚರಿತ್ರೆ ಇಲ್ಲಿಂದಲೇ ಆರಂಭವಾಯಿತೆಂದು ತೋರುತ್ತದೆ. ಭಾರತೇಂದು ಹರಿಶ್ಚಂದ್ರ ಅಂಧೇರಿ ವಗರಿ ಎಂಬ ಕೃತಿಯ ಮೂಲಕ ಹಾಸ್ಯಯುಕ್ತ ವಿಡಂಬನಾ ಮಕ್ಕಳ ಸಾಹಿತ್ಯವನ್ನು ರಚಿಸಿದರು. ಈ ತಳಹದಿಯ ಮೇಲೆ ಸ್ವಾಮಿ ದಯಾನಂದ,

ಅಂಬಿಕಾದತ್ತವ್ಯಾಸ ಮುನ್ಸಿದೇವಿ ಪ್ರಸಾದ್ ಮುನ್ಸೀಫ್ ಮತ್ತು ಲಕ್ಷ್ಮೀನಾಥ ಶರ್ಮಾರವರು ಕಾರ್ಯನಿರ್ವಹಿಸಿ ವ್ಯವಹಾರಭಾನು, ಕಥಾಕುಸುಮ ಕಾಲಿಕ, ವಿದ್ಯಾರ್ಥಿ ವಿನೋದ ಮತ್ತು ಶ್ರೀಮನ್ ರಂಜನ್ ಕೃತಿಗಳನ್ನು ಕ್ರಮವಾಗಿ ರಚಿಸಿದರು. ಇವುಗಳ ಚರಿತ್ರೆಯೂ ಕೂಡ ಕ್ರಮವಾಗಿ ಹೀಗಿದೆ. ೧೮೭೯, ೧೮೮೫, ೧೮೯೬ ಇವುಗಳ ಜೊತೆಗೆ ಹಿಂದಿ ಮಕ್ಕಳ ಸಾಹಿತ್ಯ ಚರಿತ್ರೆಯಲ್ಲಿ ೧೯೧೪ 'ವಿದ್ಯಾರ್ಥಿ', ೧೯೧೫ರಲ್ಲಿ 'ಶಿಶು', ೧೯೧೭ರಲ್ಲಿ ಬಾಲಸಖ ನಿಯತಕಾಲಿಕೆಗಳು ಬಂದವು. ಇವುಗಳಿಗೆ ಬರೆಯುತ್ತಿದ್ದ ಕವಿಗಳು ಮಕ್ಕಳ ಸಾಹಿತಿಗಳು. ಸೋಹನಲಾಲ ದ್ವಿವೇದಿ, ಶ್ರೀನಾಥ ಸಿಂಗ್, ಝುಹೂರ್ ಭಕ್ಷ, ಸ್ವರ್ನಾ ಸಹೋದರ್, ರಾಂಪಾರಿ ಶುಕ್ಲ, ರಾಮದಾಶ್ ಗೌರ, ಪ್ರಭುದತ್ತ ಬ್ರಹ್ಮಚಾರಿ ಮುಂತಾದ ಕವಿಗಳು ಮಕ್ಕಳಿಗಾಗಿ ನಿಯತಕಾಲಿಕೆಗಳಿಗೆ ಬರೆಯುತ್ತಿದ್ದ ಪ್ರಥಮ ಸಾಲಿನ ಕವಿಗಳಾಗಿ ಹೆಸರು ಮಾಡಿದವರು. ಮುಂದೆ ಹಲವು ಕವಿಗಳಿಂದ ಹಿಂದಿ ಭಾಷಾ ಮಕ್ಕಳ ಸಾಹಿತ್ಯ ಒಂದು ಚಳವಳಿಯ ರೂಪ ಪಡೆಯಿತು. "ಆ ಸಮಯದಲ್ಲಿ ಹೊರ ಬಂದ ಎಲ್ಲಾ ಹಿಂದಿ ಸಾಹಿತ್ಯದಲ್ಲಿ ಆಗ ನಡೆದ ಎಲ್ಲಾ ಕಾರ್ಯಕ್ರಮಗಳಲ್ಲೂ ಸಾಕ್ಷರತೆಯನ್ನು ಹರಡಲು ಮತ್ತು ಹಿಂದಿಯನ್ನು ಪ್ರಸಾರ ಮಾಡಲು ಪ್ರೇರೇಪಣೆ ಇದ್ದುದು ಎದ್ದು ಕಾಣುತ್ತದೆ. ಇದು ಮಕ್ಕಳಿಗಾಗಿ ಆಗ ಬರೆದ ಪುಸ್ತಕಗಳಲ್ಲಿ ಮತ್ತು ಅವರಿಗಾಗಿ ರಚಿಸಿದ ಸಾಹಿತ್ಯದಲ್ಲಿ ಚೆನ್ನಾಗಿ ವ್ಯಕ್ತವಾಗಿದೆ. ಈ ಚಳುವಳಿಯು ೧೯೩೦ರ ನಂತರ ಎಂಟು ಹತ್ತು ವರ್ಷಗಳಲ್ಲಿ ಚುರುಕುತನವನ್ನು ಪಡೆದುಕೊಂಡಿತು."[೨೦]

೧೯ನೇ ಶತಮಾನದಲ್ಲಿ ಪ್ರಾರಂಭವಾದ ಹಿಂದಿ ಸಾಹಿತ್ಯ ಮಕ್ಕಳ ಯುಗ ಆ ಸಂದರ್ಭದಲ್ಲಿ ನಡೆಯುತ್ತಿದ್ದ ಸಾಕ್ಷರತಾ ಪ್ರಸಾರದ ಭಾಗವಾಗಿ ಬಂದಿತು. ರಾಮ್‌ನರೇಶ ತ್ರಿಪಾಠಿ, ವಿದ್ಯಾಭೂಷಣ ವಿಭು, ದೇವೀದತ್ತ ಶುಕ್ಲ, ಜ್ಯೋತಿ ಪ್ರಸಾದ್ ನಿರ್ಮಲ್, ರಾಮೇಶ್ವರಿ ಕರುಣ್, ರಾಮ್‌ಪತಿ ಶುಕ್ಲ, ಸುದರ್ಶನಾ ಚಾರ‍್ಯರವರು ಈ ಕೈಂಕರ್ಯವನ್ನು ಕೈಗೊಂಡ ಪ್ರಮುಖ ಮಕ್ಕಳ ಸಾಹಿತಿಗಳು. ಪ್ರಬಂಧಕಾರರಾದ ರಾಮ್‌ದಿನ್ ಮಿಶ್ರ, ನರ್ಮದಾ ಪ್ರಸಾದ್ ಮಿಶ್ರ ಮತ್ತು ರಾಮವೃಕ್ಷ ಬೇನಿಪುರ್‌ರವರು ಈ ಹೊತ್ತಿನಲ್ಲಿ ಮಕ್ಕಳೊಳಗಿನ ಸುಪ್ತ ಪ್ರತಿಭೆಯನ್ನು ಹೊರ ಹಾಕುವ ಕಥೆಗಳನ್ನು ಸೃಷ್ಟಿಸಿ ಪ್ರಕಟಿಸಿದರು. 'ನಾನೀ ಕಿ ಕಹಾನಿ'ಯನ್ನು ವೈದ್ಯನಾಥ್ ಕೇದಿಯವರು ಪ್ರಕಟಿಸಿದರು. ಮಕ್ಕಳಿಗಾಗಿ ಸಾಹಿತ್ಯವನ್ನು ಪ್ರಕಟಿಸುವ ಪ್ರಕಾಶನ ಸಂಸ್ಥೆಗಳು ಇದೇ ಅವಧಿಯಲ್ಲಿ ಸ್ಥಾಪನೆಗೊಂಡಿದ್ದು ಹಿಂದಿ ಮಕ್ಕಳ ಸಾಹಿತ್ಯದ ಇತಿಹಾಸದಲ್ಲಿ ಮಹತ್ವದ ಪಾತ್ರವನ್ನು ವಹಿಸಿದವು. ಶಿಶುಜ್ಞಾನ ಮಂದಿರ್, ಮಿಶ್ರ ಬಂಧು ಕಾರ್ಯಾಲಯ, ಛತ್ರ ಹಿತಕಾರಿ ಪುಸ್ತಕ ಮಾಲಾ ಮತ್ತು ಬಾಲಶಿಕ್ಷ ಸಮಿತಿ ಸಂಸ್ಥೆಗಳು ಈ ಸಾಲಿಗೆ ಸೇರುವ ಪ್ರಕಾಶನ ಸಂಸ್ಥೆಗಳು. ಈ ಕಾಲಘಟ್ಟದಲ್ಲಿ ಮಕ್ಕಳಿಗೆ ನಗುತರಿಸುವ, ನಲಿವು ನೀಡುವ ಸಾಹಿತ್ಯ ಕೃಷಿ ನಡೆಯತೊಡಗಿತು. ಜಾನಪದ ಜಗದ ಹಲವಾರು ಕಥೆಗಳನ್ನು ಹಾಡುಗಳಾಗಿ ಪರಿವರ್ತಿಸಿ, ಪ್ರಾಣಿ-ಪಕ್ಷಿಗಳ ಜಗತ್ತನ್ನು ಮನುಷ್ಯ ಜಗತ್ತನ್ನಾಗಿಸಿ ರಚಿಸಿದ ರಂಜನೀಯ ಹಾಡು, ಕಥೆ ಮತ್ತು ವೃತ್ತಗಳು ಬಂದವು.

ಸ್ವಾತಂತ್ರ ನಂತರ ಭಾರತದಲ್ಲಿ ಹಿಂದಿ ಭಾಷೆಯನ್ನು ಬೋಧನಾ ಮಾಧ್ಯಮವಾಗಿ ಸಿದ್ಧಗೊಳಿಸುವಿಕೆ ಪ್ರಾರಂಭವಾಗಿ ಮಕ್ಕಳ ಸಾಹಿತ್ಯ ಮತ್ತು ಇತರೆ ಸಾಹಿತ್ಯ ಪ್ರಕಾರಗಳನ್ನು ಅಭ್ಯಾಸ ಮಾಡಲು ಗ್ರಂಥಾಲಯದ ದೊಡ್ಡ ಕಾರ್ಯವೇ ನಡೆಯಿತು. ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಉತ್ತೇಜನ, ಮಾರ್ಗದರ್ಶನಗಳು ಈ ಕಾರ್ಯದ ಹಿಂದಿರುವುದು ಕಂಡುಬರುತ್ತದೆ. ೧೯೫೦ರಲ್ಲಿ ಹಿಂದಿ ಮಕ್ಕಳ ಸಾಹಿತ್ಯಕ್ಕೆ ಒಂದು ಸ್ಪಷ್ಟತೆ ಪ್ರಾಪ್ತವಾಗಿ ಹಳೆಯ ಮಾದರಿ ಸಂಪೂರ್ಣ ಮುಚ್ಚಿಹೋಗಿ ಹೊಸ ಸಾಹಿತ್ಯ ರಚನಾ ಮಾದರಿಗಳು ಆರಂಭವಾದವು. ವಿಷಯ ಪ್ರಧಾನವಾದ ಸಾಹಿತ್ಯದ ಸೃಷ್ಟಿ ಜನಪದೀಯ ಸತ್ವವನ್ನು ಬಳಸಿಕೊಂಡು ರಚನೆಯಾಗಹತ್ತಿದವು. ಆತ್ಮಾರಾಮ್‌ರ ಜಾನಪದ ಕಥೆಗಳು, ರಾಜ್‌ಪಾಲರ ಜೀವನ ಚರಿತ್ರೆಗಳು ಇಂಗ್ಲೀಷ್‌ನಿಂದ ಅನುವಾದಗೊಂಡು ಹಿಂದಿಗೆ ಬಂದವು. ರಷ್ಯಾದ ಮಾಸ್ಕೋ ವಿದೇಶಿ ಭಾಷೆಗಳ ಪ್ರಕಾಶನ ಭವನ ೩ರಿಂದ ೫ ವರ್ಷದ ಭಾರತೀಯ ಮಕ್ಕಳಿಗಾಗಿ ಹಿಂದಿ ಭಾಷೆಯಲ್ಲಿ ಹಲವು ಪುಸ್ತಕಗಳನ್ನು ಪ್ರಕಟಿಸಿತು. ಪ್ರೇಮ್ ಚಂದ್‌ರವರು 'ಜಂಗಲ್ ಕಿ ಕಹಾನಿಯಾ', ಶಾರದಾ ಮಿಶ್ರರವರು 'ನೀಲಂ', ನೀರಂಕರ್ ದೇವ್ ಸೇವಕ್ ಬರೆದ 'ಮಾನಹರಿ ಕಿ ದೇವಿ' ಇದೇ ಹೊತ್ತಿನಲ್ಲಿ ಪ್ರಕಟಗೊಂಡ ಮಕ್ಕಳ ಪದ್ಯಗಳು. ಇನ್ನು ಸುಖ್‌ರಾಂ ಚೌಬೆ, ವಿದ್ಯಾಭೂಷಣ ವಿಭು, ಸ್ವರ್ಣ ಸಹೋದರ್, ಶ್ರೀನಾಥ ಸಿಂಗ್, ರಾಮ್ ನರೇಶ ತ್ರಿಪಾಠಿ, ಸುಭದ್ರ ಕುಮಾರಿ ಚೌಹಾಣ್, ಸುಮಿತ್ರ ಕುಮಾರಿ ಸಿನ್ಹ, ರಾಮೇಶ್ವರ ಗುರು, ಸರಸ್ವತಿ ಕುಮಾರ್ ದೀಪಕ್, ರುದ್ರದತ್ತರವರು ೫ರಿಂದ ೮ನೇ ವಯಸ್ಸಿನ ಮಕ್ಕಳಿಗಾಗಿ ಅಭೂತಪೂರ್ವ ಸಾಹಿತ್ಯ ರಚಿಸಿದ ಕವಿಗಳು.

ಇದೇ ಹೊತ್ತಿನಲ್ಲಿ ಮಕ್ಕಳಿಗಾಗಿ ಏಕಾಂಕ ಮತ್ತು ಪೂರ್ಣಪ್ರಮಾಣದ ನಾಟಕಗಳ ರಚನೆ ಭರದಿಂದ ಸಾಗಿತು. ಅನಿಲ್ ಕುಮಾರ್‌ರವರ 'ಆವೊ ಬಚಾವೊ ನಾಟಕ್ ಖೇಲೇನ್', ಕಮಲೇಶ್ವರರ 'ಟೈಸಾಯಿಕಾ ಕ್ಷೀಥ್', ಚಂದ್ರ ಕವಿಯ 'ಪಾಂಚ್ ಏಕಂಕಿ', ದಯಾಶಂಕರ್ ಮಿಶ್ರರ 'ನಾಲ್ಕಾಟ್ ನಂದು, ಲಡ್ಲೇಕಾ ಬಲಿದಾನ್, ನಯಯುಗ್ ನಾಟಕಗಳನ್ನು ರಚಿಸಿದರು. ಈ ನಾಟಕಗಳು ಭಾರತದ ಪ್ರಾಚೀನ ಇತಿಹಾಸವನ್ನು ಆಧಾರವಾಗಿಟ್ಟುಕೊಂಡು ರಚಿತವಾದವೆಂಬುದು ವಿಶೇಷ. ಪ್ರಶಾಂತ ಕವಿ ನಾಲ್ಕು ಏಕಾಂಕ ನಾಟಕಗಳ ಸಂಗ್ರಹವನ್ನು ಹೊರತಂದ ಕೀರ್ತಿಗೆ ಭಾಜನರಾಗುತ್ತಾರೆ. ಸದಾ ಜಾಗೃತರಾಗಿರುವ ಮನಸ್ಥಿತಿಯನ್ನು ಮಕ್ಕಳಲ್ಲಿ ಸೃಷ್ಟಿಸುವುದಕ್ಕಾಗಿ ಪ್ರಭುದಯಾಳ್ ಅಗ್ನಿ ಹೋತ್ರಿಯವರು 'ರಿತೌಂಕಿ ಸಭಾ' ಎಂಬ ಹೆಸರಿನಲ್ಲಿ ಒಂಭತ್ತು ನಾಟಕಗಳ ಸಂಗ್ರಹವನ್ನು ಹೊರತಂದರು. ಜಾನಪದ ಜಗತ್ತಿನ ಅನುಭವವನ್ನು ಕಟ್ಟಿಕೊಡುವ ಗಾದೆ ಮಾತುಗಳನ್ನು ಬಳಸಿಕೊಂಡು 'ರಾಹ್‌ಏಕ್ ಮಂಜಿಲ್ ಏಕ್' ಹೆಸರಿನಲ್ಲಿ ರಾಧೆಶಾಮ್‌ರವರು ಐದು ಏಕಾಂಕ ನಾಟಕಗಳನ್ನು ಬರೆದು ಪ್ರಕಟಿಸಿದರು. ಗದ್ಯ ಮತ್ತು ಪದ್ಯ ಮಿಶ್ರಿತ 'ಚೂಹಾ ರಾಜ' ಎಂಬ ಏಕಾಂಕ ನಾಟಕವನ್ನು ರಾಮಕೃಷ್ಣ ಶರ್ಮ, 'ಜಾದೂಕಿ ಗಾಯ, ದಾದಾ ಕೀ ಕಾ ಚಹರಿ ನಾಟಕಗಳನ್ನು ವಿಷ್ಣು ಪ್ರಭಾಕರ್, ಶಾಂತ ಸಂತಕವಿ

'ಮಂಚ ಕೇ ದೃಶ್ಯ', 'ಅನಿಲ್ ಔರ್ ಅಜಲಿ, ಪರೀಕ್ಷೆ ಎಂಬ ನಾಟಕಗಳನ್ನು ಶ್ರೀ ಕೃಷ್ಣ ಕವಿಗಳು ಮತ್ತು 'ನಿರೀಕ್ಷಣ' ಎಂಬ ನಾಟಕವನ್ನು ಹರಿಕೃಷ್ಣದಾಸ್ ಗುಪ್ತರವರು ರಚಿಸಿದರು. ಹಿಂದಿ ಸಾಹಿತ್ಯ ಕ್ಷೇತ್ರದಲ್ಲಿ ಮಕ್ಕಳಿಗಾಗಿ ಬಂದ ನಾಟಕಗಳಲ್ಲಿ ಕುತೂಹಲ, ಆಸಕ್ತಿ, ಜನಪದ ಕಥಾವಸ್ತು, ಇತಿಹಾಸ, ಪ್ರಾಣಿ–ಪಕ್ಷಿ ಜಗತ್ತಿನ ನಿಗೂಢ ಜೀವನ, ಸಾಮಾಜಿಕ ಕಥಾವಸ್ತುಗಳನ್ನು ಬಳಸಿಕೊಂಡು ರಚಿಸಲಾಯಿತು.

ವಿಜ್ಞಾನ, ದೇಶಭಕ್ತಿ, ದೇಶದ ಇತಿಹಾಸಗಳ ಕುರಿತು ಹಿಂದಿಯಲ್ಲಿ ಅನೇಕ ಮಕ್ಕಳ ಕೃತಿಗಳು ರಚನೆಯಾಗಿವೆ. ಕುತೂಹಲ ಮತ್ತು ಆನಂದಗಳನ್ನು ನೀಡುವ ಮಹತ್ತರ ಉದ್ದೇಶ ಮಕ್ಕಳ ಸಾಹಿತ್ಯ ಸ್ಥಾಯಿ ಭಾವ ಎನ್ನುವುದು ಸಾಮಾನ್ಯ ಮಾತಾದರೂ ಈ ಎರಡೂ ಅಂಶಗಳನ್ನು ಬಳಸಿಕೊಂಡು ವೈಜ್ಞಾನಿಕ, ಐತಿಹಾಸಿಕ ಪ್ರಜ್ಞೆಯನ್ನು ಬಿತ್ತುವ ಕಾರ್ಯಗಳೂ ಮಕ್ಕಳ ಸಾಹಿತ್ಯದಲ್ಲಿ ನಡೆದಿವೆ. ಭಾರತೀಯ ಎಲ್ಲಾ ಭಾಷೆಗಳ ಮಕ್ಕಳ ಸಾಹಿತ್ಯದಲ್ಲಿ ಈ ಅಂಶವನ್ನು ಗುರುತಿಸಬಹುದಾಗಿದೆ. ಹಿಂದಿ ಮಕ್ಕಳ ಸಾಹಿತ್ಯದಲ್ಲಿ ಗೋಪಿನಾಥ್ ಶ್ರೀವಾತ್ಸವರ ಟೆಲಿಫೋನ್, ದುರ್ಗಾಪ್ರಸಾದ್ ಶುಕ್ಲರವರ ಟೆಲಿವಿಷನ್, ಧೀರೇಂದ್ರ ಅಗರ್‌ವಾಲ್ ಕವಿಯ ಕೀಟಾಣು ಔರ್ ಸಾಮಾನ್ಯ ರೋಗ್, ಪ್ರಮೋದ ಶಂಕರ್ ಭಟ್‌ರ ಪಾಂಡುಬ್ಬಿ ಇವು ವಿಜ್ಞಾನಕ್ಕೆ ವಿಜ್ಞಾನದ ಆವಿಷ್ಕಾರಗಳಿಗೆ ಸಂಬಂಧಿಸಿದ ಕೃತಿಗಳು. ಇನ್ನು ಇತಿಹಾಸ ಮತ್ತು ಸಂಸ್ಕೃತಿಗಳ ವಿಷಯಾಧಾರಿತ ಕೃತಿಗಳೂ ಹಿಂದಿಯಲ್ಲಿ ಹೇರಳವಾಗಿ ದೊರೆಯುತ್ತವೆ. ಭಗವತ್ ಶರಣ್ ಉಪಾಧ್ಯಾಯರ 'ಭರತ್‌ಕೀ ಕಹಾನಿ' ಮತ್ತು 'ಯಹಾ ಸೋನೇ ಕಾ ದೇಶ್', ಮುಲ್ಕರಾಜ್ ಆನಂದ್‌ರವರ 'ಹಿಂದೂಸ್ಥಾನ್ ಕಿ ಕಹಾನಿ' ಮತ್ತು 'ಇನ್‌ಸಾನ್‌ಕೀ ಕಹಾನಿ', ದಿನಕರ್ ಕವಿಯ 'ಮನುಷ್ಯ ಕೀ ಕಹಾನಿ', ಭಗವತ್ ಶರಣ್ ಉಪಾಧ್ಯಾಯರ 'ಭಾರತೀಯ ಸಂಸ್ಕೃತಿ ಕೀ ಕಹಾನಿ', ಪ್ರೇಮಚಂದ್ ಮಹೇಶ್‌ರವರ 'ಸಾಮ್ರಾಟ್ ಅಶೋಕ್', 'ಹರ್ಷವರ್ಧನ್' ಮತ್ತು 'ತಥಾಗತ' ಇತಿಹಾಸ ಮತ್ತು ಸಂಸ್ಕೃತಿಗಳ ಅನಾವರಣ ಮಾಡುವ ಮಕ್ಕಳ ಕೃತಿಗಳಾಗಿವೆ. ದೇಶಭಕ್ತಿ, ಪರಿಸರಗಳ ಕುರಿತು ನೂರಾರ ಕೃತಿಗಲು ಹಿಂದಿಯಲ್ಲಿ ರಚನೆಯಾಗಿರುವುದು ವಿಶೇಷ. ನಿರ್ಮಲ್ ಪ್ರಸಾದ್ ಖಾರೆ ಮತ್ತು ಸಭಾ ಮೋಹನ್ ಅವಧಿಯಾರ್‌ರವರು ರಚಿಸಿರುವ ಮೈ ಬಾಂಗ್ಲಾ ದೇಶ್ ಹೂಂ, ಶರ್ವರ್ ಕುಮಾರ್‌ರವರ ಸೋನಾರ್ ಬಾಂಗ್ಲಾ, ಭಗವತ್ ಶರಣ್ ಉಪಾಧ್ಯಾಯರ ಭಾರತ್ ಕೀ ನದಿಯಾ, ಶ್ರೀ ಕೃಷ್ಣ ಕವಿಗಳ ಕಿಲೋಂ ಕೀ ಕಹಾನಿ, ಕಿಲೋಂ ಕಿ ಜಬಾಗಿ, ವಿಷ್ಣು ಪ್ರಭಾಕರ್‌ರವರ ಸ್ವರಾಜ್ಯ ಕೀ ಕಹಾನಿ, ಸುಖದೇವ ದುಬೆರವರ ಸರ್‌ಪೋನ್‌ಕಾ ಸಂಸಾರ್ ಕೃತಿಗಳು ಗಮನ ಸೆಳೆಯುತ್ತದೆ. ದೇಶಭಕ್ತಿ, ಕೋಟೆ–ಕೊತ್ತಲಗಳ ನಿರ್ಮಾಣದ ಚರಿತ್ರೆ, ಹೊಸ ರಾಜ್ಯಗಳ ಉದಯ, ಸ್ವಾತಂತ್ರ ಚಳುವಳಿ, ಹಾವುಗಳ ಪ್ರಪಂಚಗಳ ಪರಿಚಯಾತ್ಮಕ ಈ ಕೃತಿಗಳು ಮಕ್ಕಳಲ್ಲಿ ವಿಶೇಷ ಪ್ರಜ್ಞೆಯನ್ನು ಮೂಡಿಸಲು ಕಾರಣವಾಗಿವೆ.

ಮಕ್ಕಳ ಸಾಹಿತ್ಯ ಬರೆಯುವ, ಪ್ರಕಟಿಸುವ ಮತ್ತು ಅನುವಾದ ಮಾಡುವ ಕಾರ್ಯಗಳಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಆರ್ಥಿಕ ನೆರವು ಮತ್ತು ಪ್ರೋತ್ಸಾಹಗಳನ್ನು ನೀಡುತ್ತ ಬಂದ ಸಂಗತಿಯನ್ನು ಆಗಲೇ ಪ್ರಸ್ತಾಪಿಸಲಾಗಿದೆ. ನ್ಯೂಯಾರ್ಕ್‌ನ ಕೆಲವು ವಿಜ್ಞಾನಕ್ಕೆ ಸಂಬಂಧಿಸಿದ ಕೃತಿಗಳನ್ನು ಹಿಂದಿಗೆ ಅನುವಾದಿಸುವ ಕಾರ್ಯ ಭರದಿಂದ ಸಾಗಿತು. ವಾಯುಮಾನದ ಕುತೂಹಲಕಾರಿ ಅಂಶಗಳನ್ನು 'ಟೆಲಿಫೋನ್', 'ವಿದ್ಯುತ್‌ಶಕ್ತಿ', 'ರಾಕೆಟ್' ಮುಂತಾದ ಕೃತಿಗಳು ಹಿಂದಿಗೆ ಹೊತ್ತು ತಂದಿದೆ. ಫ್ರೀ ಮ್ಯಾನ್‌ರವರ 'ಸ್ಟ್ರೇಜ್ ವರ್ಲ್ಡ್ ಆಫ್ ಸೈನ್ಸ್', ಜಾನ್ ಲಫ್ಲಿನ್‌ರವರ 'ಮ್ಯೂಜಿಕ್ ಪವರ್ಸ್ ಆಫ್ ದಿ ಆಟಮ್', ವಿಲಿಯಂ ಎಚ್. ಕ್ರಸ್‌ರವರ 'ದಿ ವರ್ಲ್ಡ್ ಆಫ್ ಸೈನ್ಸ್' ಕೃತಿಗಳು ಹಿಂದಿಗೆ ಅನುವಾದಗೊಂಡು ಬಂದವು. ಈ ಮಧ್ಯ ಹಿಂದಿ ಮಕ್ಕಳ ಸಾಹಿತ್ಯ ವೈಜ್ಞಾನಿಕ ಕಾದಂಬರಿ ಕ್ಷೇತ್ರವನ್ನು ಕಡೆಗಣಿಸಿದೆ ಎನ್ನುವ ಆಪಾದನೆಯಿದೆ. ಹಿಂದಿ ಮಕ್ಕಳ ಕಾದಂಬರಿಗಳಲ್ಲಿ ರಮೇಶ್ ಚಂದ್ರ ವರ್ಮರವರ 'ಸಿಂಧೂರಿ ಗೃಹ್‌ಕಿ ಮಾತ್ರಾ' ಹೆಸರಿಸಬಹುದಾದ ಕೃತಿ. ಹಾಗೇ ಜಗತ್ತಿನ ಬೇರೆ ಬೇರೆ ಮನುಷ್ಯರ ಬಗೆಗೆ ವರ್ಣಿಸುವ ಕೃತಿಗಳೂ ಹಿಂದಿ ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ವಿರಳ ಎನ್ನುವ ಆಪಾದನೆಯೂ ಇದೆ. ಯುನೆಸ್ಕೋದ ಸಹಾಯದಿಂದ ಪ್ರಕಟಿಸಿದ ಫಿಲಿಪೈನ್ಸ್ ಜಪಾನ್, ಅರಬ್, ಆಫ್ರಿಕಾ, ಇಂಡೋನೇಷ್ಯಾ ದೇಶಗಳ ಮಕ್ಕಳ ಜಗತ್ತನ್ನು ಪರಿಚಯಿಸುವ ಕೃತಿಗಳು ಪ್ರಕಟಗೊಂಡಿರುವುದನ್ನು ಬಿಟ್ಟರೆ ಈ ಕ್ಷೇತ್ರ ನಿರ್ಲಕ್ಷಿತ. ಶ್ಯಾಮು ಸನ್ಯಾಸಿ, ಮದನ್ ಗೋಪಾಲ್, ಉಮಾರಾವ್, ರಮೇಶ್‌ಚಂದ್ರ ಪ್ರೇಮ್, ಕಿಶೋರ್ ಗಾರ್ಗ್ ಮುಂತಾದ ಸಾಹಿತಿಗಳು ಈ ಬಗೆಯ ಪ್ರಯತ್ನ ಮಾಡಿದ ಮೊದಲಿಗರು. ದೆಹಲಿಯ 'ಸಾಮಾಜಿಕ ಶಿಕ್ಷಣ ಸಂಸ್ಥೆ' ಸುಮಾರು ೩೦ ಕೃತಿಗಳನ್ನು 'ಪುಸ್ತಕ ಮಾಲಿಕೆ'ಯ ಹೆಸರಿನಲ್ಲಿ ಪ್ರಕಟಿಸಿದ ಕೀರ್ತಿಗೆ ಭಾಜನವಾಗಿದೆ. ಇಂಡಿಯಾ ದಟ್ ಈಸ್ ಭಾರತ್, ದಿ ಅಂಡಮಾನ್ಸ್, ದಿ ಹಿಮಾಲಯಾಸ್, ಕೊನಾರ್ಕ್, ಅಜಂತ ಅಂಡ್ ಎಲ್ಲೋರಾ, ನಾಸಿಕ್ ಅಂಡ್ ಅಮರನಾಥ, ನರ್ಮದಾ, ಗೋದಾವರಿ ಅಂಡಗಂಗಾ ಈ ಮಾಲಿಕೆಯಲ್ಲಿ ಪ್ರಕಾಶನ ಕಂಡ ಉತ್ತಮ ಕೃತಿಗಳು. ತಾನು ವಾಸಿಸುವ ದೇಶದ ಮತ್ತು ಪ್ರಪಂಚದ ನಾನಾ ರಾಷ್ಟ್ರಗಳ ಜನ, ಜೀವನ, ಶೈಲಿ, ರೀತಿ–ನೀತಿ, ಆಚಾರ, ವಿಚಾರ ಮಕ್ಕಳ ಮನೋ ವೈಜ್ಞಾನಿಕ ವಿಧಾನಗಳನ್ನು ಭಾರತದ ಮಗು ಅರ್ಥಮಾಡಿಕೊಳ್ಳಲು ಈ ಕೃತಿಗಳು ಸಹಾಯಕವಾದವು.

ಸ್ವಾತಂತ್ರ ನಂತರದ ಭಾರತದಲ್ಲಿ ಹಳೆಯ ಮೌಲ್ಯಗಳು ಕುಸಿಯತೊಡಗಿ ಹೊಸ ಮೌಲ್ಯಗಳು ಸೃಷ್ಟಿಯಾಗಹತ್ತಿದವು. ಸಾಹಿತ್ಯಿಕ, ರಾಜಕೀಯ ಮತ್ತು ಸಾಮಾಜಿಕ ಎಚ್ಚರ ಮೂಡಿದ್ದರಿಂದ ಜಮೀನ್ದಾರಿಕೆಯ ಪಳೆಯುಳಿಕೆಗಳು ತಮ್ಮ ತೀಕ್ಷ್ಣತೆಯನ್ನು ಕಳೆದುಕೊಳ್ಳಹತ್ತಿತು. ಬ್ರಿಟೀಷರು ತಂದಿದ್ದ ಕರವಸೂಲಿ ನೀತಿಯಿಂದಾಗಿ ಸೃಷ್ಟಿಯಾಗಿದ್ದ ಲೇವಾದೇವಿಗಾರ ಸಾಲ ಕೊಡುವ ಹೊಸ ವರ್ಗಗಳ ದೌರ್ಜನ್ಯ, ದಬ್ಬಾಳಿಕೆಗಳು ಸ್ವಾತಂತ್ರ್ಯನಂತರದ ಭಾರತದಲ್ಲಿ ಮೌಲ್ಯರಹಿತ ವಾಗಹತ್ತಿತು. ಅರಸೊತ್ತಿಗೆಯ ಯುಗ ಮುಗಿದು ಪ್ರಜಾಸತ್ತೆ ಸ್ಥಾಪನೆಯಾಯಿತು. ಹೀಗಾಗಿ

ಆತನಿಗೆ ಸಲ್ಲಬೇಕಾಗಿದ್ದ ಕಡ್ಡಾಯ ಗೌರವ, ಔದಾರ್ಯ, ಪ್ರಾಧಾನ್ಯತೆಗಳು ಪಕ್ಕಕ್ಕೆ ಸರಿದವು. ಈ ಅಂಶಗಳು ಭಾರತ ದೇಶದ ಎಲ್ಲಾ ಭಾಷೆಗಳ ಸಾಹಿತ್ಯದ ಮೇಲೆ ಪ್ರಭಾವ ಬೀರಿದ ಹಾಗೆ ಹಿಂದಿ ಸಾಹಿತ್ಯದ ಮೇಲೂ ತನ್ನ ಪ್ರಭಾವ ಬೀರಿತು. ಮಕ್ಕಳ ಸಾಹಿತ್ಯ ಲೋಕವೂ ಹೊಸ ಮೌಲ್ಯಗಳನ್ನು ತನ್ನಲ್ಲಿ ಅರಗಿಸಿಕೊಂಡಿತು. ಇದೊಂದು ಸಂದಿಗ್ಧ ಕಾಲಘಟ್ಟ, ಇಂಥ ಕಾಲದ ಒತ್ತಡಕ್ಕೆ ಸಿಲುಕಿ ಸಾಹಿತ್ಯದ ಕೃಷಿ ಯಾವ ಬಗೆಯದ್ದಾಗಿರಬೇಕೆಂಬ ಜಿಜ್ಞಾಸೆಗೆ ಸಿಲುಕಿದ ಹಿಂದಿ ಮಕ್ಕಳ ಸಾಹಿತಿಗಳು ಸಾಹಿತ್ಯ ಸೃಷ್ಟಿಯಿಂದ ದೂರ ಸರಿಯಲಾರಂಭಿಸಿದರು. ಇಂಥ ಸಂದರ್ಭದಲ್ಲಿ ಛಲ ಬಿಡದೆ ಸಾಹಿತ್ಯ ಕೃಷಿಗೆ ತೊಡಗಿಸಿಕೊಂಡ ಪ್ರಮುಖ ಸಾಹಿತಿ ವಿಷ್ಣು ಪ್ರಭಾಕರ್. ಇವರು ನೀತಿ ಹಾಗು ಆದರ್ಶಗಳ ಒಳ ತಿರುಳುಗಳನ್ನಿಟ್ಟುಕೊಂಡೇ ಸಾಹಿತ್ಯ ಸೃಷ್ಟಿಗೆ ತೊಡಗಿಕೊಂಡವರು. ಇದೇ ಸಂದರ್ಭದಲ್ಲಿ "ವ್ಯಹಿತ್ ಹೃದಯಶೀಲ ಬೆಳವಣಿಗೆಯ ಮೇಲೆ ಹೆಚ್ಚು ಒತ್ತುಕೊಟ್ಟರು. ಅವತಾರ್ ಸಿಂಗ್ ಮತ್ತು ಹರಿಕೃಷ್ಣ ತೇಲಂಗ್‌ರವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಲು ಕುಟುಂಬದ ಪರಿಸರವನ್ನು ಆಯ್ಕೆ ಮಾಡಿಕೊಂಡರು. ಮನೋಹರ್ ಚೌಹಧ್‌ರವರು ಮಕ್ಕಳ ಕುಚೇಷ್ಟೆಗೆ ಸಂಬಂಧಿಸಿದ ಸಮಸ್ಯೆಗಳ ಬಗ್ಗೆ ಬರೆದರು. ಮಾಲತಿ ಜೋಷಿ ಮನೋ ವೈಜ್ಞಾನಿಕ ನಿಲುವನ್ನು ಅಳವಡಿಸಿಕೊಂಡರೆ, ಮಸ್ತಾರಾಮ್ ಕಪೂರ್‌ರವರು ಆಧುನಿಕ ಪ್ರಜ್ಞೆಯನ್ನು ಹುಟ್ಟುಹಾಕುವ ಪ್ರಯತ್ನ ಮಾಡಿದರು."[೨೧] ಆದರೆ ಈ ಯುಗ ಮಕ್ಕಳ ಸಾಹಿತ್ಯದ ರೂಪ ಮತ್ತು ಅದು ಅನುಸರಿಸಬೇಕಾದ ಹೊಸ ನಮೂನೆಗಳ ಪ್ರತಿಪಾದಕ ಸಾಹಿತ್ಯವಾಯಿತು. ಹಳೆ ವಿಚಾರಧಾರೆಗಳನ್ನೇ ಹೊಸ ಪರಿಕಲ್ಪನೆ ಅಡಿಯಲ್ಲಿ ಅಭಿವ್ಯಕ್ತಿಗೊಳಿಸುವ ಪ್ರಯತ್ನವಾಯಿತು. ಜೈ ಪ್ರಕಾಶ್ ಭಾರತಿ, ಶಂಕರ್ ಬಾಮ್, ದಯಾಶಂಕರ್ ಮಿಶ್ರ, ವೀರಕುಮಾರ್ ಅಧೀರ್, ಚಂದ್ರದತ್ತ, ಅಮರನಾಥ್ ಶುಕ್ಲ, ಯೋಗರಾಜ್ ಥಾನಿ, ರತ್ನಪ್ರಕಾಶ್ ಶೀಲ್, ರಾಮಕೃಷ್ಣ ಶರ್ಮ, ರಮೇಶ್ ವರ್ಮ, ಮೋಹಿನಿರಾವ್, ಶೀಲಚಂದ್ರ ಮುಂತಾದ ಕವಿಗಳು ಈ ಮಾದರಿಯನ್ನನುಸರಿಸಿ ಮಕ್ಕಳ ಕಥೆ, ಕಾವ್ಯ, ಕಾದಂಬರಿಗಳನ್ನು ಬರೆದರು.

ಸ್ವಾತಂತ್ರ್ಯೋತ್ತರ ಕಾಲದಲ್ಲಿ ಏಕತೆ, ಜಾತ್ಯಾತೀತ ಪರಂಪರೆಗಳ ಕುರಿತು ಸಾಹಿತ್ಯ ರಚನೆಯಾಯಿತು. ಸೋಹನ್‌ಲಾಲ್ ದ್ವಿವೇದಿಯವರ "ಗಾಯೇಂಗ್ ಹಮ್ ಸಬ್ ವಯೀ ತಾನ್, ಹಮ್ ಸಬ್ ಸಮಾನ್" ಎನ್ನುವ ಹಾಡನ್ನು ಉದಾಹರಿಸಬಹುದು. ಪ್ರಖ್ಯಾತ ಲೇಖಕರು ಮಕ್ಕಳಿಗಾಗಿ ಬರೆದರೆ ಪ್ರತಿಷ್ಠೆಗೆ ಕುಂದು ಬರಬಹುದೆನ್ನುವ ಕಾಲದಲ್ಲಿ ಸ್ವತಃ ಗಾಂಧೀಜಿ, ಜವಾಹರಲಾಲ್ ನೆಹರೂರಂತ ಮಹಾತ್ಮರು ಮಕ್ಕಳಿಗಾಗಿ ಬರೆದರು. ಹಿಂದಿ ಮಕ್ಕಳ ಸಾಹಿತ್ಯದ ಸಪ್ತ ಋಷಿಗಳೆಂದು ಕರೆಸಿಕೊಳ್ಳುವ ೭ ಜನ ಖ್ಯಾತ ನಾಮಧೇಯ ಕವಿಗಳಾಗಿದ್ದಾರೆ. ಪಂಡಿತ್ ರಾಮ್‌ನರೇಶ್ ತ್ರಿಪಾಠಿ, ರಾಮವೃಕ್ಷ ಬೇನಿತ್ರೆರಿ, ಸ್ವರ್ಣ ಸಹೋದರ್, ಸುಭದ್ರಕುಮಾರಿ ಚೌಹಾಣ್, ಸೋಹನ್‌ಲಾಲ್ ದ್ವಿವೇದಿ, ಮೃಥಿತ್ ಹೃದಯ್ ಮತ್ತು ಅಕ್ಷಯ್‌ಕುಮಾರ್ ಜೈನ್‌ರವರು ಆಸ್ಥಾನಕ್ಕೇರಿದ ಶಿಶುಸಾಹಿತಿಗಳು. 'ಹಿಂದಿ ಮಕ್ಕಳ ಸಾಹಿತ್ಯ ಲೋಕದ ಸೂರ್ಯ' ಎಂಬ ಖ್ಯಾತಿಗೆ ಭಾಜನರಾಗಿದ್ದ 'ರಾಮವೃಕ್ಷ ಬೇನಿಪುರಿ' ನಮಿಧಾರಾ

ಎಂಬ ಪತ್ರಿಕೆಯನ್ನು ಸ್ಥಾಪಿಸಿದುದಲ್ಲದೇ ಚುನ್ನು-ಮುನ್ನು, ಬಾಲಕ್, ಯೋಗಿ, ಮೂವರ್, ಜನತಾ ಎನ್ನುವ ಮಹತ್ವಪೂರ್ಣ ಕೃತಿಗಳನ್ನು ರಚಿಸಿದರು.

ಭಾರತದ ಹಲವು ರಾಜ್ಯಗಳ ಸಂಪರ್ಕ ಭಾಷೆಯಾದ್ದರಿಂದ ಹಿಂದಿಯನ್ನು ೧೯೫೦ರಲ್ಲಿ ರಾಷ್ಟ್ರೀಯ ಭಾಷೆಯೆಂದು ಭಾರತ ಸರ್ಕಾರ ಘೋಷಿಸಿತು. ದೇಶದ ಎಲ್ಲಾ ರಾಜ್ಯಗಳಲ್ಲಿ ತ್ರಿಭಾಷಾ ಸೂತ್ರದನ್ವಯ ಹಿಂದಿಯನ್ನು ತೃತೀಯ ಭಾಷೆಯನ್ನಾಗಿ ಅಭ್ಯಾಸ ಮಾಡಲಾಗುತ್ತಿದೆ. ಹಿಂದಿ ಭಾಷೆಯ ಪ್ರಸಾರಕ್ಕಾಗಿ ದೇಶದಾದ್ಯಂತ ಸಂಸ್ಥೆಗಳನ್ನು ಸರ್ಕಾರ ಸ್ಥಾಪಿಸಿದೆ. ಈಚೆಗೆ ಪ್ರಧಾನಿಯವರು 'ಹಿಂದಿ ವರ್ಷ' ಎಂಬ ನೂತನ ಕಾರ್ಯಯೋಜನೆಯನ್ನು ಹಮ್ಮಿಕೊಂಡಿದ್ದಾರೆ. ಒಟ್ಟಾರೆ ಭಾರತದ ಬೇರೆ ಬೇರೆ ಪ್ರಾದೇಶಿಕ ಭಾಷೆಗಳ ಜನಪದೀಯ ಸತ್ವವನ್ನು ಹೀರಿ, ಲಭ್ಯ ಸಂಸ್ಕೃತ ಶಾಸ್ತ್ರ ಪುರಾಣಗಳ ಸಾರವನ್ನು ಗ್ರಹಿಸಿ ಆಧುನಿಕ ಕಾಲದಲ್ಲಿ ಪ್ರಾಪ್ತವಾದ ಜ್ಞಾನವನ್ನು ಬಳಸಿಕೊಂಡು ಭಾರತ ದೇಶದ ಯಾವುದೇ ಭಾಷೆಯಲ್ಲಿ ರಚಿತವಾಗದಷ್ಟು ವಿಪುಲ ಮಕ್ಕಳ ಸಾಹಿತ್ಯವನ್ನು ಸೃಷ್ಟಿಸಿಕೊಂಡಿರುವ ಕೀರ್ತಿ ಹಿಂದಿ ಸಾಹಿತ್ಯ ಕ್ಷೇತ್ರಕ್ಕೆ ಸಲ್ಲುತ್ತದೆ.

### ೨.೩. ಕನ್ನಡದ ಸಂದರ್ಭದಲ್ಲಿ ಮಕ್ಕಳ ಸಾಹಿತ್ಯ

ಕನ್ನಡ ಭಾಷೆ ದ್ರಾವಿಡ ಭಾಷಾ ಪರಂಪರೆಗೆ ಸೇರಿದ್ದಾಗಿದೆ. ಗ್ರಂಥಸ್ತ ಕನ್ನಡ ಭಾಷೆಯನ್ನು:

೧. ಕ್ರಿ.ಶ. ೯ ರಿಂದ ೧೨ನೇ ಶತಮಾನದವರೆಗಿನ ಹಳಗನ್ನಡ

೨. ಕ್ರಿ.ಶ. ೧೨ ರಿಂದ ೧೫ನೇ ಶತಮಾನದವರೆಗಿನ ನಡುಗನ್ನಡ

೩. ಕ್ರಿ.ಶ. ೧೫ ರಿಂದ ೧೯ನೇ ಶತಮಾನದವರೆಗಿನ ಹೊಸಗನ್ನಡ

೪. ಕ್ರಿ.ಶ. ೧೯ ರಿಂದ ಈವರೆಗಿನ ಸಾಹಿತ್ಯ ಆಧುನಿಕ ಕನ್ನಡ ಎಂಬುದಾಗಿ ಸ್ಥೂಲವಾಗಿ ವರ್ಗೀಕರಿಸಬಹುದು.

ಭಾರತದ ಎಲ್ಲಾ ಭಾಷೆಗಳಲ್ಲಿರುವಂತೆ ಕನ್ನಡ ಭಾಷೆಯಲ್ಲಿ ಹೇರಳವಾದ ಜನಪದ ಸಾಹಿತ್ಯ ಲಭ್ಯವಿದೆ. ಕನ್ನಡ ಜಾನಪದ ಜಗತ್ತು ಮಕ್ಕಳಿಗಾಗಿ ಕಟ್ಟಿಕೊಟ್ಟ ಸಾಹಿತ್ಯ ಅಪಾರವಾದದ್ದು. ಕಥೆ, ಕಾವ್ಯಗಳು ಈ ಪ್ರಕಾರದಲ್ಲಿ ಮುಂಚೂಣಿಯಲ್ಲಿದ್ದವು. ಒಂದೂರಲ್ಲಿ ಒಬ್ಬ ರಾಜ, ಒಂದೂರಿನ ಬೆಟ್ಟದಲ್ಲಿ ಒಬ್ಬ ರಾಕ್ಷಸ, ಒಂದು ಕಾಡಿನಲ್ಲಿ ಒಂದು ಸಿಂಹ, ಇದ್ದ-ಇತ್ತು ಎಂದು ಪ್ರಾರಂಭವಾಗುವ ಜನಪದ ಕಥೆಗಳು ಮಕ್ಕಳಲ್ಲಿ ಕುತೂಹಲವನ್ನು ಮೂಡಿಸಿ ತುಂಟ ಮಗುವಿನ ಮನಸ್ಸನ್ನು ತನ್ನತ್ತ ಸೆಳೆದು ಕೂಡಿಸುತ್ತಿದ್ದವು. ವಿಶಾಲ ಜನಪದ ಕಥಾ ಹಂದರ ಕನ್ನಡ ಜನಪದ ಸಾಹಿತ್ಯಕ್ಕಿದೆ.

ರಾಮಾಯಣ, ಮಹಾಭಾರತ, ಭಾಗವತ ಮತ್ತು ಪೌರಾಣಿಕ ಕಥೆಗಳೂ ಕನ್ನಡ ಮಕ್ಕಳ ಜಗತ್ತಿನಲ್ಲಿ ಪ್ರವೇಶ ಪಡೆದಿವೆ. ನಮ್ಮ ಹಿರಿಯ ತಲೆಮಾರು ಮಕ್ಕಳಿಗಾಗಿ ಕಟ್ಟಿಕೊಟ್ಟ ಸಾಹಿತ್ಯ ಜಗತ್ತಿದು. ಮಕ್ಕಳ ನೈಜ ಸ್ಥಿತಿಯನ್ನು ಅರಿಯುವ ಪ್ರಯತ್ನ ಮೊದಲು ಆಗಬೇಕಾಗಿರುವ

ಕೆಲಸ. ಈ ಅರ್ಥದಲ್ಲಿ ಕನ್ನಡ ಸಾಹಿತ್ಯದಲ್ಲಿ ಅಧ್ಯಯನ, ವಿಮರ್ಶೆ, ಚರ್ಚೆಗಳು ಸಾಕಷ್ಟು ನಡೆಯುತ್ತ ಬಂದಿವೆಯಾದರೂ ಮಕ್ಕಳ ಓದಿಗಾಗಿ ಆಯ್ದುಕೊಳ್ಳುವ ಸಾಹಿತ್ಯ ತೀರಾ ಗೌಣವೆಂದು ಹೇಳಬೇಕಾಗುತ್ತದೆ. ಜಿಗಿಯುವ ಜಿಂಕೆ, ಹರಿಯುವ ನೀರು, ಪುಟಿಯುವ ಚಿಲುಮೆ, ಹೊಳೆದಂಡೆಯ ಗರಿಕೆಯ ಕುಡಿಯಂತಹ ಮಕ್ಕಳ ಮನಸ್ಥಿತಿಗೆ ಒಗ್ಗುವ ಸಾಹಿತ್ಯ ಕನ್ನಡ ಅಷ್ಟೇ ಅಲ್ಲ ಭಾರತೀಯ ಇತರೆ ಭಾಷೆಗಳಲ್ಲಿಯು ಸಂಪನ್ಮೂಲದ ಕೊರತೆ ಎದ್ದು ಕಾಣುತ್ತದೆನ್ನುವುದನ್ನು ಈಗಾಗಲೇ ಹೇಳಲಾಗಿದೆ. ಅನೇಕಾನೇಕ ಉದ್ದಾಮ ಸಾಹಿತಿಗಳು ಮಕ್ಕಳಿಗಾಗಿ ಒಂದಷ್ಟು ಸಾಹಿತ್ಯವನ್ನು ನೀಡಿದ್ದರೂ ಮಕ್ಕಳಿಗಾಗಿ ಪ್ರತ್ಯೇಕ ಸಾಹಿತ್ಯ ಎನ್ನುವ ಧೋರಣೆ ಸಲ್ಲದೆನ್ನುವ ಅಭಿಪ್ರಾಯಕ್ಕೆ ಬಂದು ನಿಲ್ಲುತ್ತಾರೆ. ಸಾಹಿತ್ಯ ಸಾಹಿತ್ಯವೇ ಹೊರತು ಅದು ಬೇರೆ ಅಲ್ಲ. ಅದನ್ನು ವರ್ಗೀಕರಿಸುವ ಪರಿಕಲ್ಪನೆಯಲ್ಲಿಯೇ ದೋಷವಿದೆ ಎನ್ನುವ ವಾದವಿದೆ. ಈ ಎಲ್ಲಾ ಸಂಗತಿಗಳನ್ನು ಮೀರಿ ಕನ್ನಡ ಸಾಹಿತ್ಯದಲ್ಲಿ ರಚಿತವಾದ ಮಕ್ಕಳ ಸಾಹಿತ್ಯದ ಸ್ವರೂಪ, ನೆಲೆ, ತಾತ್ವಿಕತೆ, ಮನೋವೈಜ್ಞಾನಿಕ ಸಂಗತಿಗಳನ್ನು ಅಧ್ಯಯನಕ್ಕೀಡು ಮಾಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಕನ್ನಡ ಜನಪದ ಮತ್ತು ಪೌರಾಣಿಕ ಕಥಾನಕಗಳನ್ನು ಹೊರತುಪಡಿಸಿದರೆ ಅಧಿಕೃತವಾಗಿ ಹಳೆಗನ್ನಡ ಸಾಹಿತ್ಯದಲ್ಲಿ ದುರ್ಗಸಿಂಹನ 'ಕರ್ನಾಟಕ ಪಂಚತಂತ್ರ' ಮಕ್ಕಳಿಗಾಗಿ ರಚಿತವಾದ ಸಾಹಿತ್ಯ ಎನಿಸುತ್ತದೆ. ಕ್ರಿ.ಶ. ಸುಮಾರು ೧೦೩೧ರಲ್ಲಿದ್ದ ಜಗದೇಕಮಲ್ಲನ ದಂಡನಾಯಕನಾಗಿದ್ದ ದುರ್ಗಸಿಂಹ ಸಂಧಿವಿಗ್ರಹಿಯೂ ಆಗಿದ್ದನು. ಕಿಸುನಾಡು ಎಂಬ ಪ್ರದೇಶದ ಸಯ್ಯಡಿ ಅಗ್ರಹಾರ ಈತನ ಜನ್ಮಸ್ಥಳ. ಬಿಹಾರ ಪ್ರಾಂತದಲ್ಲಿರುವ 'ಆರಾ' ಜೈನ ಸಿದ್ಧಾಂತ ಭವನದಲ್ಲಿರುವ ಹಸ್ತಪ್ರತಿಯೊಂದರ ಪದ್ಯದಲ್ಲಿರುವ ಉಲ್ಲೇಖದ ಪ್ರಕಾರ ೧೦೩೧ರಲ್ಲಿ ದುರ್ಗಸಿಂಹ ಗುಣಾಢ್ಯ ಎಂಬ ಕವಿಯಿಂದ ಪೈಶಾಚಿ ಭಾಷೆಯಲ್ಲಿ ರಚಿತವಾಗಿದ್ದ 'ಬೃಹತ್‌ಕಥೆ'ಯನ್ನಾಧರಿಸಿ ವಸು ಭಾಗ ಭಟ್ಟ ಸಂಸ್ಕೃತದಲ್ಲಿ ಪಂಚತಂತ್ರವನ್ನು ಬರೆದ. ಈ ಕೃತಿಯನ್ನು ಆಧಾರವಾಗಿಟ್ಟುಕೊಂಡು ದುರ್ಗಸಿಂಹ ಕರ್ನಾಟಕ ಪಂಚತಂತ್ರವನ್ನೂ ರಚಿಸಿದ. ಇದೊಂದು ಕಥನಕಾವ್ಯ. ಒಂದೊಂದು ತಂತ್ರವೂ ಚಿಕ್ಕ-ದೊಡ್ಡ ಕಥೆಗಳನ್ನೂ ಹೊಂದಿವೆ. ಇಲ್ಲಿಯ ಪಾತ್ರಗಳು ಮಕ್ಕಳ ಮನಸಿನಲ್ಲಿ ಅಚ್ಚಳಿಯದೇ ನಿಂತು ಬಿಡುತ್ತವೆ. ಪಂಚತಂತ್ರದ ಶೈಲಿಯಲ್ಲಿ ಸಂಸ್ಕೃತದ ಪ್ರೌಢಿಮೆಯಿದೆ. ಆದರೆ ಕೃತಿಯಾದ್ಯಂತ ಸರಳ ಕನ್ನಡದ ಗದ್ಯ ಪದ್ಯಗಳು ಹೇರಳವಾಗಿ ಕಂಡುಬರುತ್ತವೆ. ದುರ್ಗಸಿಂಹನ ಈ ಕೃತಿಯ ಮುಖ್ಯ ಉದ್ದೇಶವೇ ನೀತಿ ನಿರೂಪಣೆ. ದಡ್ಡ ರಾಜಕುಮಾರ, ಹುಂಬ ಅರಸ, ಸೊಕ್ಕಿದ ಅರಸರನ್ನು ತಿದ್ದುವ, ಬುದ್ಧಿ ಕಲಿಸುವ ಮಿತ್ರ ಸಂಹಿತೆಯಲ್ಲಿ ಸೇರುತ್ತದೆ. ಪ್ರಾಣಿ ವರ್ಗವನ್ನು ಮನುಷ್ಯನ ಬದುಕಿನ ಜೊತೆಗೆ ನಿಕಟ ಸಂಪರ್ಕವಿರುವಂತೆ ಚಿತ್ರಿಸಿರುವ ದುರ್ಗಸಿಂಹನ ಕಥಾತಂತ್ರ ಅದ್ಭುತವಾದುದು. ದುರ್ಗಸಿಂಹನ ಕಥಾಶೈಲಿಗೆ ಒಂದು ಉದಾಹರಣೆ :

“ಒಂದು ಮಹಾಟವಿಯೊಳ್ ಕಂಬಳಕನೆಂಬ ಬೇಡನೊಂದು
ಪುಲಿ ತನ್ನನ್ನಟ್ಟಿದರೆ ಪ್ರಾಣ ಭಯಂ ದೆಸೆಗಾಣದೆ ಪುರಾಣ ಕೂಪ ದೊಳ್ ಬಿರ್ದಂ
ಆ ಪುಲಿಯುಂ ಕೋಪಾಂಧನಪ್ಪುದರಿಂದಲ್ಲಿಯೆ ಬಿರ್ದುದು. ಅನ್ನೆಗಮೊಂದು
ಚಪಲಕನೆಂಬ ಕಟಿ ನೀರ್ಗುಡಿಯಲೆಂದು ಬಾವಿಯಂ ಪುಗು ತಂದು ತತ್
ಕೂಪ ಸಮೀಪದೊಳ್ ಎಂದು ಪೋಗಲಿಂಬಿಲ್ಲದೆ, ತಡಿ ವಿಡಿದೆಳಲು ತಿರ್ದ
ಸರ್ಪನ ಬಾಲಮಂ ಬಳ್ಳಿಯೆಂದು ಬಗೆದು ಹಿಡಿದಿವೆಯುತ್ತ
ಮಹಿಸತಂ ಬಿರ್ದುದು ಅನ್ನೆಗಂ.....”[೨೨]

ಒಂದು ಮಹಾ ಅರಣ್ಯದಲ್ಲಿ ‘ಕಂಬಳಕ’ ಎನ್ನುವ ಬೇಡನನ್ನು ಒಂದು ಹುಲಿ ತಿನ್ನಲು ಬೆನ್ನಟ್ಟಿ ಓಡಿಸಿಕೊಂಡು ಹೋದಾಗ ಆ ಬೇಡ ಪ್ರಾಣ ಭಯದಿಂದ ದಿಕ್ಕು ಕಾಣದೆ ಹಳೇ ಕಾಲದ ಬಾವಿಯಲ್ಲಿ ಬಿದ್ದನು. ಕೋಪಾವಿಷ್ಠನಾಗಿದ್ದ ಆ ಹುಲಿ ಅಲ್ಲಿಯೇ ಬೀಡು ಬಿಟ್ಟಿತು. ಆ ಸಂದರ್ಭದಲ್ಲಿ ‘ಚಪಲಕ’ ಎಂಬ ಹೆಸರಿನ ಕೋತಿ ನೀರು ಕುಡಿಯುವುದಕ್ಕಾಗಿ ಬಾವಿಯ ಹತ್ತಿರ ಬಂದು ಆ ಬಾವಿಯ ಹತ್ತಿರದಲ್ಲಿ ನಿಂತು ಹೋಗಲು ಸ್ಥಳವಿಲ್ಲದೆ ದಂಡೆಯಲ್ಲಿ ತೆವಳುತ್ತ ಸಾಗಿದ್ದಜ ಹಾವಿನ ಬಾಲವನ್ನು ಬಳ್ಳಿ ಎಂದು ತಿಳಿದು ಹಿಡಿದೆಳೆಯುತ್ತಿರುವಾಗ ಮಹಿಲಿ ಸಹಿತ ಅದೇ ಬಾವಿಯಲ್ಲಿ ಬಿದ್ದಿತು. ಆಗ..., ಏನಾಯ್ತು ಎಂಬ ಕುತೂಹಲ ಭರಿತ ತವಕ ಮಕ್ಕಳಲ್ಲಿ ಮೂಡುತ್ತದೆ. ಒಂದು ವೇಳೆ ಕಥೆಯನ್ನು ಹೇಳುವ ಕಥೆಗಾರ ಅಷ್ಟಕ್ಕೆ ನಿಲ್ಲಿಸಿಬಿಟ್ಟರೆ ಮಕ್ಕಳ ಕಾಡಾಟ ಮತ್ತು ಅವು ಜಾರುವ ಕಲ್ಪನಾ ಲೋಕಗಳನ್ನು ಊಹಿಸಲೂ ಹಿರಿಯರಿಂದ ಸಾಧ್ಯವಿಲ್ಲ. ಇಂಥ ಕಥೆಗಳನ್ನು ಸೃಷ್ಟಿಸಿದ ದುರ್ಗಸಿಂಹ ಪಂಚತಂತ್ರ ಕೃತಿಯನ್ನು ಮಕ್ಕಳಿಗೆಂದೇ ವಿಶೇಷವಾಗಿ ಬರೆದೆ ಎಂದು ಹೇಳಿಕೊಳ್ಳದಿದ್ದರೂ ಇಲ್ಲಿಯ ಕಥೆಗಳು ಮಕ್ಕಳನ್ನುದ್ದೇಶಿಸಿಯೇ ಹೇಳಿರಬೇಕೆಂಬ ಭಾವನೆಯನ್ನು ಸೃಷ್ಟಿಸುತ್ತವೆ. ೧೭೯೪ ರಿಂದ ೧೮೬೮ರವರೆಗೆ ಬಾಳಿ ೫೦ ಕೃತಿಗಳನ್ನು ರಚಿಸಿದ ಮೈಸೂರು ಮಹಾರಾಜ ‘ಮುಮ್ಮಡಿ ಕೃಷ್ಣರಾಜ ಒಡೆಯರ್’ ಪಂಚತಂತ್ರದ ಕಥೆಗಳನ್ನು ಪ್ರಕಟಿಸಿ ಮಹದುಪಕಾರವನ್ನು ಮಾಡಿದರು.

“ಬಾಲಮಿತ್ರ ಎಂಬ ಕಾವ್ಯನಾಮದಿಂದ ಬರೆಯುತ್ತಿದ್ದ ಬಾದಾಮಿ ಕೃಷ್ಣರಾವ್ ೧೯೨೫ರಲ್ಲಿ ಬಾಲ ರಾಮಾಯಣ, ಬಾಲಭಾರತಗಳನ್ನು ಜಂಗಮ ಕೋಟೆ ಕೃಷ್ಣಶಾಸ್ತ್ರಿಗಳು ‘ಕಿಂಡರ್‌ಗಾರ್ಟನ್ ಕಥೆಗಳು’ ಎಂಬ ಪುಸ್ತಕವನ್ನು ಹೊನ್ನಾಪುರ ಮಠ ಗದಿಗೆಯ್ಯ ಹುಚ್ಚಯ್ಯ ಎನ್ನುವವರು ‘ಬಾಲ ಭಾರತ’ವನ್ನೂ ಬರೆದರು. ಕೋಲಾರದಲ್ಲಿ ಶಿಕ್ಷಕರಾಗಿದ್ದ ವೈ.ಎನ್. ಗುಂಡಪ್ಪನವರು ‘ತೋಳರಾಯನ ಸಭೆ’, ಇತ್ಯಾದಿ ಕಥೆಗಳನ್ನು, ಅಮ್ಮಿನಭಾವಿಯ ತಮ್ಮಾಜಿ ನಾರಾಯಣರಾಯರು ‘ಮಕ್ಕಳ ಕಥೆಗಳು’ ಎಂಬ ಕಥಾಸಂಕಲನವನ್ನು ಬರೆದು ಪ್ರಕಟಿಸಿದರು.”[೨೩] ಇವರು ದುರ್ಗಸಿಂಹನ ನಂತರ ೧೯ನೇ ಶತಮಾನದಲ್ಲಿ ಮಕ್ಕಳಿಗಾಗಿ ಬರೆದ ಮಹನೀಯರೆನಿಸಿಕೊಳ್ಳುತ್ತಾರೆ. ಬಾದಾಮಿ ಕೃಷ್ಣರಾವ್, ಹೊನ್ನಾಪುರ ಮಠದ ಗದಿಗೆಯ್ಯ ಹುಚ್ಚಯ್ಯನವರು ಮಹಾಭಾರತ, ರಾಮಾಯಣಗಳ

ಕಥಾವಸ್ತುವನ್ನು ಆಯ್ದುಕೊಂಡಿದ್ದರೂ ಪೌರಾಣಿಕ ಕಥೆಗಳಿಂದಲೇ ಮಕ್ಕಳೊಳಗೆ ನೀತಿ ಬಿತ್ತುವ ಕಾರ್ಯ ಮಾಡಿದ್ದಾರೆ. ವೈ.ಎನ್. ಗುಂಡಪ್ಪನವರು ತಮ್ಮ 'ತೋಳರಾಯನ ಸಭೆ' ಕಥಾ ಗುಚ್ಛಗಳಲ್ಲಿ ಪ್ರಾಣಿ ಜಗತ್ತನ್ನು ಮನುಷ್ಯ ಜಗತ್ತಿನೊಂದಿಗೆ ತಳುಕು ಹಾಕಿ ಬರೆಯುತ್ತಾರೆ.

ಮಕ್ಕಳ ಮನೋ ಜಗತ್ತಿನ ಮೇಲೆ ಹಿರಿಯರೆನಿಸಿಕೊಂಡವರು ತಮ್ಮ ಭಾವನೆಗಳನ್ನು ಹೇರಬಾರದು. ಮುಕ್ತ ಸ್ವಾತಂತ್ರ್ಯ ಮಗುವಿನ ಮನಸ್ಸನ್ನು ಅರಳಿಸಲು ಇರಲೇಬೇಕಾದ ಸಂಗತಿ. ಹಿರಿಯ ಮತ್ತು ಕಿರಿಯ ಮಾನಸಿಕ ವ್ಯಾಪಾರಗಳು ಭಿನ್ನವಾಗಿರುತ್ತವೆ. ಈ ನೆಲೆಯಲ್ಲಿ ಲಿಬಿಯಾ ದೇಶದಿಂದ ಅಮೇರಿಕಾಕ್ಕೆ ವಲಸೆ ಹೋಗಿದ್ದ ೧೮೮೩ ರಿಂದ ೧೯೩೧ರ ಕಾಲಾವಧಿಯಲ್ಲಿದ್ದ ಖ್ಯಾತ ಕವಿ ಮತ್ತು ಚಿತ್ರ ಕಲಾವಿದ 'ಖಲೀಲ್ ಗಿಬ್ರಾನ್'ನ ಕಾವ್ಯ ಸಾರ್ವಕಾಲಿಕ ಸತ್ಯ ಸಂಗತಿಯನ್ನು ಸಾರುತ್ತದೆ. ಮಕ್ಕಳ ವಯೋ ಸಹಜ ವರ್ತನೆಗಳನ್ನು ವಿಮರ್ಶಿಸುವ ಮತ್ತು ತಮ್ಮದೇ ಆದ ಬಯಕೆಗಳನ್ನು ಅದರ ಮೇಲೆ ಹೇರುವ ತುಡಿತಗಳ ಅಡ್ಡ ಪರಿಣಾಮಗಳೇನು ಎನ್ನುವ ಆತ್ಮಾವಲೋಕನವನ್ನು ಹಿರಿಯರು ಮಾಡಿಕೊಳ್ಳಬೇಕೆನ್ನುವುದು ಗಿಬ್ರಾನ್‌ನ ವಾದ. ಗಿಬ್ರಾನ್ ತನ್ನ 'The Prophet' ಎಂಬ ಸಂಕಲನದಲ್ಲಿ 'On Children' ಎನ್ನುವ ಪ್ರಖ್ಯಾತ ಕಾವ್ಯವೊಂದನ್ನು ಬರೆಯುತ್ತಾನೆ. ಅದರ ಇಂಗ್ಲೀಷ್ ರೂಪ ಹೀಗಿದೆ:

Your Children are not your children
They are sons and daughters of Life's Longing for itself
They come through you but not form you,
And though they are with you, yet they belong not to you
You may give them your love but not your thoughts
For they have their own thoughts.
You may house their bodies but not their souls
For their souls dwell in the house of tomorrow
which you cannot visit, not even in your dreams.
You may strive to be like them, but seek not to make
Them like you.
For life goes not backward har tarries with yesterday
You are the bows from which your children as living
arrows are sent forth.
The archer sees the mark upon the path of the infinite
and he bends you with his might that his arrows
may go swift and far.

Let your bending in the areher's ahand

be for gladness;

For even as he loves the arrow that flies,

so he loves also the bow that is stable

ಪ್ರಭುಶಂಕರರವರು ಗಿಬ್ರಾನ್‌ನ ಈ ಇಂಗ್ಲೀಷ್ ಕಾವ್ಯವನ್ನು ಕನ್ನಡದಲ್ಲಿ ಸೊಗಸಾಗಿ ಕಟ್ಟಿಕೊಟ್ಟಿದ್ದಾರೆ;

ನಿಮ್ಮ ಮಕ್ಕಳು ನಿಮ್ಮ ಮಕ್ಕಳಲ್ಲ,
ಜೀವದ ಸ್ವಪ್ರೇಮದ ಪುತ್ರ ಪುತ್ರಿಯರು ಅವು,
ಅವು ನಿಮ್ಮ ಮೂಲಕ ಬಂದಿವೆಯೇ ಹೊರತು ನಿಮ್ಮಿಂದಲ್ಲ.
ನಿಮ್ಮ ಜತೆ ಅವು ಇರುವುದಾದರೂ ನಿಮಗೆ ಸೇರಿದ್ದಲ್ಲ,
ನಿಮ್ಮ ಪ್ರೀತಿಯನ್ನು ನೀವು ಅವುಗಳಿಗೆ ನೀಡಬಹುದು,
ಆದರೆ ನಿಮ್ಮ ಆಲೋಚನೆಗಳನ್ನಲ್ಲ.
ಏಕೆಂದರೆ ಅವರಿಗೆ ಅವರದೇ ಸ್ವಂತ ಆಲೋಚನೆಗಳುಂಟು.
ಅವರ ದೇಹಗಳಿಗೆ ನೀವು ಮನೆಯಾಗಿರಬಹುದೇ ಹೊರತು ಆತ್ಮಗಳಿಗಲ್ಲ,
ಏಕೆಂದರೆ ಅವರ ಆತ್ಮಗಳು ನಾಳೆಯ ಮನೆಯಲ್ಲಿ ನೆಲೆಸುತ್ತವೆ.
ಎಲ್ಲಿಗೆ ನೀವು ಕನಸಿನಲ್ಲಿಯೂ ಹೋಗಲಾರಿರೋ ಅಲ್ಲಿ
ಅವಂತಿರಲು ನೀವು ಪ್ರಯತ್ನಿಸಬಹುದು, ಆದರೆ ಅವರನ್ನು
ನಿಮ್ಮಂತೆ ಮಾಡಲು ಪ್ರಯತ್ನಿಸದಿರಿ.
ಏಕೆಂದರೆ ಜೀವ ಹಿಮ್ಮುಖವಾಗಿ ಹರಿಯುವುದೂ ಇಲ್ಲ,
ನಿನ್ನೆಯ ಜೊತೆ ತಂಗುವುದೂ ಇಲ್ಲ.
ನಿಮ್ಮ ಮಕ್ಕಳು, ಜೀವಂತ ಬಾಣಗಳಂತೆ ಚಿಮ್ಮಲು ಇರುವ
ಬಿಲ್ಲುಗಳು ನೀವು
ಅನಂತದ ಪಥದ ಮೇಲೆ ತನ್ನ ಗುರಿಯನ್ನು ಬಿಲ್ಲುಗಾರ ಗಮನಿಸುತ್ತಾನೆ.
ಅವನ ಶಕ್ತಿಯಿಂದ ನಿಮ್ಮ ಬಾಗಿಸುತ್ತಾನೆ, ಅವನ ಬಾಣಗಳು
ವೇಗವಾಗಿ ಬಹು ದೂರ ಹೋಗುವಂತೆ,
ಆ ಬಿಲ್ಲುಗಾರನ ಕೈಯಲ್ಲಿ ನಿಮ್ಮ ಬಾಗುವಿಕೆ ಸಂತಸಮಯವಾಗಿರಲಿ,
ಏಕೆಂದರೆ ಹಾರುವ ಅಂಬನ್ನು ಅವನು ಪ್ರೀತಿಸಿದಂತೆಯೇ
ದೃಢವಾದ ಬಿಲ್ಲನ್ನೂ ಆತ ಪ್ರೀತಿಸುತ್ತಾನೆ.[೨೪]

ಬಹುಶಃ ಮಕ್ಕಳ ಸ್ವಾತಂತ್ರ ಹರಣ ಮತ್ತು ತಂದೆ ತಾಯಂದಿರು ತಮ್ಮ ಮಕ್ಕಳು ತಮ್ಮಂತೆ ಆಗಬೇಕೆಂಬ ಆಸೆಯನ್ನು ತುಂಡರಿಸುವ ಮತ್ತು ತನಗೆ ತಾನೇ ಆಲೋಚಿಸಿ ಜೀವನ ರೂಪಿಸಿಕೊಳ್ಳುವ ಮಗುವಿನ ಚಿಮ್ಮುವಿಕೆಗಳನ್ನು ಖಲೀಲ್ ಗಿಬ್ರಾನ್‌ರವರು ನಿರೂಪಿಸಿದಂತೆ

ಮತ್ಯಾರಿಂದಲೂ ನಿರೂಪಿಸಲಾಗಿಲ್ಲ. 'On Children' ಈ ಅರ್ಥದಲ್ಲಿ ವಿಶ್ವ ಶ್ರೇಷ್ಠ ಕಾವ್ಯವಾಗಿ ನಿಲ್ಲುತ್ತದೆ. ಪ್ರೀತಿ ಮತ್ತು ಆಲೋಚನೆಗಳ ಮಧ್ಯದ ವ್ಯತ್ಯಾಸ ಏನೆಂಬುದನ್ನು ಮಗುವಿನ ಮನಸ್ಥಿತಿಯ ಹಿನ್ನೆಲೆಯಲ್ಲಿ ರೂಪಿಸುತ್ತಾನೆ ಗಿಬ್ರಾನ್.

ಕನ್ನಡ ಮಕ್ಕಳ ಸಾಹಿತ್ಯವನ್ನು ಗಮನಿಸಿದರೆ ಸಾಹಿತ್ಯ ನಿರೂಪಣೆ - ಖಲೀಲ್ ಗಿಬ್ರಾನ್‌ನ ಆಶಯದಂತೆ ರೂಪಿತವಾಗಿದೆ ಎಂದೆನಿಸದೇ ಇರದು. ಕನ್ನಡ ಮಕ್ಕಳ ಸಾಹಿತ್ಯ ಅವಜ್ಞೆಗೆ ಒಳಗಾಗಿದೆ ಎನ್ನುವ ಮಾತುಗಳು ನಿಜವಾಗಿದ್ದರೂ ದೊರಕುವ ಸಾಹಿತ್ಯ ಪ್ರಕಾರಗಳು ಹಿರಿಯರ ಆಲೋಚನೆಗಳನ್ನು ಮಕ್ಕಳ ಮೇಲೆ ಬಲವಂತವಾಗಿ ಹೇರುವ ಪ್ರಯತ್ನವನ್ನು ಮಾಡಿಲ್ಲ ಎನಿಸುತ್ತದೆ. ದುರ್ಗಸಿಂಹನ ನಂತರ ಕನ್ನಡದಲ್ಲಿ ಮಕ್ಕಳಿಗೆ ಹತ್ತಿರವಾದ ಭಾಷೆಯಲ್ಲಿ ರಚಿತವಾದ ಕಾವ್ಯವೆಂದರೆ 'ಗೋವಿನ ಹಾಡು'. ಈ ಹಾಡು ಅನಾಮಧೇಯನ ರಚನೆ. ಹಾಡಿನ ಕೊನೆಯ ಸಾಲುಗಳಲ್ಲಿ ಮಂಡ್ಯ ಜಿಲ್ಲೆಯ ಮದ್ದೂರಿನ ನರಸಿಂಹದೇವರ ಹೆಸರು ಪ್ರಸ್ತಾಪವಾಗುವುದರಿಂದ ಈ ಹಾಡನ್ನು ರಚಿಸಿದ ಕವಿ ಮದ್ದೂರಿನವನಿರಬೇಕೆನ್ನುವ ವಾದವನ್ನು ಹಾಡಿನ ಸಂಪಾದಕರಾದ ಡಿ.ಎಲ್. ನರಸಿಂಹಾಚಾರ್ಯರು ಮಂಡಿಸುತ್ತಾರೆ. ಈ ಕಥೆ 'ಇತಿಹಾಸ ಸಮುಚ್ಚಯ' ಎಂಬ ಪುರಾಣ ಕಥೆಗಳ ಪುಸ್ತಕದಲ್ಲಿ ಪ್ರಸ್ತಾವನೆಗೊಂಡಿದೆ. ಇದು ಸಂಸ್ಕೃತ ಭಾಷೆಯ ಗ್ರಂಥ. 'ಬಹುಲಾ' ಎಂಬ ಹಸು 'ಕಾಮರೂಪಿ' ಎಂಬ ಹುಲಿಯ ನಡುವಿನ ಸತ್ಯಸಂಧತೆಯ ಸೈದ್ಧಾಂತಿಕ ನಿಲುವಿಗೆ ಸಂಬಂಧಿಸಿದುದಾಗಿದೆ. ಈ ಕಥೆಯನ್ನು ಭೀಷ್ಮನು ಧರ್ಮರಾಯನಿಗೆ ಹೇಳಿದನೆಂಬುದಾಗಿ ಉಲ್ಲೇಖಗಳು ದೊರಕುತ್ತವೆ. 'ಸತ್ಯ ವಾಕ್ಯ ಪರಿಪಾಲನೆ' ಈ ಕಥೆಯ ಮುಖ್ಯ ಧಾತುವಾದ್ದರಿಂದ ಈ ಹಾಡು ಮಕ್ಕಳ ಮೇಲೆ ಬೀರಿದ ಪರಿಣಾಮಕ್ಕೆ ಸಮನಾದ ಪರಿಣಾಮ ಭಾರತೀಯ ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ಬೇರಾವ ಹಾಡಿಗೂ ಮಾಡಲಾಗಿಲ್ಲ ಎನ್ನುವ ಸಾಮಾನ್ಯ ಅಭಿಪ್ರಾಯವಿದೆ. ಕರುಣಾರಸ ಪ್ರಧಾನವಾದ ಈ ಕಥನಕಾವ್ಯ ಮಗುವಿನ ಮನಸ್ಸನ್ನು ಆರ್ದ್ರಗೊಳಿಸುತ್ತದೆ. ೧೩೭ ಚೌಪದಿಗಳು ಈ ಹಾಡಿನಲ್ಲಿರುವುದು ವಿಶೇಷ. ಡಿ.ಎಲ್.ಎನ್.ರವರು ೧೧೪ ಚೌಪದಿಗಳು ಮಾತ್ರ ಮೂಲ ಕವಿಯಿಂದ ರಚಿತವಾಗಿದ್ದು ಮಿಕ್ಕ ೨೩ ಚೌಪದಿಗಳು ಪ್ರಕ್ಷಿಪ್ತಗಳೆಂದಿದ್ದಾರೆ. ಪ್ರಾಸ, ಲಯ, ಸರಳಶೈಲಿ, ನಾಟಕೀಯತೆ, ಸಂಭಾಷಣೆ, ಚುರುಕಾದ ಓಟ, ಸಂಕ್ಷಿಪ್ತತೆ, ಆಕರ್ಷಣೆಗಳು ಈ ಕಾವ್ಯದ ಮುಖ್ಯ ಲಕ್ಷಣವಾಗಿವೆ.

> "ಧರಣಿ ಮಂಡಲ ಮಧ್ಯದೊಳಗೆ
> ಮೆರೆವುದೈವತ್ತಾರು ದೇಶದಿ
> ಇರುವ ಕಾಳಿಂಗನೆಂಬ ಗೊಲ್ಲನು
> ಪರಿಯ ನಾನೆಂತು ಪೇಳ್ವೆನು"[೨೫]

ಇವು 'ಗೋವಿನ ಹಾಡು' ಕಥನ ಕಾವ್ಯದ ಸಾಲುಗಳು. ಪದಕಟ್ಟಿ ಈ ಕಾವ್ಯವನ್ನು ಹಾಡುತ್ತಿದ್ದರೆ ಎಂಥ ತುಂಟ ಮಗುವೂ ಕೂಡ ತನ್ನೆಲ್ಲ ಚಟುವಟಿಕೆಗಳನ್ನು ಬದಿಗಿಟ್ಟು

ತನ್ಮಯತೆಗೆ ಜಾರಿ ಬಿಡುತ್ತದೆ. ಗೋವಿನ ಹಾಡು ಮಕ್ಕಳ ವಿಶ್ವಶ್ರೇಷ್ಠ ಕಥನಕಾವ್ಯ. ಧರಣಿ ಮಂಡಲದ ಮಧ್ಯದಲ್ಲಿರುವ 'ಕರ್ಣಾಟ' ಎಂಬ ದೇಶದಲ್ಲಿ ನಡೆಯುವ ಈ ಕಥೆ ವಿಶ್ವದ ಎಲ್ಲಾ ಮಕ್ಕಳೂ ಆಲಿಸಲೇಬೇಕಾದ ಕಥೆ. ಆಧುನಿಕ ಕನ್ನಡ ಮಕ್ಕಳ ಸಾಹಿತಿಗಳ ಮೇಲೆ ಈ ಹಾಡಿನ ಛಂದಸ್ಸು ತೀವ್ರ ಪ್ರಭಾವವನ್ನು ಬೀರಿದೆ. ಹಲವು ಕವಿಗಳು ಇದರ ಲಯ, ಶೈಲಿ ಮತ್ತು ಛಂದಸ್ಸುಗಳನ್ನು ಬಳಸಿಕೊಂಡು ಕಾವ್ಯ ರಚಿಸಿದ್ದಾರೆ. ಬಿಸುಮ ಸೆಟ್ಟಿ ಎನ್ನುವವನು ಕುಡುಕುತನದಿಂದ ಹಾಳಾದ ಕಥಾವಸ್ತುವನ್ನು ಹೊಂದಿರುವ ಪಂಜೆ ಮಂಗೇಶರಾಯರ 'ಕಡೆಕಂಜಿ' ಎನ್ನುವ ಕವನವನ್ನು ಈ ಮಾತುಗಳಿಗೆ ಉದಾಹರಣೆಯಾಗಿ ನೀಡಬಹುದು.

ಆಧುನಿಕ ಕನ್ನಡ ಮಕ್ಕಳ ಸಾಹಿತ್ಯದ ರಚನೆ ಮತ್ತು ಮುದ್ರಣಗಳಲ್ಲಿ ಪ್ರಭಾವವನ್ನು ಬೀರಿದ ಕೀರ್ತಿ ಕ್ರಿಶ್ಚಿಯನ್ ಮಿಷನರಿಗಳಿಗೆ ಸಲ್ಲುತ್ತದೆ. ಆಂಗ್ಲರ ಆಳ್ವಿಕೆ ತಂದ ಸಾರ್ವಜನಿಕ ಶಿಕ್ಷಣ ಪದ್ಧತಿಯಿಂದಾಗಿ ಶಿಕ್ಷಣ ಕ್ಷೇತ್ರ ಹೊಸ ರೂಪವನ್ನು ಪಡೆದುಕೊಂಡಿತು. ಕನ್ನಡ ನಾಡಿನಾದ್ಯಂತ ಮಕ್ಕಳಿಗಾಗಿ ಈ ಪಠ್ಯಪುಸ್ತಕಗಳ ರಚನೆ ಆರಂಭವಾಯಿತು. ಮೈಸೂರಿನ ಚ. ವಾಸುದೇವಯ್ಯನವರು ಬರೆದ 'ಒಂದನೆ ಬಾಲಬೋಧೆ', ಶ್ರೀನಿವಾಸರಾವ್‌ರವರು ಬರೆದ 'ಎರಡನೇ ಬಾಲಬೋಧೆ'ಗಳನ್ನು ಹೆಸರಿಸಲೇಬೇಕು. ವಾಸುದೇವಯ್ಯನವರ ಒಂದನೇ ಬಾಲಬೋಧೆಯಲ್ಲಿ ಬರುವ,

"ಎಲೆ ಬೆಕ್ಕೆ ರೂಪಿನಿಂದಲೆ
ಹುಲಿ ಜಾತಿಗೆ ಸೇರಿದೆನೆಂದು ಗರ್ವಿಸಬೇಡಾ
ಬಲುಮೆಯು ನಿನ್ನಲ್ಲಿಹುದೇ
ಇಲಿಗಳ ಹಿಡಿಯುವುದರಲ್ಲಾಯ್ತು ನಿನ್ನಯ ಶೌರ್ಯ"[೨೬]

ಎನ್ನುವ ಈ ಸಾಲುಗಳು ಮಕ್ಕಳ ಮನಸ್ಸಿನ ಒಳತೋಟಿಯನ್ನು ತಲುಪುವುದು ತುಸು ದುಸ್ತರವೆನಿಸಿದರೂ ಇಲ್ಲಿ ವ್ಯಕ್ತವಾಗಿರುವ ಭಾವ ಮಕ್ಕಳನ್ನು ತಟ್ಟುವುದಾದರೆ, ಮಾರ್ಜಾಲವೆಂದೂ ದ್ವೀಪಿಯಾಗದು. ಕೇವಲ ಇಲಿಗಳನ್ನು ಬೇಟೆಯಾಡಿದ ಮಾತ್ರಕ್ಕೆ ಬೆಕ್ಕು ಹುಲಿಯ ಶಕ್ತಿಗೆ ಸಮನಾಗದು ಎಂಬ ಚಿಂತನೆ ಬ್ರಿಟೀಷ್ ವಸಾಹತುಶಾಹಿ ವ್ಯವಸ್ಥೆಯ ವಿರುದ್ಧ ಮಕ್ಕಳಲ್ಲಿ ದೇಶ, ಸ್ವಾತಂತ್ರ ಪ್ರೇಮಗಳನ್ನು ಮೂಡಿಸುವ ಸಿದ್ಧಾಂತವನ್ನು ಆತ್ಮಗತ ಮಾಡಿಕೊಂಡಿದೆ ಎನಿಸುತ್ತದೆ. ಭಾರತೀಯ ಚರಿತ್ರೆಯಲ್ಲಿ ಚಿಕ್ಕಪುಟ್ಟ ರಾಜ್ಯಗಳನ್ನು ಮುಕ್ಕಿ ಮುನ್ನುಗ್ಗುತ್ತಾ ಸಾಗಿದ್ದ ಬ್ರಿಟೀಶ್ ಆಡಳಿತ ವಿರೋಧಿ ಅಲೆ ಈ ಸಾಲುಗಳಲ್ಲಿದೆ. ಶ್ರೀನಿವಾಸರಾವ್‌ರವರು ಬರೆದ 'ಎರಡನೇ ಬಾಲಬೋಧೆ'ಯಲ್ಲಿ;

"ಮಿರು ಮಿರುಗುವೆ ಹಾ ಕಿರು ತಾರೆಯ
ಅರಿಯೆನು ನಾನೆಲೆ ನೀನಾರೋ
ಧರೆಗಿಳಿಯದೆ ನೀನಿರುತಿಹೆ ದೂರದಿ
ನೆರೆ ಹೊಳೆಯುವ ವಜ್ರದ ತೆರದಿ"[೨೭]

ಎಂಬ ಕಾವ್ಯವಿದೆ. ಮೇಲ್ನೋಟಕ್ಕೆ ಇದು ಇಂಗ್ಲೀಷ್ 'ಕಿಂಡರ್ ಗಾರ್ಟನ್'ನ 'Twinkle Twinkle Little Star' ಕಾವ್ಯವನ್ನು ಹೋಲುತ್ತದೆನಿಸಿದೂ ಇದರ ಭಾವ ಅದಲ್ಲ ಎನಿಸುತ್ತದೆ. ಆಕಾಶ ಮತ್ತು ಧರೆಗಳ ಪ್ರಸ್ತಾಪ ಇಲ್ಲಿರುವುದು ಶ್ರೀಮಂತ ಮತ್ತು ಬಡವರ ಅಂತಸ್ತಿನ ಪ್ರತೀಕವಾಗಿ ಬಳಕೆಗೊಂಡಿದೆ. 'ಅರಿಯೆನು ನಾನೆಲೆ ನೀನಾರೊ' ಎನ್ನುವ ಸಾಲು ಬಡವನಾದವನ 'ನೀನಾರಾದರೆ ನನಗೇನು' ಎಂಬ ಭಾವನೆಯನ್ನು ಸೂಚಿಸುತ್ತದೆ. ಶ್ರೀಮಂತನು ಪಕ್ಕದಲ್ಲೇ ಇದ್ದು ಹೊಳೆಯುವ ವಜ್ರವಾಗಿದ್ದರೂ ಆಕಾಶದೆತ್ತರದಿಂದಿಳಿದು ಧರೆಗೆ ಬರಬೇಕು, ಬಡವರ ಬೆಸೆಯಬೇಕು, ಬಡವ-ಬಲ್ಲಿದರ ಅಂತರ ತಗ್ಗಬೇಕೆಂಬ ವಿಶಿಷ್ಟ ಚಿಂತನೆಯನ್ನು ಶ್ರೀನಿವಾಸರಾವ್ ಅವರು ಮಕ್ಕಳಲ್ಲಿ ಮೂಡಿಸುವ ಪ್ರಯತ್ನವನ್ನಿಲ್ಲಿ ಮಾಡಿದ್ದಾರೆ.

ಹಿರಿಯ ಮತ್ತು ಕಿರಿಯರ ಜನನದ ಕಾಲಘಟ್ಟಗಳ ಭಿನ್ನತೆಯನ್ನು ರವೀಂದ್ರನಾಥ್ ಠಾಗೂರ್‌ರವರು ತುಂಬಾ ಸೊಗಸಾಗಿ ಹೇಳಿದ್ದಾರೆ. "Dont Limit a Child to your own Learning, for he was born in one another time" ಅಂದರೆ "ಮಗುವಿನ ಕಲಿಕೆಗಳನ್ನು ಕೇವಲ ನಿಮ್ಮ ಕಲಿಕೆಗೆ ಸೀಮಿತಗೊಳಿಸಬೇಡಿ, ಅದು ಬೇರೊಂದು ಕಾಲಘಟ್ಟದಲ್ಲಿ ಜನಿಸಿದೆ" ಎಂದಾಗುತ್ತದೆ. ಕಲಿಕೆಗೂ ಕುತೂಹಲಕ್ಕೂ ಸಾಮ್ಯತೆಯಿದೆ. ಕುತೂಹಲ ಮೂಡಿಸುತ್ತ ಮಗುವಿಗೆ ಕಲಿಸುವ ನೂತನ ಪರಿಕಲ್ಪನೆಗಳ ಅಗತ್ಯವಿದೆ ಎನಿಸುತ್ತದೆ. ಒಂದು ಘಟನೆಯನ್ನು ವಿವಿಧ ವಯೋಮಾನದ ಜನ ಗಮನಿಸುವ ಪರಿಭಿನ್ನವಾಗಿರುತ್ತದೆ. ೪ ರಿಂದ ೧೦ನೇ ವಯಸ್ಸಿನ ಮಗುವಿನ ನೋಟಕ್ಕೂ ೧೦ ರಿಂದ ೧೫ನೇ ವಯಸ್ಸಿನ ಮಗುವಿನ ನೋಟಕ್ಕೂ ಯುವಕರ ನೋಟ, ಮಧ್ಯ ವಯಸ್ಸಿನವರ ನೋಟದಲ್ಲಿ ಮತ್ತು ಮುಪ್ಪಿನವರ ನೋಟಗಳಲ್ಲಿ ಸೃಷ್ಟಿಯಾಗುವ ಭಿನ್ನತೆಗಳು ಹಲವು ವಿಶಿಷ್ಟ ಸಿದ್ಧಾಂತ, ತತ್ವಗಳ ಜನನಕ್ಕೆ ಕಾರಣವಾಗುತ್ತದೆ. ಮಗು ಒಬ್ಬ ಸಾಹಸಿಯಾಗಿ, ಅನ್ವೇಷಕನಾಗಿ, ಕೇಳಿ, ಕಂಡು ಸ್ಪರ್ಶಿಸಿ ತಿಳಿದುಕೊಳ್ಳುವ ಶಕ್ತಿಯೊಡನೆ ಜನಿಸುತ್ತದೆ. ಹಾಗಾಗಿ ಅದರ ಜನ್ಮದ ಕಾಲಘಟ್ಟ ಮತ್ತು ದೊಡ್ಡವರ ಜೀವನ ಕಾಲಘಟ್ಟಗಳ ಮಧ್ಯದ ವ್ಯತ್ಯಾಸಗಳಲ್ಲಿ ಭಿನ್ನ ಪರಿಕಲ್ಪನೆಗಳಿರುತ್ತವೆಯಾದ್ದರಿಂದ ಹಿರಿಯರು ತಮ್ಮ ಕಲಿಕಾ ವಿಧಾನಗಳನ್ನು ಮಕ್ಕಳ ಮೇಲೆ ಹೇರಬಾರದು. ಮಳೆಗಾಲದಲ್ಲಿ ಮೂಡುವ, ಕೇಳುವ ಸಿಡಿಲು, ಗುಡುಗುಗಳು ಹಿರಿಯರಲ್ಲಿ ಅರ್ಜುನ ಆಕಾಶದಲ್ಲಿ ರಥ ಓಡಿಸುತ್ತಾನೆ, ಅವರ ರಥದ ಚಕ್ರಗಳ ಉಜ್ಜುವಿಕೆಯಿಂದ ಮಿಂಚು ಮತ್ತು ಜೋರಾಗಿ ರಥ ಓಡಿಸಿಕೊಂಡು ಹೋಗುತ್ತಿರುವುದರಿಂದ ಉಂಟಾಗುವ ಶಬ್ದವೇ ಗುಡುಗು ಎಂಬುದು ಹಿರಿಯರ ನಂಬಿಕೆಯಾಗಿದ್ದರೆ, ವಿರುದ್ಧ ವಿದ್ಯುದಂಶಗಳನ್ನು ಹೊಂದಿರುವ ಸಿಡಿಲು ಮೋಡಗಳು ಪರಸ್ಪರ ಹತ್ತಿರ ಬಂದು ಡಿಕ್ಕಿ ಹೊಡೆದಾಗ ಗುಡುಗು ಮತ್ತು ಮಿಂಚು ಮೂಡುತ್ತದೆ. ಮಿಂಚು ಹೈ ಓಲ್ಟೇಜ್ ಇರುವ ಕರೆಂಟು ಎಂಬುದು ಶಾಲೆಗೆ ಹೋಗುವ ಮಗುವಿನ ವೈಜ್ಞಾನಿಕ ತಿಳುವಳಿಕೆಯಾಗಿರುತ್ತದೆ. ಹಿರಿಯರಾದವರೇನಾದರೂ ಹಾಗಲ್ಲ ಎಂದು ಹೇಳ ಹೊರಟರೆ, ಬೆಂಜಮಿನ್ ಫ್ರ್ಯಾಂಕ್ಲಿನ್‌ನ ಗಾಳಿಪಟದ ಕಥೆಯನ್ನೇ ಮಗು ಹೇಳಿ ಬಿಡುತ್ತದೆ. ನಿಖರವಾದ ಈ ವಾದ ಸರಣಿಗೆ ಹಿರಿಯರು ಸುಮ್ಮನಿರಬೇಕೇ ಹೊರತು ಅರ್ಜುನ

ಮತ್ತು ರಥದ ಕಥೆಗಳನ್ನು ಹೇಳಬಾರದು. ಮನರಂಜನೀಯ ಪರಿಕಲ್ಪನೆಗಳೆಂದೂ ವೈಜ್ಞಾನಿಕ ಆವಿಷ್ಕಾರಗಳನ್ನು ಸರಿಗಟ್ಟಲಾರವು. ಹಾಗಾಗಿ ಟ್ಯಾಗೂರ್‌ರವರು ಕಾಲಘಟ್ಟಗಳ ಮಧ್ಯದ ವ್ಯತ್ಯಾಸವನ್ನು ಹೇಳುತ್ತಾರೆ. ಹೀಗಾಗಿ ಮಗುವಿನ ಜಗತ್ತು ಬೇರೆಯಾಗಿರುತ್ತದೆ.

ಒಂದನೇ ಮತ್ತು ಎರಡನೇ ಬಾಲಬೋಧೆಗಳ ನಂತರ ಕನ್ನಡ ಮಕ್ಕಳ ಸಾಹಿತ್ಯದಲ್ಲಿ ಅಂಥ ಕ್ರಾಂತಿ ಏನೂ ನಡೆಯಲಿಲ್ಲ. ಈ ಸಂದರ್ಭದಲ್ಲಿ ಕೆಲವು ವಾಚಕಗಳು ಮೊದಲನೇ ಪುಸ್ತಕ, ಎರಡನೇ ಪುಸ್ತಕಗಳೆಂಬ ಹೆಸರಿನಲ್ಲಿ ಪ್ರಕಟಗೊಂಡವು. ಈ ಪುಸ್ತಕಗಳಲ್ಲಿ ಪ್ರಜ್ಞಾವಲಯವನ್ನು ವಿಸ್ತರಿಸುವ, ತಿಳುವಳಿಕೆಗಳನ್ನು ನೀಡುವ ಚಿಕ್ಕ ಚಿಕ್ಕ ವಾಕ್ಯಗಳು ಮತ್ತು ತಿಳುವಾದ ಪಾಠಗಳು, ಪದ್ಯಗಳು ಈ ಪುಸ್ತಕಗಳಲ್ಲಿ ಸ್ಥಾನ ಪಡೆದವು;

“ಇಟ್ಟರೆ ಸಗಣಿಯಾದೆ
ತಟ್ಟಿದರೆ ಬೆರಣಿಯಾದೆ
ಸುಟ್ಟರೆ ವಿಭೂತಿಯಾದೆ
ತಟ್ಟದೆ ಹಾಕಿದರೆ ಮೇಲುಗೊಬ್ಬರವಾದೆ
ನೀನಾರಿಗಾದೆಯೋ ಎಲೆಮಾನವ”[೨೮]

ಎಂಬ ಪದ್ಯವನ್ನು ಈ ಮಾತಿಗೆ ಉದಾಹರಣೆಯಾಗಿ ನೀಡಬಹುದು. ದುರದೃಷ್ಟವಶಾತ್ ಹೀಗೆ ಮೊದಲನೇ ಮತ್ತು ಎರಡನೇ ಪುಸ್ತಕಗಳಲ್ಲಿ ಬಂದಿರುವ ಈ ಸಾಹಿತ್ಯವನ್ನು ಸೃಷ್ಟಿಸಿದವರು ಯಾರು ಎಂಬುದರ ಸ್ಪಷ್ಟತೆ ಪ್ರಾಪ್ತವಿಲ್ಲ. ಆದಾಗ್ಯೂ ಇಂಥ ನೀತಿ ಬೋಧ ಸಾಹಿತ್ಯದ ಪ್ರಕಟಣೆಯ ಹೊಣೆಯನ್ನು ಹೊತ್ತುಕೊಂಡವರು ಎಂ.ಎಸ್. ಪುಟ್ಟಣ್ಣ ಮತ್ತು ಎಸ್.ಜಿ. ನರಸಿಂಹಾಚಾರ್ಯರವರು. ಎಸ್.ಜಿ. ನರಸಿಂಹಾಚಾರ್ಯರು ಕಾಳಿದಾಸ ಮಹಾಕವಿಯ ‘ರಘುವಂಶ’ ಕೃತಿಯಲ್ಲಿನ ‘ದಿಲೀಪರಾಜ’ನ ‘ಅಜ’ ಮಹಾರಾಜನ ಕಥೆಗಳನ್ನಾಧರಿಸಿ ಚಿಕ್ಕ ಚಿಕ್ಕ ಷಟ್ಪದಿಗಳನ್ನು ರಚಿಸಿದ್ದಾರೆ.

ಕನ್ನಡ ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ದುರ್ಗಸಿಂಹನ ಪಂಚತಂತ್ರ, ಗೋವಿನಹಾಡು, ಒಂದನೇ ಬಾಲಬೋಧೆ, ಎರಡನೇ ಬಾಲಬೋಧೆ, ಮೊದಲನೇ ಪುಸ್ತಕ, ಎರಡನೇ ಪುಸ್ತಕಗಳೆಂಬ ರೀಡರ್‌ಗಳನ್ನು ನಂತರ ಅಭೂತಪೂರ್ವ ಸೇವೆ ಸಲ್ಲಿಸಿದ ಕೀರ್ತಿ ಎಂ.ಎಸ್. ಪುಟ್ಟಣ್ಣನವರಿಗೆ ಸಲ್ಲುತ್ತದೆ. ‘ಹಿತಬೋಧಿನಿ’ ಎಂಬ ಪತ್ರಿಕೆಯನ್ನು ಸ್ಥಾಪಿಸಿ ಮುನ್ನಡೆದ ಕೀರ್ತಿ ಪುಟ್ಟಣ್ಣನವರದು. ಪುರಾಣ, ಇತಿಹಾಸ ಮತ್ತು ಆದರ್ಶನೀಯ ವ್ಯಕ್ತಿಗಳ ಜೀವನ ಚರಿತ್ರೆಗಳನ್ನೊಳಗೊಂಡ ‘ನೀತಿ ಚಿಂತಾಮಣಿ’ ಕೃತಿಯನ್ನು ಹೊರತಂದರು. ನೀತಿ ಚಿಂತಾಮಣಿ ೧೫೦ ಕಥೆಗಳನ್ನೊಳಗೊಂಡ ಮಕ್ಕಳ ಕಥಾಸಂಕಲನ. ಈ ಸಂಕಲನ ಸುಮಾರು ದಶಕಗಳವರೆಗೆ ಶಾಲಾ ಮಕ್ಕಳ ಪಠ್ಯಪುಸ್ತಕಗಳಲ್ಲಿ ಬೋಧನೀಯ ಸ್ಥಾನ ಪಡೆದಿದ್ದವು. ಪುಟ್ಟಣ್ಣನವರು ಮಕ್ಕಳಿಗಾಗಿ ‘ಮಾಡಿದ್ದುಣ್ಣೋ ಮಹಾರಾಯ’ ಮತ್ತು ಫ್ರೆಂಚ್ ಭಾಷೆಯ History of Sanflord and Merton ಎನ್ನುವ ಕೃತಿಯನ್ನಾಧರಿಸಿದ

'ಸುಮತಿ ಮದನಕುಮಾರರ ಚರಿತ್ರೆ' ಎಂಬ ಕಾದಂಬರಿಯನ್ನು ಬರೆದರು. ಕನ್ನಡ ಮಕ್ಕಳ ಸಾಹಿತ್ಯ ಕ್ಷೇತ್ರದ ಎಂ.ಎಸ್. ಪುಟ್ಟಣ್ಣನವರ ಮಾಡಿದ್ದುಣ್ಣೋ ಮಹಾರಾಯ ಪ್ರಥಮ ಕಾದಂಬರಿ ಎಂಬ ಪಾತ್ರಕ್ಕೆ ಭಾಜನವಾಗಿದೆ. ಎಚ್.ಎಸ್. ಸುಜಾತರವರು 'ಪುಟ್ಟಣ್ಣ ಹೇಳಿದ ಕಥೆಗಳು' ಎಂಬ ಶಿರೋನಾಮೆಯಲ್ಲಿ ಕಥಾ ಸಂಗ್ರಹವನ್ನು ಪ್ರಕಟಿಸಿ ಅವರ ಕಥೆಗಳ ಮಹತ್ವವನ್ನು ಮರುಸಾರುವ ಪ್ರಯತ್ನ ಮಾಡಿ ಮಹದುಪಕಾರವನ್ನೇ ಮಾಡಿದ್ದಾರೆ. ಸರಳ, ಅರ್ಥಪೂರ್ಣ, ವ್ಯಾಕರಣ ಶುದ್ಧ ಭಾಷಾ ರಚನೆಗೆ ಸಂಬಂಧಿಸಿದಂತೆ 'ಕನ್ನಡ ಲೇಖನ ಶಿಕ್ಷಣ' ಎಂಬ ಕೃತಿಯನ್ನು ಎಂ.ಎಸ್. ಪುಟ್ಟಣ್ಣ ರಚಿಸಿದ್ದಾರೆ. 

ಕನ್ನಡ ಮಕ್ಕಳ ಸಾಹಿತ್ಯ ರಚನೆಯ ಸಂದರ್ಭದಲ್ಲಿ ಎಸ್.ಜಿ. ನರಸಿಂಹಾಚಾರ್ಯರು ೧೮೬೨-೧೯೦೭ರ ಕಾಲಾವಧಿಯವರು. "ಪ್ರಸಿದ್ಧ ವಿದ್ವಾಂಸರು, ಭಾಷಾಂತರಕಾರರು, ಸಂಪಾದಕರು ಆಗಿದ್ದ ಇವರು ಶ್ರೀರಂಗಪಟ್ಟಣದಲ್ಲಿ ಜನಿಸಿದರು. ಉಪಾಧ್ಯಾಯ ವೃತ್ತಿಯನ್ನಾರಂಭಿಸಿ ಮುಂದೆ ಶಿಕ್ಷಣ ಇಲಾಖೆಯಲ್ಲಿ ಭಾಷಾಂತರಕಾರರಾಗಿದ್ದರು. ನರಸಿಂಹಾಚಾರ್ಯರು ತಮಿಳು ಹಾಗೂ ಇಂಗ್ಲೀಷ್‌ನಲ್ಲಿ ಪಾಂಡಿತ್ಯ ಗಳಿಸಿದ್ದರಾಗಿ ಅನೇಕ ಗ್ರಂಥಗಳನ್ನು ಕನ್ನಡಕ್ಕೆ ಸರಳ ಸುಂದರವಾಗಿ ಭಾಷಾಂತರಿಸಿದ್ದಾರೆ. ಕಾಳಿದಾಸನ ರಘುವಂಶದ ಕೆಲವು ಸರ್ಗಗಳ ಪದ್ಯಾನುವಾದವಾಗಿರುವ 'ಅಜನೃಪ ಚರಿತೆ' ಮತ್ತು 'ದಿಲೀಪ ಚರಿತೆ'ಗಳು ಇವರ ಉತ್ತಮ ಅನುವಾದಕ್ಕೆ ಸಾಕ್ಷಿ. ಪ್ರಾಥಮಿಕ, ಮಾಧ್ಯಮಿಕ ಶಾಲೆಗಳ ವಿದ್ಯಾರ್ಥಿಗಳಿಗೆ ಮನರಂಜಕ ಭೋದಪ್ರದವೂ ಆದ ಅನೇಕ ಪಠ್ಯಪುಸ್ತಕಗಳನ್ನು ರಚಿಸಿದರು. ಅವುಗಳಲ್ಲಿ ಇಂಗ್ಲೀಷಿನ ಅನೇಕ ಪದ್ಯಗಳನ್ನು ಸರಳ ರಗಳೆಯಲ್ಲಿ ತಂದಿದ್ದಾರೆ. ಅವುಗಳೆಂದರೆ 'ನಕ್ಷತ್ರ' (ಮಿರುಮಿರುಗುವ ಹಾ ಕಿರುತಾರೆಗೆಯೆ) 'ಗೋವಿನ ಬಾಳು' (ಇಟ್ಟರೆ ಸಗಣಿಯಾದೆ), 'ಕಾವೇರಿಯ ಮಹಿಮೆ' (ನೋಡು ಕಾವೇರಿಯ) ಮುಂತಾದವು ಪ್ರಸಿದ್ಧವಾಗಿವೆ. ಇವರ ಇತರ ಕೃತಿಗಳೆಂದರೆ 'ಹಿಂದೂ ದೇಶದ ಚರಿತ್ರೆ', 'ಅಲ್ಲಾವುದ್ದೀನ ದೀಪ', 'ಈ ಸೋಪನ ಕಥೆಗಳು', 'ಗಲಿವರನ ದೇಶ ಸಂಚಾರ', 'ಭಾರತವೀರ ಚರಿತ್ರೆ' ಮುಖ್ಯವಾದವು. ಧಾರವಾಡದಲ್ಲಿ ೧೯೦೭ರಲ್ಲಿ ನಡೆದ ಅಖಿಲ ಕರ್ನಾಟಕ ಗ್ರಂಥಕರ್ತರ ಪ್ರಥಮ ಸಮ್ಮೇಳನಕ್ಕೆ ಇವರು ಅಧ್ಯಕ್ಷರಾಗಿದ್ದರು."[೨೫] ಎಸ್.ಜಿ. ನರಸಿಂಹಾಚಾರ್ಯರ ಚಂದ್ರ ಮತ್ತು ಗೋವಿನ ಚರಿತ್ರೆ, ಮಕ್ಕಳ ಪದ್ಯಗಳು ನಿರಂತರ ಓದಿಸಿಕೊಳ್ಳುವ, ಮೆಲುಕು ಹಾಕುವ ಧಾಟಿಯನ್ನು ಪಡೆದಿವೆ;

"ಮೂಡಲೊಳಗೆ ಚಂದ್ರನೀಗ
ಮೂಡಿತಿಹನು ದೂರದೂರ
ಕೋಡುತಿಹುದು ಕಳ್ಳನಂತೆ
ಕೂಡೆ ಕತ್ತಲೆ

ನೋಡು ಮನೆಯ ಮೇಲೆ ಬೆಳಕು
ಕೂಡಿ ಬೆಳ್ಳಿಯಿಂದ ತಗಡು

ಮಾಡಿ ಹೊದಿಸಿದಂತೆ ಕಣ್ಗೆ
ಹೊಳೆಯುತಿರುವುದು

ಮೇಲೆ ಬೆಳ್ಳಿ ಬಟ್ಟಲನ್ನು
ಹೋಲುತಿಹನು ಸಸಿಯು ನೆಲವು
ಹಾಲ ಮಳೆಯ ಕರೆದ ತೆರದಿ
ಬೆಳಗುತಿರುವುದು

ಬಾಲರೆಲ್ಲ ಕೂಡಿ ಮುದದಿ
ಬಾಲಕೋಳಿಯಾಡುತಿಹರು
ಮೇಲೆ ಮೇಲೆ ಹರುಷವುಕ್ಕು
ತಿಹುದು ಜನರಿಗೆ"[೩೦]

ಪೂರ್ವದಿಕ್ಕಿನಲ್ಲಿ ಮೂಡಿಬರುವ ಚಂದ್ರನಿಂದಾಗಿ ಕಳ್ಳನಂತೆ ಕತ್ತಲೆ ದೂರಕ್ಕೆ ಓಡುತ್ತಿದೆ. ಮನೆಯ ಮೇಲೆ ಚಂದ್ರನ ಬೆಳಕು ಬಿದ್ದಿರುವುದರಿಂದ ಬೆಳ್ಳಿಯ ತಗಡುಗಳಿಂದಲೇ ಚಾವಣಿ ಹೊದಿಸಿದಂತೆ ಗೋಚರಿಸುತ್ತಿದೆ. ಬೆಳ್ಳಿಯ ಬಟ್ಟಲಿನ ಹಾಗೆ ಕಾಣುತ್ತಿರುವ ಚಂದ್ರ ಭೂಮಿಯ ಮೇಲೆ ಹಾಲಿನ ಮಳೆಯನ್ನು ಕರೆದ ಹಾಗೆ ಬೆಳಗುತ್ತಿದ್ದಾನೆ. ಚಿಕ್ಕ ಮಕ್ಕಳೆಲ್ಲರೂ ಕೂಡಿಕೊಂಡು ಬಾಲ ಕೋಳಿ ಆಟವನ್ನು ಆಡುವ ಮೂಲಕ ಹಿರಿಯರಿಗೂ ಸಂತೋಷವನ್ನು ನೀಡುತ್ತಿದ್ದಾರೆ ಎನ್ನುವ ಅರ್ಥದ 'ಚಂದ್ರ' ಪದ್ಯ ಮಗುವಿನ ಮನಸ್ಸಿಗೆ ಆನಂದವನ್ನು ಕೊಡುವ ಪ್ರಾಕೃತಿಕ ವಿಸ್ಮಯದ ನೋಟವನ್ನು ಕಟ್ಟಿಕೊಡುತ್ತಾರೆ. ಮಕ್ಕಳ ಆಟ ದೊಡ್ಡವರಿಗೂ ಆನಂದ ಕೊಡುವ ಸಂಗತಿಯನ್ನು ಈ ಕಾವ್ಯದಲ್ಲಿ ಕಟ್ಟಿ ಕೊಡುತ್ತಾರೆ. ಚಂದ್ರ ಮಕ್ಕಳ ಕುತೂಹಲದ ಕೇಂದ್ರ. ಕನ್ನಡದಲ್ಲಿ ಮಕ್ಕಳ ಸಾಹಿತ್ಯ ರಚಿಸಿದ ಹಲವಾರು ಕವಿಗಳು ಚಂದ್ರನ ಮೇಲೆ ಕಾವ್ಯ ಕಟ್ಟಿದ್ದಾರೆ. ಎಲ್ಲಾ ಇಸಂಗಳನ್ನು ಮೀರಿ ಕೇವಲ ಖುಷಿಯನ್ನು ಕೊಡುವ ಬೆಳ್ಳ ಬೆಳದಿಂಗಳಲ್ಲಿ ಆಡಿ ನಲಿಯುವ ಮಕ್ಕಳ ಚಿತ್ರಣವನ್ನು 'ಚಂದ್ರ' ಪದ್ಯ ಕಟ್ಟಿಕೊಡುತ್ತದೆ. ಚೆಂದದ ಮಕ್ಕಳ ಆಟವನ್ನು "ಮಕ್ಕಳಾಟವು ಚಂದ, ಮತ್ತೆ ಯೌವ್ವನ ಚೆಂದ, ಮುಪ್ಪಿನಲಿ ಚಂದ ನೆರೆಗಡ್ಡ" ಎಂದು ಜನಪದರು ವರ್ಣಿಸುತ್ತಾರೆ. "ಬಡತನ ಬಂದರೆ ಬೈಬ್ಯಾಡ ಬಾಲರನ, ಆಡ್ಯಾಡಿ ಬಂದು ತೊಡಿಮ್ಯಾಲ ಆಡಿದರೆ ಬಡತನವೆಲ್ಲ ಬಯಲಾಗೆ" ಎಂದು ಜನಪದ ಸ್ತ್ರೀ ಹೇಳುತ್ತಾಳೆ. ಬಡತನವನ್ನು ಬಯಲುಗೊಳಿಸುವ ಶಕ್ತಿ ಮಕ್ಕಳ ಆಟಕ್ಕಿದೆ ಎನ್ನುವುದು ಆಕೆಯ ನಂಬಿಕೆ.

"ಕಟ್ಟಿದ ಕಣ್ಣಿಯನು ಬಿಚ್ಚಿಕೊಳ್ಳಲು ಅರಿಯೆ
ಹೊಟ್ಟೆಗೆ ಬೇಕೆಂದು ಕೇಳಲರಿಯೆ
ಪುಟ್ಟ ಕರು ಇಲ್ಲದಿರೆ ಕರೆದು ತಾರೆನಲರಿಯೆ
ನೀನಾರಿಗಾದೆಯೋ ಎಲೆ ಮಾನವಾ
ಹರಿ ಹರಿ, ಗೋವು ನಾನು

ಇಟ್ಟರೆ ಸಗಣಿಯಾದೆ ತಟ್ಟಿದರೆ ಕುರುಳಾದೆ
ಸುಟ್ಟರೆ ನೊಸಲ ವಿಭೂತಿಯಾದೆ
ತಟ್ಟದೇ ಹಾಕಿದರೆ ಒಳ್ಳೆ ಗೊಬ್ಬರವಾದೆ
ನೀನಾರಿಗಾದೆಯೋ

ಹಾಲಾದೆ ಕರೆದರೆ, ಮೊಸರಾದೆ ಹೆತ್ತರೆ
ಮೇಲ್ಗನೆಯ ಕಡೆದರೆ ಬೆಣ್ಣೆಯಾದೆ
ಮೇಲಾದ ತುಪ್ಪವು ನಾನಾದೆ ಕಾಸಿದರೆ
ನೀನಾರಿಗಾದೆಯೋ

ಹಾದಿ ಬೀದಿಯಲಿರುವ ಕಸದ ಹುಲ್ಲನು ಮೇದು
ಬಂದು ಮನೆಗೆ ನಾನು ಅಮೃತವೀವೆ
ಅದನುಂಡು ನನಗೆರಡು ಬಗೆವ ಮಾನವ ನೀನು
ನೀನಾರಿಗಾದೆಯೋ

ಹಾಯೆ ಹರಿಗೋಲಾದೆ, ರಾಯಭೇರಿಗೆ ಆದೆ
ರಾಯರಾ ಕಾಲಿಗೆ ಮುಳ್ಳೊತ್ತು ಆದೆ
ಆಯವರಿತು ಹೊಡೆಯೆ ಒಳ್ಳೆಗಾನಕೆ ಆದೆ
ನೀನಾರಿಗಾದೆಯೋ

ದೇಹ ಶುದ್ಧಿಗೆ ನಾನು ಪಂಚಗವ್ಯವನೀವೆ
ವಾಹನಕೆ ಆಗುವನು ಎನ್ನ ಮಗನು
ಊಹೆಗಸದಳವಹುದು ನನ್ನ ಉಪಕಾರಗಳು
ನೀನಾರಿಗಾದೆಯೋ

ಉಳುವೆ ನಾ ಭೂಮಿಯನು ಹೊರುವೆ ನಾ ಹೇರನ್ನು
ತುಳಿದು ಕಡ್ಡಿಯ ಕಾಳ ವಿಂಗಡಿಸುವೆ
ಕಳಪೆಯಾಗಿಹ ನೆಲದ ನಗುವ ತೋಪನು ಮಾಳ್ಪೆ
ನೀನಾರಿಗಾದೆಯೋ

ಕರು ಸತ್ತ ಬೇಗೆಯಲಿ ನಾ ಬೆಯ್ಯುತಿದ್ದರೆ
ಮರುಕವಿಲ್ಲದ ಸತ್ತ ಕರುವ ತಂದು
ತಿರುತಿರುಗಿ ಮುಂದಿಟ್ಟು ಹಾಲ ಕರೆವೆ ನೀನು
ನೀನಾರಿಗಾದೆಯೋ"[೩೧]

ಮಕ್ಕಳಿಗಾಗಿ ಸರಳ ತಾತ್ವಿಕ ಜಗತ್ತನ್ನೇ 'ಗೋವಿನ ಚರಿತ್ರೆ' ಕಾವ್ಯ ಕಟ್ಟಿಕೊಡುತ್ತವೆ. ದೀರ್ಘ ವಿನ್ಯಾಸವಿರುವ ಈ ಹಾಡು ಮನುಷ್ಯ ಬದುಕನ್ನೇ ಅಪಹಾಸ್ಯಕ್ಕೆ ಈಡು ಮಾಡುತ್ತದೆ.

ಸ್ವಾರ್ಥ, ವಂಚನೆ, ಮೋಸ, ಸ್ವಜನ ಪಕ್ಷಪಾತಗಳಿಂದ ಕೂಡಿರುವ ಮಾನವ ಜೀವಿ ಉಪಕಾರ ಅರಿಯದವನು, ಉಪಕಾರ ಮಾಡದವನು. 'ಊರು ಉಪಕಾರವರಿಯದು ಹೆಣ ಸಿಂಗಾರವರಿಯದು' ಎನ್ನುವ ಗಾದೆಯ ಮಾತಿನಂತೆ ಬದುಕುತ್ತಿರುವವನು. ಸಾಮಾನ್ಯ ಒಂದು ಹಸುವಿನ ಮೂಲಕ ಪರೋಪಕಾರದ ಗುಣವನ್ನು ಬೋಧಿಸುವ ಎಸ್.ಜಿ. ನರಸಿಂಹಾಚಾರ್‌ರವರು ಮನುಷ್ಯನೂ ಹಸುವಿನಂತೆ ಉಪಕಾರದ ಗುಣಗಳನ್ನು ಬೆಳೆಸಿಕೊಳ್ಳಬೇಕೆಂಬ 'ಎಥಿಕ್' ಅನ್ನು ಕಟ್ಟಿಕೊಟ್ಟಿದ್ದಾರೆ. ಮಗುವಿಗೆ ಎಳೆಯ ವಯಸ್ಸಿನಲ್ಲೇ ಉಪಕಾರದ ಬದ್ಧತೆಯ ಬೋಧನೆಯ ಅತ್ಯಗತ್ಯ ಎನ್ನುವುದನ್ನು ಸ್ವತಃ ಶಿಕ್ಷಕರಾಗಿದ್ದ ಕವಿಯು ಚೆನ್ನಾಗಿ ಅರ್ಥೈಸಿಕೊಂಡಿದ್ದಂತೆ ತೋರುತ್ತದೆ. ತನ್ನ ಸಮೇತ ಮಗುವೂ ಕೂಡ ಹೇಗೆ ಮಾನವರಿಗೆ ಸಹಾಯಕರೆನ್ನುವುದನ್ನು ಹೇಳುತ್ತಾ ಮಗು ಸತ್ತಾಗಲೂ ಕನಿಕರವಿಲ್ಲದ ಮನುಷ್ಯ ಸತ್ತ ಕರುವನ್ನೇ ತೋರಿಸಿ ಹಾಲು ಕರೆದುಕೊಳ್ಳುವ ಸ್ವಭಾವದವನು. ಪ್ರತಿ ಚೌಪದಿಯ ಕೊನೆಯ ಸಾಲು ನೀನಾರಿಗಾದೆಯೋ ಎಂದು ಪುನರಾವೃತ್ತಿಗೊಳ್ಳುತ್ತ ಚುಚ್ಚುತ್ತ ಜೀವನವನ್ನು ಆತ್ಮಾವಲೋಕನ ಕ್ರಮಕ್ಕೂ ತಳ್ಳುತ್ತದೆ. ನೀನಾರಿಗಾದೆ ಎನ್ನುವ ಚಿಂತನೆಯ ಕ್ರಮವೇ ನಾನು ಎಲ್ಲರಿಗೂ ಆಗುತ್ತೇನೆನ್ನುವ ಉತ್ತರದಾಯಿತ್ವದ ಕ್ರಮವಾಗಿ ನಿಲ್ಲಬೇಕೆನ್ನುವ ಭಾವ ಕಾವ್ಯದಲ್ಲಡಗಿದೆ.

ಇದೇ ಹೊತ್ತಿನಲ್ಲಿ "ಐರೋಡಿ ಶಿವರಾಮಯ್ಯನವರು 'ಕನ್ನಡ ಭಾಷಾ ಪಾಠ ಪುಸ್ತಕ' ಎಂಬ ಪಠ್ಯಪುಸ್ತಕವನ್ನು ಒಂದರಿಂದ ಎಂಟನೆಯ ತರಗತಿಯವರೆಗೆ ವಿದ್ಯಾರ್ಥಿಗಳಿಗಾಗಿ ರಚಿಸಿಕೊಟ್ಟಿದ್ದಲ್ಲದೇ ೧ ರಿಂದ ೫ನೇ ತರಗತಿಗಾಗಿ ಚರಿತ್ರೆಯ ಪಾಠಗಳನ್ನೂ ತಯಾರಿಸಿದರು. 'ಸದಾನಂದ ಪಾಠಶಾಲೆ' ಮಕ್ಕಳ ಬೌದ್ಧಿಕ ಬೆಳವಣಿಗೆಯನ್ನು ಹೆಚ್ಚಿಸುವ ಕೃತಿ. ಇವರು ಬರೆದ ಮಕ್ಕಳ ಕಥೆಗಳು ಆ ಕಾಲದಲ್ಲಿ ಬರುತ್ತಿದ್ದ ಸುವಾಸಿನಿ, ಸ್ವಧರ್ಮ, ಸುಬೋಧ, ಕರ್ನಾಟಕ ಕೇಸರಿ, ಉದಯ ಭಾರತ ಪತ್ರಿಕೆಗಳಲ್ಲಿ ಅವರಿರುವತನಕ ಪ್ರಕಟವಾಗಿ, ಮಕ್ಕಳಿಗಾಗಿ ಸೃಜನಶೀಲ ಸಾಹಿತ್ಯಕ್ಕೆ ನಾಂದಿ ಹಾಡಿದವು. ಈ ಕಥೆಗಳ ಶೀರ್ಷಿಕೆಯೇ ಆಕರ್ಷಕವಾಗಿದ್ದು ಮಕ್ಕಳಲ್ಲಿ ಕುತೂಹಲವನ್ನು ಹುಟ್ಟಿಸಿ ಓದಿಸಿಕೊಂಡು ಹೋಗುತ್ತಿದ್ದವು. 'ಚಿಲಿ ಮಿಲಿ ಇಲಿ', 'ಚಿಣಿ ಮಿಣಿ ಚಿಟ್ಟೆ', 'ಕೊಂಬಿನ ವೀರ', 'ಐರಾವತದ ಕಥೆ', 'ಕುರಿಮರಿ ಅದರ ಸ್ನೇಹಿತರು', 'ನಳೋಪಾಖ್ಯಾನ', 'ಭಗೀರಥ ಪ್ರಯತ್ನ', 'ಶಾರದೆ ಮತ್ತು ಲಕ್ಷ್ಮಿ', 'ಭಕ್ತಿಯ ಮಹಿಮೆ' ಮುಂತಾದವುಗಳಲ್ಲಿ ಒಳ್ಳೆಯ ನೀತಿಯನ್ನು ಹೇಳಿದ್ದಾರೆ. ಇವರು ಬರೆದ 'ಆರ್ಯನೀತಿ ಕಥೆಗಳು' (ಎರಡು ಭಾಗ) ಕೃತಿಗಳಲ್ಲಿ ಮಹಾಭಾರತ, ರಾಮಾಯಣದ ಕತೆಗಳ ಜೊತೆಗೆ ಹರ್ಷಚರಿತೆ, ನಾನಕನ ಜೀವನ, ಚರಿತ್ರೆಯನ್ನು ಮಕ್ಕಳಿಗೆ ಹಿಡಿಸುವಂತೆ ಬರೆದಿದ್ದಾರೆ."[೨]

ಸ್ವಾತಂತ್ರ್ಯ ಹೋರಾಟಗಾರರಾಗಿ ಹೆಸರು ಮಾಡಿದ್ದ ಕರ್ನಾಟಕ ಗಾಂಧಿ ಹರ್ಡೇಕರ್ ಮಂಜಪ್ಪನವರು ಮಕ್ಕಳಿಗಾಗಿ ಸಾಹಿತ್ಯ ಮಾಲೆಯನ್ನು ಆರಂಭಿಸಿ ಸುಮಾರು ೫೦ ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ತುಂಬಾ ಪ್ರಮುಖವಾದ ಕೃತಿಗಳೆಂದರೆ ಬಸವ ಚರಿತ್ರೆ, ಕಾಯಕವೇ

ಕೈಲಾಸ, ಅಣ್ಣನ ಪ್ರೀತಿ, ಭಾಗ್ಯದ ಬೀಗದ ಕೈ, ಗೋ ಸೇವೆ, ಏಕಲವ್ಯನ ಕಥೆ, ಅಕ್ಕನ ಉಪದೇಶ, ದೇವಯಾನಿಯ ಕಥೆ ಮುಂತಾದವುಗಳು. ತಮ್ಮ ಹಲವು ಕೃತಿಗಳಲ್ಲಿ ದೇಶ ಪ್ರೇಮ, ಸ್ವಾತಂತ್ರ್ಯದ ಮಹತ್ವ, ಸಮಾಜ ಪ್ರೇಮ, ಜಾತ್ಯಾತೀತ ಮನೋಭಾವನೆಯ ಮೌಲ್ಯಗಳನ್ನು ಹರ್ಡೇಕರರು ಮಕ್ಕಳಲ್ಲಿ ಬಿತ್ತುವ ಕೈಂಕರ್ಯ ತೊಟ್ಟರು". ಅವರ ಈ ಸಾಹಿತ್ಯಿಕ ಸೇವೆ ಬೆಲೆ ಕಟ್ಟಲಾರದ್ದು.

ಕನ್ನಡ ನವೋದಯ ಕಾಲದಲ್ಲಿ ಮಕ್ಕಳಿಗಾಗಿ ವಿಪುಲ ಸಾಹಿತ್ಯ ಸೃಷ್ಟಿಯಾಯಿತು. ೨೦ನೇ ಈ ಶತಮಾನ ಮಕ್ಕಳಿಗಾಗಿ ಎಂದು ಸಂಬೋಧಿಸಿ ಸಾಹಿತ್ಯ ಕೃಷಿಗೆ ತೊಡಗಿತು. ನವೋದಯ ಪಂಥದಲ್ಲಿ ಮೊದಲು ಮಕ್ಕಳಿಗಾಗಿ ಸಾಹಿತ್ಯ ಸೃಷ್ಟಿ ಮಾಡಿದವರು ಪಂಜೆ ಮಂಗೇಶರಾಯರು. ಇವರು ಉಪಾಧ್ಯಾಯ ವೃತ್ತಿಯಲ್ಲಿದ್ದುದರಿಂದ ನಿರಂತರ ಮಕ್ಕಳ ಒಡನಾಟದಲ್ಲಿದ್ದವರು. ಮಕ್ಕಳ ಮಾನಸಿಕ ತುಮುಲಗಳನ್ನು ಸರಿಯಾದ ನೆಲೆಯಲ್ಲಿ ಗ್ರಹಿಸಿದ ಪಂಜೆಯವರು ಬೆರಗು ಹುಟ್ಟಿಸುವ ಮಕ್ಕಳ ಕವನ, ಕಥೆಗಳನ್ನು ಬರೆದರು. ಮಂಗಳೂರಿನಲ್ಲಿ 'ಬಾಲ ಸಾಹಿತ್ಯ ಮಂಡಲ'ವನ್ನು ಪಂಜೆಯವರು ಸ್ಥಾಪಿಸಿದವರು. ಕೇವಲ ಕಾವ್ಯ ರಚನೆಯಷ್ಟಕ್ಕೆ ಸೀಮಿತಗೊಳ್ಳದೆ ಪ್ರಯೋಗಶೀಲ ತತ್ವಕ್ಕೆ ಮಕ್ಕಳ ಕಾವ್ಯವನ್ನು ಒಗ್ಗಿಸಿದ ಕೀರ್ತಿಗೆ ಭಾಜನರಾದರು. ಕವಿಶಿಷ್ಯ ನಾಮದಿಂದ ಬರೆಯುತ್ತಿದ್ದ ಪಂಜೆಯವರು ತೆಂಕಣ ಗಾಳಿಯಾಟ, ನಾಗರಹಾವೇ, ಚಂದ್ರನನ್ನು ತಾ, ಉದಯರಾಗ, ಕಡೆಕಂಜಿ ಮುಂತಾದ ಶ್ರೇಷ್ಠ ಕಾವ್ಯಗಳನ್ನು ಕಟ್ಟಿಕೊಟ್ಟಿದ್ದಾರೆ. ಪಂಜೆಯವರನ್ನು 'ಮಕ್ಕಳ ಸಾಹಿತ್ಯದ ಪಿತಾಮಹ' ಎಂದು ಕರೆಯಲಾಗುತ್ತದೆ. ಇವರ ಕಾಲದಲ್ಲಿ ಮಂಗಳೂರಿನಲ್ಲಿ ಆರಂಭವಾದ 'ಸುಹಾಸಿನಿ' ಪತ್ರಿಕೆ 'ನನ್ನ ಚಿಕ್ಕ ತಂದೆ', 'ನನ್ನ ಚಿಕ್ಕ ತಂದೆಯ ಉಯಿಲು', 'ಕಮಲಾಪುರದ ಹೋಟ್ಲಿನಲ್ಲಿ', 'ಮೃಥುಲಾ', 'ದುರ್ಗಾವತಿ' ಮುಂತಾದ ಸಾಮಾಜಿಕ ಮತ್ತು ಐತಿಹಾಸಿಕ ಕಥೆಗಳನ್ನು ಪ್ರಕಟಿಸಿತು. ಪಂಜೆಯವರ ವಿಶಿಷ್ಟ ಗುಣ ಬ್ರಿಟೀಷ್ ವಸಾಹತುಶಾಹಿ ವ್ಯವಸ್ಥೆಯ ಶೋಷಣೆಗೆ ಕಾವ್ಯದ ಮೂಲಕ ಉತ್ತರಕೊಟ್ಟದ್ದು. ನಾಗರಹಾವೆ, ಹಾವೊಳು ಹೂವೆ' ಮತ್ತು 'ತೆಂಕಣ ಗಾಳಿಯಾಟ' ಕವಿತೆಗಳು ಈ ಮಾತುಗಳಿಗೆ ಸ್ಪಷ್ಟ ನಿದರ್ಶನವಾಗಿವೆ. ಅಜ್ಜಿ ಸಾಕಿದ ಮಗು, ಇಲಿಗಳ ಥಕ ಥೈ, ಕೊಕೋಕೋ ಕೋಳಿ, ಗುಡುಗುಡು ಗುಮ್ಮಟ ದೇವ, ಬೊಕ್ಕಬಾಯಿ ಕೊಕ್ಕೇ ರಾಜ, ಮಾತಾಡೊ ರಾಮಪ್ಪ, ಮೂರು ಕರಡಿಗಳು ಪಂಜೆಯವರು ಮಕ್ಕಳಿಗಾಗಿ ರಚಿಸಿದ ವಿಶಿಷ್ಟ ಕೃತಿಗಳು. ಪಂಜೆಯವರ 'ಹಾವಿನಹಾಡು', 'ಉದಯರಾಗ', 'ತೆಂಕಣ ಗಾಳಿಯಾಟ' ಕಾವ್ಯಗಳನ್ನು ಮರುಪ್ರಸ್ತಾಪಿಸಿ ನಿರೂಪಿಸುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ.

**ಹಾವಿನಹಾಡು**

ನಾಗರ ಹಾವೆ! ಹಾವೊಳು ಹೂವೆ ।
ಬಾಗಿಲ ಬಿಲದಲಿ ನಿನ್ನಯ ಠಾವೆ?
ಕೈಗಳ ಮುಗಿವೆ, ಹಾಲನ್ನೀವೆ
ಬಾ ಬಾ ಬಾ ಬಾ ಬಾ ಬಾ ಬಾ ಬಾ

ಹಳದಿಯ ಹೆಡೆಯನು ಬಿಚ್ಚೋ ಬೇಗಾ ।
ಹೊಳಹಿನ ಹೊಂದಲೆ ತೂಗೋ ನಾಗಾ ।
ಕೊಳಲನ್ನೂದುವೆ ಲಾಲಿಸು ರಾಗಾ ।
ನೀ ನೀ ನೀ ನೀ ನೀ ನೀ ನೀ ನೀ

ಎಲೆ ನಾಗಣ್ಣ ಹೇಳೆಲೋ ನಿನ್ನಾ ।
ತಲೆಯಲಿ ರನ್ನವಿಹ ನಿಜವನ್ನಾ ।
ಬಲು ಬಡವಗೆ ಕೊಪ್ಪರಿಗೆ ಚಿನ್ನಾ ।
ತಾ ತಾ ತಾ ತಾ ತಾ ತಾ ತಾ ತಾ

ಬರಿ ಮೈ ತಣ್ಣಗೆ, ಮನದಲಿ ಬಿಸಿಹಗೆ
ಎರಡೆಳೆ ನಾಲಿಗೆ ಇದ್ದರು ಸುಮ್ಮಗೆ
ಎರಗುವೆ ನಿನಗೆ ಈಗಲೆ ಹೊರಗೆ
ಪೋ ಪೋ ಪೋ ಪೋ ಪೋ ಪೋ ಪೋ ಪೋ ॥[೩೩]

ಹಾವಿನಹಾಡು ಪಂಜೆಯವರ ವಿಶಿಷ್ಟ ರಚನೆ. ಇಲ್ಲಿ ಕವಿ ತನ್ನನ್ನು ತಾನು ಗಾರುಡಿಗನೆಂಬಂತೆ ಭಾವಿಸಿದ್ದಾನೆ. ಹಾವು ಮಕ್ಕಳಲ್ಲಿ ಭಯ ಸೃಷ್ಟಿ ಮಾಡುವ ಜಂತುವಾಗಿದ್ದರೂ ಕುತೂಹಲದ ಕೇಂದ್ರವೂ ಹೌದು. ಪ್ರತಿ ಪದ್ಯದ ಕೊನೆಯ ಸಾಲುಗಳು ನಾದಮಯಗೊಂಡು ಮಕ್ಕಳೊಳಗೆ ತನ್ಮಯತೆಯನ್ನು ಪ್ರಾಪ್ತಿಗೊಳಿಸುತ್ತವೆ. ಪ್ರಾಸಬದ್ಧವಾಗಿ ರಚನೆಗೊಂಡಿರುವ ಈ ಕಾವ್ಯ ಸುಲಭವಾಗಿ ಓದಿಸಿಕೊಂಡು ಹೋಗುತ್ತದೆ. ಹೂವು-ತಾವು, ಬೇಗ-ನಾಗ ಈ ಬಗೆಯ ಅಂತ್ಯ ಪ್ರಾಸಗಳು ಮಕ್ಕಳ ಗ್ರಹಿಕೆಗೆ ಸುಲಭವಾಗಿ ನಿಲುಕುತ್ತವೆ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಬ್ರಿಟಿಷ್ ವಸಾಹತುಶಾಹಿ ವ್ಯವಸ್ಥೆ ವಿರುದ್ಧ ನಡೆದ ಹೋರಾಟ ಹಲವು ಮಜಲುಗಳನ್ನು ಪಡೆದುಕೊಂಡಿತ್ತು. ಆಂಗ್ಲ ಸಾಮ್ರಾಜ್ಯದ ವಿರುದ್ಧ ಬರೆದ ಸಾಹಿತಿಗಳಿಗೆ ಉಗ್ರಶಿಕ್ಷೆಯನ್ನು ನೀಡಲಾಗುತ್ತಿತ್ತು. ಪಂಜೆಯಂತ ಶ್ರೇಷ್ಠ ಕವಿ ಮೇಲ್ನೋಟಕ್ಕೆ ವಸಾಹತುಶಾಹಿ ವಿರೋಧಿ ನೀತಿಯದೆಂದು ಗೊತ್ತಾಗದ ಶೈಲಿಯಲ್ಲಿ ಕಾವ್ಯರಚನೆಗೆ ತೊಡಗಿದರೂ ಕಾವ್ಯದ ಸ್ಥಾಯಿಭಾವ ಮಾತ್ರ ಅದೇ ಆಗಿತ್ತು. "ಎಲೆ ನಾಗಣ್ಣ ಹೇಳೆಲೊ ನಿನ್ನಾ। ತಲೆಯಲಿ ರನ್ನವಿಹ ನಿಜವನ್ನಾ, ಬಲು ಬಡವಗೆ ಕೊಪ್ಪರಿಗೆಯ ಚಿನ್ನ ತಾ" ಎನ್ನುವಲ್ಲಿ ಹಾವನ್ನು ಸಾಂಕೇತಿಕವಾಗಿಟ್ಟುಕೊಂಡು ಹಾವಿನಷ್ಟೇ ಅಪಾಯಕಾರಿಯಾದ ವಿಷ ಕಕ್ಕುವ ಬ್ರಿಟಿಷ್ ಸಾಮ್ರಾಜ್ಯದ ನಿರಂತರ ಶೋಷಣೆಯಿಂದ ಗಳಿಸಿರುವ ಭಾರತೀಯರ ಅಪಾರ ಸಂಪತ್ತನ್ನು ಬಡವರಿಗೆ ಹಂಚಬೇಕೆಂಬ ಧೋರಣೆಯಿದೆ. ಇಡೀ ಕಾವ್ಯ ನಾದಮಯಗೊಂಡು ಹಿರಿಯರು ಮತ್ತು ಕಿರಿಯರಿಗೆ ರಸಭಾವದ ಔತಣವನ್ನು ನೀಡುತ್ತದೆ. ಇಲ್ಲಿ ಪ್ರಸ್ತಾಪಗೊಳ್ಳುವ ಹಳದಿಯ ಎಡೆ ಬ್ರಿಟಿಷರ ಕಾಮಾಲೆ ಕಣ್ಣಿನ ಪ್ರತೀಕ ಎನಿಸುತ್ತದೆ. ಪಂಜೆಯವರು ಕಟ್ಟಿಕೊಟ್ಟ ಈ ಬಗೆಯ ಹಲವು ಕಾವ್ಯಗಳಲ್ಲಿ ಅಂದಿನ ವ್ಯವಸ್ಥೆಯನ್ನು ವಿರೋಧಿಸುವ ಧೋರಣೆಯನ್ನು ಗುರುತಿಸಬಹುದು.

## ತೆಂಕಣ ಗಾಳಿಯಾಟ

ಬರಲಿದೆ! ಅಹಹಾ! ದೂರದಿ ಬರಲಿದೆ

ಬುಸುಗುಟ್ಟುವ ಪಾತಾಳದ ಹಾವೊ?
ಹಸಿವನ ಭೂತವು ಕೂಯುವ ಕೂವೊ?
ಹೊಸತಿದು, ಕಾಲನ ಕೋಣನ - ಓವೊ!
ಉಸಿರಿನ ಸುಯ್ಯೋ? - ಸೂಸೂಕರಿಸುತ,

ಬರುವುದು! ಬರಬರ ಭರದಲಿ ಬರುವುದು -

ಬೊಬ್ಬೆಯ ಹಬ್ಬಿಸಿ, ಒಂದೇ ಬಾರಿಗೆ
ಉಬ್ಬರ ಎಬ್ಬಿಸಿ ಕಡಲಿನ ನೀರಿಗೆ,
ಬೊಬ್ಬುಳಿ ತೆರೆಯನು ದಡಕ್ಕೆ ಹೊಮ್ಮಿಸಿ,
ಅಬ್ಬರದಲಿ ಭೋರ್ ಭೋರೆನೆ ಗುಮ್ಮಿಸಿ,

ಬರುತ್ತದೆ! ಮೈತೋರದೆ ಬರುತ್ತದೆ! ಅದೇ -

ನಡುಮುರಿಯುತ ನಗನಾವೆಗೆ, ಕೂವೆಗೆ
ಉಡಿಸಿದ ಹಾಯಿಯ ಹರಿಯುತ ಬಿರಿಯುತ,
ಹಡಗನು ಕೀಲಿಸಿ, ತುಮುರನು ತೇಲಿಸಿ,
ದಡದಲಿ ಝಾಡಿಸಿ, ದೋಣಿಯನಾಡಿಸಿ,

ಇದೆ! ಇದೆ! ಬರುತಿದೆ! ಇದೆ! ಇದೆ! ಬರುತಿದೆ -
ಹಕ್ಕಿಯ ಕಣ್ಣಿಗೆ ಧೂಳಿನ ಕಾಡಿಗೆ
ಇಕ್ಕುತ, ಹೊಲದೆತ್ತಿಗೆ ದನಕಾಡಿಗೆ
ಫಕ್ಕನೆ ಹಟ್ಟಿಗೆ ಅಟ್ಟಿಸಿ, ಕಾಡಿಗೆ
ಸಿಕ್ಕಿದ ಕಿಚ್ಚನು ಊದಲು ಹಾರುತ,

ಬರುತಿದೆ! ಇದೆ! ಇದೆ! ಇದೆ! ಇದೆ! ಬರುತಿದೆ -

ಸಡಲಿಸಿ ಮಡದಿಯರುಡಿಯನು ಮುಡಿಯನು,
ಬಡಮುದುಕರ ಕೊಡೆಗರಿ ಹರಿದಾಡಿಸಿ,
ಹುಡುಗರ ತಲೆ ತಲೆ ಟೊಪ್ಪಿಯ ಆಟವ
ದಡಬಡನಾಡಿಸಿ, ಮನೆ ಮನೆ ತೋಟವ
ಅಡಿ ಮೇಲಾಗಿಸಿ, ತೆಂಗನು ಲಾಗಿಸಿ,
ಅಡಕೆಯ ಬಾಗಿಸಿ, ಪನೆ ಇಬ್ಬಾಗಿಸಿ,
ಬುಡದೂಟಾಡಿಸಿ, ತಲೆ ತಾಟಾಡಿಸಿ,

ಗುಡಿಸಲ ಮಾಡನು ಹುಲುಹುಲುಮಾಡಿಸಿ,

ಬಂತೈ! ಬಂತೈ! ಇದೆ! ಇದೆ! ಬಂತೈ! -

ಗಿಡಗಿಡದಿಂ - ಚೆಲು ಗೊಂಚಲು ಮಿಂಚಲು
ಮಿಡಿಯನು ಹಣ್ಣನು, ಉದುರಿಸಿ ಕೆದರಿಸಿ
ಎಡದಲಿ ಬಲದಲಿ ಕೆಲದಲಿ ನೆಲದಲಿ,
ಪಡುವಣ ಮೋಡವ ಬೆಟ್ಟಕೆ ಗಟ್ಟಕೆ
ಹೊಡೆದಟ್ಟುತ, ಕೋಲ್ ಮಿಂಚನು ಮಿರುಗಿಸಿ,
ಗುಡುಗನು ಗುಡುಗಿಸಿ, ನೆಲವನು ನಡುಗಿಸಿ,
ಸಿಡಿಲನು ತಾಳೆಗೆ ಬಾಳೆಗೆ ಎರಗಿಸಿ
ಜಡಿಮಳೆ ಸುರಿವೋಲ್, ಬಿರುಮಳೆ ಬರುವೋಲ್,
ಕುಡಿನೀರನು ಒಣಗಿದ ನೆಲಕೆರೆವೋಲ್

ಬಂತೈ ಬೀಸುತ! ಬೀಸುತ ಬಂತೈ!
ತೆಂಕಣ ಗಾಳಿಯು ಕೊಂಕಣ ಸೀಮೆಗೆ
ಬಂತೈ! ಬಂತೈ! ಬಂತೈ! ಬಂತೈ![೩೪]

ಪಂಜೆಯವರು ಮಕ್ಕಳಿಗೆಂದೇ ರಚಿಸಿದ ಕಾವ್ಯಗಳಲ್ಲಿ ಸರ್ವಶ್ರೇಷ್ಟವಾದ ಕಾವ್ಯ ತೆಂಕಣ ಗಾಳಿಯಾಟ. ಇಡೀ ಈ ಕಾವ್ಯ ಬ್ರಿಟಿಷ್ ವಸಾಹತುಶಾಹಿ ವ್ಯವಸ್ಥೆಯನ್ನು ಸಮೀಕರಿಸಿದೆ. ಪಶ್ಚಿಮ ದೇಶಗಳ ಶೋಷಣೆ ಭಾರತೀಯರ ಮೇಲೆ ಆಗುತ್ತಿದ್ದ ಇಡೀ ಬೆಳವಣಿಗೆಗಳು ನೇರವಾಗಿ ಬ್ರಿಟಿಷರಿಗೆ ತಿಳಿಯಬಾರದೆನ್ನುವ ಇಡೀ ಬೆಳವಣಿಗೆಗಳು ನೇರವಾಗಿ ಬ್ರಿಟಿಷರಿಗೆ ತಿಳಿಯಬಾರದೆನ್ನುವ ಕಾರಣಕ್ಕಾಗಿ ಪಂಜೆಯವರು ಕಾವ್ಯಕ್ಕೆ ಪಶ್ಚಿಮ ಗಾಳಿಯಾಟ ಎಂದಿಡದೆ 'ಉತ್ತರ ಗಾಳಿಯಾಟ' ಎಂದು ಹೆಸರಿಡುತ್ತಾರೆ. ಇದಕ್ಕೆ ಬಹುಮುಖ್ಯ ಕಾರಣ ಈಗಾಗಲೇ ಪ್ರಸ್ತಾಪಿಸಿದಂತೆ ಬ್ರಿಟಿಷ್ ಆಡಳಿತದ ವಿರುದ್ಧ ಭಾರತೀಯರು ಸಾಹಿತ್ಯವನ್ನು ರಚಿಸುವುದು ನಿಷೇಧಕ್ಕೊಳಪಟ್ಟಿತ್ತು. ತೆಂಕಣ ಗಾಳಿಯಾಟ ಕಾವ್ಯ ಮಕ್ಕಳಿಗಾಗಿ ರಚಿಸಿದ್ದೆನ್ನುವ ಭಾವನೆಯನ್ನು ಮೂಡಿಸುವುದಿಲ್ಲ. ಹಿರಿಯರು ಕೂಡ ಓದಿ ಅರ್ಥೈಸಿಕೊಳ್ಳಲು ತಿಣುಕಾಡುವ ಕಠಿ ಬಂಧದ ಸಂರಚನೆಯನ್ನು ಹೊಂದಿದೆ. ತೆಂಕಣ ಗಾಳಿಯಾಟದಲ್ಲಿ ಲಘುಹಾಸ್ಯವೂ ಇದೆ. ಈ ಕವಿತೆಯನ್ನು ಕುರಿತು ಪ್ರೊ. ದೊಡ್ಡರಂಗೇಗೌಡರು ಹೇಳಿರುವ ಮಾತುಗಳು ಸಮಂಜಸವಾಗಿವೆ. "ಕವಿ ಚಂಡ ಮಾರುತದ ಅಪೂರ್ವ ಆವೇಶವನ್ನು ಸ್ಫುಟವಾಗಿ ಹಾಗೂ ಅನನ್ಯವಾಗಿ ತಮ್ಮ ನುಡಿಚಿತ್ರಗಳಲ್ಲಿ ಹಿಡಿದಿಟ್ಟಿದ್ದಾರೆ. ಮೂಲತಃ ಈ ಕವಿತೆ 'ಫ್ರೋಲಿಕ್ ಇನ್ ದಿ ವಿಂಡ' ಆಂಗ್ಲ ಕವಿತೆಯ ಪ್ರೇರಣೆ ಪಡೆದಿದೆಯಾದರೂ ಪ್ರಬಲ ಗಾಳಿಯ ಭೋರ್ಗರೆತ ಶಬ್ದ ಪ್ರವಾಹವೇ ಮೈದುಂಬಿ ಬಂದು ಓದುಗರಿಗೂ ಆ ಚಂಡ ಮಾರುತದ ವೇಗೋತ್ಕರ್ಷ ಮನವರಿಕೆಯಾಗುತ್ತದೆ. ಕವಿ ಇಲ್ಲಿ ಬಳಸಿರುವ ನುಡಿ ಸಂಯೋಜನೆ ಲಯ, ಭಾವಾವೇಗದ ತೀವ್ರ ಸ್ಪಂದನಾ ಎಲ್ಲವೂ

ಕವಿತೆಯ ತ್ವರಿತಗತಿಗೆ ಸ್ಪಂದಿಸಿವೆ. ಕಿರಿಯರ ಚಿತ್ತ ಅಪಹರಿಸಿದ ಈ ನಾಟ್ಯಾನುಭಾವದ ಕವಿತೆ ಎಳೆಯರ ಆಟ-ಪಾಠಗಳಲ್ಲೂ ಅವಿಭಾಜ್ಯವಾಗಿ ಬೆರೆತು ಹೋಗಿತ್ತು... ಕನ್ನಡಕಾವ್ಯ ಕವಿಯ ಭಾವಾಭಿವ್ಯಕ್ತಿಗೆ ಸೂಕ್ತ ಹಾಗೂ ಸಶಕ್ತ ಎಂಬುದು ಈ ಕವಿತೆಯಿಂದ ಸಾಬೀತಾಗಿದೆ."[೩೨]

ಇದೇನೆ ಇರಲಿ ತೆಂಕಣ ಗಾಳಿಯಾಟ ಕಾವ್ಯವನ್ನು ಪುನರ್ ವಿಮರ್ಶಾತ್ಮಕ ನೆಲೆಗಟ್ಟಿಗೆ ಒಗ್ಗಿಸುವ ಅಗತ್ಯವಿದೆ ಎನಿಸುತ್ತದೆ. ಇಂಗ್ಲೀಷ್ ಕಾವ್ಯದ ಪ್ರಭಾವ ಈ ಕವಿತೆ ಮೇಲಾಗಿದ್ದರೂ ಇಂಡಿಯಾವನ್ನು ಭುಸುಗುಟ್ಟುತ್ತ ಆಕ್ರಮಿಸಿಕೊಂಡ ಪಾತಾಳದಿಂದ ಕಾಲನ ಕೋಣದ ಓಡುವ ಅಬ್ಬರದಿಂದ ಬಂದ ಬ್ರಿಟಿಷ್ ವಸಾಹತು ಸಾಮ್ರಾಜ್ಯಶಾಹಿ ವಿರೋಧಿ ನೀತಿಯನ್ನು ಈ ಕಾವ್ಯದಲ್ಲಿ ಗುರುತಿಸಲು ಸಾಧ್ಯವಿದೆ. ಮೇಲ್ನೋಟಕ್ಕೆ ಗಾಳಿಯ ತೀವ್ರ ಓಟ ಕಣ್ಣಿಗೆ ರಾಚಿದರೂ ಆ ಗಾಳಿಯನ್ನು ಸಾಂಕೇತಿಕ ರೂಪದಲ್ಲಿ ಹಿಡಿದಿಡುವ ಪ್ರಯತ್ನವನ್ನು ಇಲ್ಲಿ ಮಾಡಿದ್ದಾರೆ. ಹಾವಿನಹಾಡು ಕವಿತೆಯಲ್ಲಿ ಪ್ರಸ್ತಾಪಗೊಳ್ಳುವ ನಾಗರಹಾವು ಈ ಕವಿತೆಯಲ್ಲೂ ಪ್ರಸ್ತಾಪಗೊಂಡಿದೆ. ಕನ್ನಡ ಕಾವ್ಯ ಪರಂಪರೆ ಹಾವಿಗೆ ವಿಶೇಷ ಸ್ಥಾನವನ್ನು ಕಲ್ಪಿಸಿದೆ. ಸಿದ್ಧಲಿಂಗಯ್ಯನವರ ಹಲವು ಕಾವ್ಯಗಳಲ್ಲಿ ಈ ಅಂಶವನ್ನು ನಾವು ಗುರುತಿಸಬಹುದು. 'ಸಡಿಲಿಸಿ ಮಡದಿಯ ಉಡಿಯನು ಮುಡಿಯನು' ಎನ್ನುವ ಸಾಲು ನೇರವಾಗಿ ಭಾರತೀಯ ಮಹಿಳೆಯರ ಶೋಷಣೆಗೆ ಸಂಬಂಧಿಸಿದ್ದಾಗಿದೆ. ಆಂಗ್ಲರ ಆಡಳಿತ ಚರಿತ್ರೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಹಳ್ಳಿಗಳನ್ನು ವ್ಯಾಪಿಸಿಕೊಂಡಿದ್ದ ಸ್ವಾತಂತ್ರ್ಯ ಹೋರಾಟವನ್ನು ಹತ್ತಿಕ್ಕಲು ಬ್ರಿಟಿಷ್ ಪೊಲೀಸರನ್ನು ನೇಮಿಸುತ್ತಿದ್ದ ಆಡಳಿತ ಭಾರತೀಯರ ಮಹಿಳೆಯರ ಮಾನಹರಣಕ್ಕೆ ಕಾರಣವಾಗುತ್ತಿದ್ದ ಅಂಶ ಕಣ್ಣಿಗೆ ರಾಚುತ್ತದೆ. ಹೀಗಾಗಿ ಪಂಜೆಯವರು ಇದಕ್ಕೆ ನಿದರ್ಶನ ಎನ್ನುವಂತೆ ಹೆಣ್ಣುಮಗಳ ಉಡಿ ಮತ್ತು ಮುಡಿಗಳನ್ನು ಪ್ರಸ್ತಾಪಿಸುತ್ತಾರೆ.

ಆಂಗ್ಲ ಕವಿಯೊಬ್ಬ ತಮ್ಮ ರೆಫೀಜಿ ಬ್ಲೂಸ್ ಎಂಬ ಕಾವ್ಯವೊಂದರಲ್ಲಿ I Can heard a thounder Rumbling in the sky, It was hitlers, The must die' ಎಂದು ಬರೆಯುತ್ತಾನೆ. ಹಿಟ್ಲರನು ಯಹೂದಿಗಳ ಮಾರಣ ಹೋಮ ಮಾಡಿದ ಚಿತ್ರಣವನ್ನು ಕಟ್ಟಿಕೊಡುವ ಈ ಸಾಲು ಆಕಾಶದಲ್ಲಿ ಗುಡುಗು ಮಿಂಚುಗಳು ಕೇಳಿಸಿದವು, ಆದರೆ ಅದು ಹಿಟ್ಲರ್‌ನ ಘೋಷಣೆಯಾಗಿತ್ತು. ಅವರು ಸಾಯಲೇಬೇಕು ಎಂಬ ಆ ಗುಡುಗು ಪಂಜೆಯವರಲ್ಲಿ ಪಡುವಣ ಮೋಡವ ಬೆಟ್ಟಕ್ಕೆ ಘಟ್ಟಕ್ಕೆ ಹೊಡೆದಟ್ಟುತ್ತ ಕೋಲ್ಮಿಂಚನ್ನು ಮಿರುಗಿಸಿ ಗುಡುಗನು ಗುಡುಗಿಸಿ, ನೆಲವನು ನಡುಗಿಸಿ, ಸಿಡಿಲನು ತಾಳೆಗೆ ಬಾಳೆಗೆ ಎರಗಿಸಿ, ಜಡಿ ಮಳೆ ಸುರಿವೋಲ್, ಬಿರುಮಳೆ ಬರುವೋಲ್, ಕುಡಿ ನೀರನು ಒಣಗಿದ ನೆಲಕೆರೆವೋಲ್ ಎಂದು ಮಾರ್ದನಿಸುತ್ತದೆ. ಅಲ್ಲಿ ಹಿಟ್ಲರ್, ಇಲ್ಲಿ ಬ್ರಿಟಿಷ್.

### ಉದಯರಾಗ

ಮೂಡುವನು ರವಿ ಮೂಡುವನು
ಕತ್ತಲೊಡನೆ ಜಗಳಾಡುವನು;

ಮೂಡಣ ರಂಗಸ್ಥಳದಲಿ ನೆತ್ತರು
ಮಾಡುವನು, ಕುಣಿದಾಡುವನು.

ಬೆಳಕಿನ ಕಣ್ಣುಗಳಿಂದಾ ಸೂರ್ಯನು
ನೋಡುವನು, ಬಿಸಿಲೂಡುವನು;
ಚಿಲಿಪಿಲಿ ಹಾಡುವ ಹಾಡಿ ಹಕ್ಕಿಯ
ಗೂಡಿನ ಹೊರ ಹೊರ ದೂಡುವನು.

ಬಂಗಾರದ ಚೆಲು ಬಿಸಿಲ ಕಿರೀಟದ
ಶೃಂಗಾರದ ತಲೆ ಎತ್ತುವನು;
ತೆಂಗಿನ ಕಂಗಿನ ತಾಳೆಯ ಬಾಳೆಯ
ಅಂಗಕೆ ರಂಗನು ಮೆತ್ತುವನು.

ಮಾಡಿನ ಹುಲ್ಲಲಿ ಚಿನ್ನದ ಗೆರೆಯನು
ಎಳೆಯುವನು, ರವಿ ಎಳೆಯುವನು;
ಕೂಡಲ ಕೋಣೆಯ ಕತ್ತಲೆ ಕೊಳೆಯನು
ತೊಳೆಯುವನು, ರವಿ ಹೊಳೆಯುವನು

ಮಲಗಿದ ಕೂಸಿನ ನಿದ್ದೆಯ ಕಸವನು
ಗುಡಿಸುವನು ಕಣ್ ಬಿಡಿಸುವನು;
ಹುಲುಗಿಡ ಹೂವಿಗೆ ಪರಿಪರಿ ಬಣ್ಣವ
ಉಡಿಸುವನು, ಹನಿ ತೊಡಿಸುವನು

ಏರುವನು ರವಿ ಏರುವನು,
ಬಾನೊಳು ಸಣ್ಣಗೆ ತೋರುವನು
'ಏರಿದವನು ಚಿಕ್ಕವನಿರಬೇಕಲೆ'
ಎಂಬಾ ಮಾತನು ಸಾರುವನು.[೨೬]

ಪಂಜೆಯವರ ಕಾವ್ಯಗಳಲ್ಲಿ 'ಉದಯರಾಗ' ಒಂದು ವಿಶಿಷ್ಟ ಪದ್ಯ. ಜ್ಞಾನದ ಸಂಕೇತವಾದ ಸೂರ್ಯ ಜಗತ್ತಿನ ಅಜ್ಞಾನದ ಸಂಕೇತವಾದ ಕತ್ತಲವನ್ನು ಪೂರ್ವ ದಿಕ್ಕಿನ ರಂಗಸ್ಥಳದ ಮೇಲೆ ಕುಣಿಕುಣಿದಾಡುತ್ತ ಹೊಡೆದೋಡಿಸುವ ಅಭೂತಪೂರ್ವ ಚಿತ್ರಣವನ್ನು ಈ ಕಾವ್ಯದಲ್ಲಿ ಕಟ್ಟಿಕೊಡುತ್ತಾರೆ. ಇಡೀ ಜೀವಜಾಲದ ಚಟುವಟಿಕೆ ಪ್ರಾರಂಭವಾಗುವುದೇ ಸೂರ್ಯೋದಯದ ಮೂಲಕ, ಚಿಲಿಪಿಲಿ ಹಾಡನು ಹಾಡಿ ಹಕ್ಕಿಯ ಗೂಡಿನ ಹೊರಹೊರ ದೂಡುವನು ಎಂದು ಪಂಜೆಯವರು ಹೇಳುವುದು ಇದೆ. ಭಾವನೆಯ ಹಿನ್ನೆಲೆಯಲ್ಲಿ ಕೊನೆಗಂತು ರಾಯರು ವಿಶಿಷ್ಟ ಸಂದೇಶವನ್ನು ಈ ಕಾವ್ಯದ ಮೂಲಕ ನೀಡುತ್ತಾರೆ. ಮುಂಜಾನೆ ತಣ್ಣಗೆ ಹುಟ್ಟುವ ಸೂರ್ಯ ಬಾನೆತ್ತರಕ್ಕೆ ಏರುತ್ತಾ, ಸಣ್ಣಗೆ ತೋರುತ್ತಾ ಮೇಲಿರುವವನಲ್ಲಿ ಅಹಂಕಾರ ಮೊಳೆಯದೇ

ನಾನಿನ್ನು ಕಲಿಯುವ, ತಿಳಿಯುವ ಸೈದ್ಧಾಂತಿಕ ನಿಲುವುಗಳು, ವೈಚಾರಿಕ ಅನುಸಂಧಾನತೆಗಳು, ವೈಜ್ಞಾನಿಕ ಮನೋಭಾವನೆಗಳು, ಸಮಾಜಮುಖಿ ಚಿಂತನೆಗಳು ಸಾಕಷ್ಟಿವೆ ಎನ್ನುವ ವಿನೀತ ಭಾವನೆಯಿರಬೇಕು ಎಂಬ ನಿಲುವನ್ನು 'ಏರಿದವನು ಚಿಕ್ಕವನಿರಬೇಕಲೆ' ಎನ್ನುವ ಸಾಲಿನಲ್ಲಿ ಸಾರಿ ಬಿಟ್ಟಿದ್ದಾರೆ. ಮುಂದೆ ದೇಶದ ಸತ್ಪ್ರಜೆಗಳಾಗಿ ರೂಪಗೊಳ್ಳಬೇಕಿರುವ ಮಕ್ಕಳೊಳಗೆ ಪಂಜೆಯವರ ಈ ಕಾವ್ಯ ಧೋರಣೆ ಕೆಲಸ ಮಾಡಿತೆಂದರೆ ನಮ್ಮ ಸಮಾಜವನ್ನು ಕಾಡುತ್ತಿರುವ ಹಲವು ಸಮಸ್ಯೆಗಳು ಮೂಲೋತ್ಪಾಟನೆಗೊಂಡು ಬಿಡುತ್ತವೆ. ಹಾಗೆ ಆಗಬೇಕೆಂಬ ಭಾವ ಪಂಜೆಯವರದ್ದು.

ಪಂಜೆ ಮಂಗೇಶರಾಯ, ಹೊಯ್ಸಳ ಹಾಗೂ ಜಿ.ಪಿ. ರಾಜರತ್ನಂ ಅವರನ್ನು ಕನ್ನಡ ಮಕ್ಕಳ ಸಾಹಿತ್ಯ ರತ್ನತ್ರಯರೆಂದು ಕರೆಯುತ್ತಾರೆ. ಜಿ.ಪಿ. ರಾಜರತ್ನಂ ಅವರು ಹಿರಿಯರ, ಕಿರಿಯರ ನಡುವಣ ಸಾಹಿತ್ಯಿಕ ಸೇತುವೆಯಾಗಿ ಕಾರ್ಯನಿರ್ವಹಿಸಿದರು. ಹಳೆಗನ್ನಡ, ನಡುಗನ್ನಡಗಳ ಬೌದ್ಧ, ಜೈನ ಧರ್ಮಗಳ ಮಧ್ಯೆ ನಿಂತು ಕೆಲಸ ಮಾಡಿದ ಕೀರ್ತಿ ಜಿ.ಪಿ. ರಾಜರತ್ನಂ ಅವರದು. ಜಿ.ಪಿ. ರಾಜರತ್ನಂರವರು ಮಕ್ಕಳ ಪದ್ಯಲೋಕದ ರಾಜ ಮತ್ತು ಮಕ್ಕಳ ಪದ್ಯಲೋಕದ ರತ್ನ ಎಂದು ಬೋಳುವಾರ ಮಹಮದ್ ಕುಂಞ್ ಅವರು ಕರೆಯುತ್ತಾರೆ. ರಾಜರತ್ನಂರವರ ಪದ್ಯಗಳಲ್ಲಿ ಇರುವ ಸುಲಭ ಗ್ರಹಿಕೆಯ ಓಘವನ್ನು ಮತ್ತ್ಯಾರ ಕಾಲದಲ್ಲಿ ಕಾಣುವುದು ದುಸ್ತರ. ಇವರ ರಚನೆಗಳು ಸುಲಭ ಗ್ರಾಹ್ಯವಾಗಿದ್ದು ಅನುಕರಣ ಯೋಗ್ಯವಾಗಿವೆ. ಹಾ.ಮಾ. ನಾಯಕರು ಹೇಳುವ ಹಾಗೆ ರಾಜರತ್ನಂರವರ 'ಬಣ್ಣದ ತಗಡಿನ ತುತ್ತೂರಿ' ಕವಿತೆಯನ್ನು ಅನುಸರಿಸಿ, 'ಬಣ್ಣದ ತಗಡಿನ ಲೋಲಕ್ಕ, ಕಾಸಿಗೆ ಕೊಂಡಳು ನೀಲಕ್ಕ' ಎಂಬ ಕಾವ್ಯವನ್ನು ಬರೆದಿದ್ದರಂತೆ. ಅಷ್ಟು ಪ್ರಭಾವಶಾಲಿ ಛಾತಿಯನ್ನು ರಾಜರತ್ನಂರವರ ಮಕ್ಕಳ ಕಾವ್ಯದಲ್ಲಿ ಕಾಣಲು ಸಾಧ್ಯವಿದೆ. ರಾಜರತ್ನಂರವರು ಚುಟುಕು ಪದ್ಯವನ್ನು ಮೊದಲು ಬಳಸಿದವರು. ರಾಜರತ್ನಂ ಅವರ ಗಡಗಡ ಓಡಿತು ರೈಲು, ತೆಗೆದುಕೊಂಡು ದಡಿ, ಬೆಳ್ಳಿಯ ರೆಕ್ಕೆಯ ಹಕ್ಕಿ ಮುಂತಾದವು ಉತ್ಕೃಷ್ಟ ಚುಟುಕುಗಳು. ರತ್ನಂರವರಿಗೆ ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನವಿದೆ. ತಮ್ಮ ಬದುಕಿನುದ್ದಕ್ಕೂ ಪಡೆದ ವೈವಿಧ್ಯಮಯ ಅನುಭವಗಳನ್ನು ಸ್ವತಃ ಮಕ್ಕಳಿಗೆ, ಮಾಸ್ತರರಾಗಿದ್ದ ಅಪಾರ ಅಧ್ಯಯನದ ಹಿನ್ನೆಲೆಯಲ್ಲಿ ಶಿಶುಗೀತೆಗಳನ್ನು ಕಟ್ಟಿಕೊಟ್ಟರು. "ರಾಜರತ್ನಂರವರ ಶಿಶುಗೀತೆಗಳು ಮಕ್ಕಳನ್ನು ಆಕರ್ಷಿಸಿ, ಅವರ ಮನಸ್ಸನ್ನು ಅರಳಿಸುವಲ್ಲಿ ಅಪಾರ ಯಶಸ್ಸನ್ನು ಪಡೆದಿವೆ. ಅವರ ಪ್ರಯೋಗಗಳು ಸರಳ ಹಾಗೂ ನೇರ ಮಕ್ಕಳ ಪ್ರಪಂಚವನ್ನು, ಅವರ ಮನಸ್ಸನ್ನು ರಾಜರತ್ನಂ ಚೆನ್ನಾಗಿಬಲ್ಲರು. ವರ್ಣನೆಯ ಅಬ್ಬರವಿಲ್ಲದೆ, ನೀತಿಯ ಭಾರ ಹೇರದೆ ಮಕ್ಕಳ ನೆನಪಿನಲ್ಲಿ ನಿಲ್ಲುವಂತೆ ಅವರು ಪದ್ಯಗಳನ್ನು ರಚಿಸಿದ್ದಾರೆ. ಮಕ್ಕಳ ಆಸಕ್ತಿ ಅಭಿರುಚಿಗೆ ಅನುಗುಣವಾಗಿ ವಸ್ತುವಿನ ಆಯ್ಕೆ, ಅವರ ಕಿವಿಗೆ ಮೋಹಕವಾದ ಪ್ರಾಸ ಸಂಯೋಜನೆ ಇವೇ ಈ ಪದ್ಯಗಳ ಯಶಸ್ಸಿನ ಗುಟ್ಟು."[೬೭]

ರಾಜರತ್ನಂ ಅವರ ಚುಟುಕಿಗೆ ಒಂದು ಉದಾಹರಣೆ ನೋಡುವುದಾದರೆ;

ಗಡ ಗಡ ಓಡಿತು ರೈಲು
ನಿಮಿಷಕೆ ಸಾವಿರ ಮೈಲು
ಸಾವಿರ ಮೈಲನು
ಮೀರು ಹೋಗಲು
ಆಗದು ರೈಲಿನ ಕೈಲು[೩೮]

ಇಂತಹ ಚಿಕ್ಕ ರಚನೆಗಳು ಮಕ್ಕಳ ಮನಸ್ಸಿನ ಮೇಲೆ ಅಗಾಧ ಪರಿಣಾಮ ಬೀರಿ ಯೋಚನೆಗೆ ಹಚ್ಚುತ್ತದೆ.

ರಾಜರತ್ನಂ ಅವರು 'ಬೆಳೆಯುವ ಪೈರು' ಮತ್ತು 'ಧ್ವಜ ವಂದನೆ' ಎಂಬ ಎರಡು ಮಕ್ಕಳ ನಾಟಕಗಳನ್ನು ರಚಿಸಿದ್ದಾರೆ. ಶಬ್ದ ಬಳಕೆಯಲ್ಲಿ ಮಕ್ಕಳಿಗೆ ಗ್ರಾಹ್ಯವಾಗುವ ಪದಗಳನ್ನು ತಮ್ಮ ಕವಿತೆಗಳಲ್ಲಿ ಬಳಸಿರುವುದು ಅವರ ಶ್ರೇಷ್ಠತೆಯ ಪ್ರತೀಕ. ಜಿ.ಪಿ. ರಾಜರತ್ನಂರ ಕಾವ್ಯದಲ್ಲಿ ಚಿತ್ರಕ ಶಕ್ತಿಯನ್ನು ಕಾಣಬಹುದು. ಕಿಟ್ಟಿ ರೊಟ್ಟಿ ಕದ್ದ, ಪುಟಾಣಿ ಕೃಷ್ಣ, ಕುದುರೆ ಸವಾರಿ, ಅಂಗಡಿ, ಜಣ ಜಣ ಜಣ, ರೊಟ್ಟಿ ಅಂಗಡಿ ಕಿಟ್ಟಪ್ಪ, ಕಾಗೆಯ ಕಥೆ, ಕುಂಟ, ತಾರೆ ಮುಂತಾದ ಕವಿತೆಗಳಲ್ಲಿ ಇದನ್ನು ಗುರುತಿಸಬಹುದು. ಜಿ.ಪಿ. ರಾಜರತ್ನಂರವರ ಮಕ್ಕಳ ನವಿರು ಕಾವ್ಯ ರಚನೆಗೆ ಕುರುಬನ ಕುರಿ, ನವಿಲು, ಗುಳ್ಳೆನರಿ, ಹಕ್ಕಿ, ವಾರಕ್ಕೆ ಏಳೇ ಏಳು ದಿನ, ಒಂದು - ಎರಡು, ಹತ್ತು ಮಕ್ಕಳು, ಹಾವು ಬಂತು ಹಾವು, ಬುರುಡೆ ಹೊಡೆದ ಕುರುಡರು ಮುಂತಾದವುಗಳನ್ನು ಹೆಸರಿಸಬಹುದು. ಪಂಜೆ ಮಂಗೇಶರಾಯರ ಕವಿತೆಗಳಲ್ಲಿ ನೇರವಾಗಿ ನೀತಿ ಬೋಧನೆಯನ್ನು ಗುರುತಿಸಬಹುದು. ಹಾಗೆಯೇ ರಾಜರತ್ನಂ ಅವರ ಜಂಬದ ಕೋಳಿ, ಗಿಳಿಯ ಮಾತು, ತೆಂಗು, ಗಡಿಯಾರದ ಸಡಗರ, ಬುದ್ಧಿಮಾತು ಮುಂತಾದ ಕವಿತೆಗಳು ಪರೋಕ್ಷವಾಗಿ ಕಾಣಿಸಿಕೊಳ್ಳುತ್ತವೆ. ರಕ್ತ, ಸಾವು, ಹಿಂಸೆಗಳು ನನ್ನ ಕಾವ್ಯದಲ್ಲಿ ಬರಬಾರದೆನ್ನುವ ಬಲವಾದ ಜೀವಪರತೆ ರಾಜರತ್ನಂ ಅವರದು. ರಾಜರತ್ನಂರವರ ಸರಳ ಕಾವ್ಯ ಸಂರಚನೆಗೆ ಅವರ 'ನಾಯಿಮರಿ' ಎನ್ನುವ ಕಾವ್ಯವನ್ನು ಹೆಸರಿಸಬಹುದು. ಆ ಕಾವ್ಯ ಹೀಗಿದೆ.

'ನಾಯಿ ಮರಿ! ನಾಯಿ ಮರಿ!
ತಿಂಡಿ ಬೇಕೆ?'

'ತಿಂಡಿ ಬೇಕು! ತೀರ್ಥ ಬೇಕು!
ಎಲ್ಲ ಬೇಕು!'

'ನಾಯಿ ಮರಿ! ನಿನಗೆ ತಿಂಡಿ
ಏಕೆ ಬೇಕು?'

'ತಿಂದು ಗಟ್ಟಿಯಾಗಿ ಮನೆಯ
ಕಾಯಬೇಕು!'

'ನಾಯಿ ಮರಿ! ಕಳ್ಳ ಬಂದರೇನು
ಮಾಡುವೆ?'
'ಲೊಳ! ಲೊಳ! ಬೌ! ಎಂದು
ಕೂಗಿಯಾಡುವೆ!'

'ಜಾಣ ಮರಿ! ತಾಳು! ಹೋಗಿ
ತಿಂಡಿ ತರುವೆನು'

'ತಾ! ನಿನ್ನ ಮನೆಯ ನಾನು
ಕಾಯುತಿರುವೆನು'.[೩೯]

ಮಗುವಿನ ಹಂಚಿಕೊಂಡು ತಿನ್ನುವ ಅಥವಾ ತನಗಿಲ್ಲದಿದ್ದರೂ ಮತ್ತೊಬ್ಬರಿಗೆ ಕೊಡುವ ಶ್ರೇಷ್ಠ ಗುಣವನ್ನು ಜಿ.ಪಿ. ರಾಜರತ್ನಂ ಅವರು 'ನಾಯಿಮರಿ' ಕಾವ್ಯದಲ್ಲಿ ಉಲ್ಲೇಖಿಸುತ್ತಾರೆ. ಜೊತೆಗೆ ಮಗು ಮತ್ತು ನಾಯಿಯ ಸಂಭಾಷಣೆಯನ್ನು ಈ ಕಾವ್ಯದಲ್ಲಿ ಮನೋಜ್ಞವಾಗಿ ಕಟ್ಟಿಕೊಡುತ್ತಾರೆ. ಕೃತಜ್ಞತೆಗೆ ಹೆಸರಾದ ಸಾಕು ಪ್ರಾಣಿ ನಾಯಿ ಮಗು ಕೊಡುವ ತಿಂಡಿಯನ್ನು ತಿಂದು ಗಟ್ಟಿಯಾಗಿ ಮನೆಯನ್ನು ಕಾಯುತ್ತೇನೆಂಬ ಸಂದೇಶವನ್ನು ಮನುಷ್ಯ ಜಗತ್ತಿಗೆ ನೀಡುತ್ತದೆ. ಸರಳ, ಸುಲಲಿತ ಮನೋಜ್ಞ ಕಾವ್ಯ ಧೋರಣೆ 'ನಾಯಿಮರಿ' ಪದ್ಯದಲ್ಲಿ ವ್ಯಕ್ತವಾಗಿದೆ. ಇದರ ಹಾಗೆ ನಾವು 'ನಮ್ಮ ಮನೆಯ ಸಣ್ಣ ಪಾಪ' ಎಂಬ ಕಾವ್ಯವನ್ನು ಗಮನಿಸಬಹುದು.

ನಮ್ಮ ಮನೆಯಲೊಂದು ಸಣ್ಣ
ಪಾಪವಿರುವುದು
ಎತ್ತಿಕೊಳದೆ ಹೋದರದಕೆ
ಕೋಪ ಬರುವುದು

ಕೋಪ ಬರಲು ಗಟ್ಟಿಯಾಗಿ
ಕಿರಿಚಿಕೊಳ್ಳುವುದು
ಕಿರಿಚಿಕೊಂಡು ತನ್ನ ಮೈಯ
ಪರಚಿಕೊಳ್ಳುವುದು

ಮೈಯ ಪರಚಿಕೊಂಡು ಪಾಪ
ಅತ್ತು ಕರೆವುದು
ಅಳಲು ಕಣ್ಣಿನಿಂದ ಸಣ್ಣ
ಮುತ್ತು ಸುರಿವುದು

ಪಾಪ ಅತ್ತರಮ್ಮ ತಾನೂ
ಅತ್ತು ಬಿಡುವಳು

ಅಯ್ಯೋ ಪಾಪ ಎಂದುಕೊಂಡು
ಮುತ್ತು ಕೊಡುವಳು

ಪಾಪ ಪಟ್ಟು ಹಿಡಿದ ಹಟವು
ಸಾರ್ಥವಾಯಿತು.
ಕಿರಿಚಿ ಪರಚಿ ಅಳುವುದೆಲ್ಲ
ಅರ್ಥವಾಯಿತು.[೪೦]

ಈ ಕಾವ್ಯದಲ್ಲಿ ರಚ್ಚೆ ಹಿಡಿಯುವ ಮಕ್ಕಳ ಮನಸ್ಥಿತಿ ಅಡಗಿದೆ. ತಂದೆ-ತಾಯಿಗಳ, ಬಂಧು ಬಳಗದ ಪ್ರೀತಿಯನ್ನು ನಿರೀಕ್ಷಿಸುವ ಪುಟ್ಟ ಮಕ್ಕಳು ಪ್ರತಿಕ್ರಿಯೆಯನ್ನು ಬಹುಶಃ ರಾಜರತ್ನಂ ಅವರು ತಮ್ಮ 'ನಮ್ಮ ಮನೆಯ ಸಣ್ಣ ಪಾಪ' ಕವನದಲ್ಲಿ ಕಟ್ಟಿಕೊಡುವ ಹಾಗೆ ಮತ್ತ್ಯಾರಿಂದಲೂ ಕಟ್ಟಿಕೊಡಲು ಸಾಧ್ಯವಿಲ್ಲ ಎನಿಸುತ್ತದೆ. ಮಗುವಿನ ಪ್ರಪಂಚವೇ ತನ್ನ ಪ್ರಪಂಚವೆಂದು ಪರಿಭಾವಿಸುವ ತಾಯಿ ಮಗು ಅಳುವಿನ ಜೊತೆಗೆ ತಾನು ಅಳುವ ಮನಸ್ಥಿತಿಯನ್ನು ರಾಜರತ್ನಂ ಈ ಕಾವ್ಯದಲ್ಲಿ ಕಟ್ಟಿಕೊಟ್ಟಿದ್ದಾರೆ. ತಾಯಿ-ಮಗುವಿನ ಬಾಂಧವ್ಯಕ್ಕೇ ಈ ಕಾವ್ಯ ಉತ್ತಮ ಉದಾಹರಣೆಯಾಗಿ ನಿಲ್ಲುತ್ತದೆ.

ವಿಶ್ವಸಾಹಿತ್ಯ ಕ್ಷೇತ್ರ ಕಂಡ ಶ್ರೇಷ್ಠ ಕವಿಗಳಲ್ಲಿ ಕನ್ನಡದ ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪ ಒಬ್ಬರು. "ಆಡು ಮುಟ್ಟದ ಸೊಪ್ಪಿಲ್ಲ ಕುವೆಂಪು ರಚಿಸದೇ ಇರುವ ಸಾಹಿತ್ಯ ಪ್ರಕಾರಗಳಿಲ್ಲ" ಎನ್ನುವ ಮಾತು ಸಾಹಿತ್ಯಿಕ ಚರಿತ್ರೆಯಲ್ಲಿ ದಾಖಲಾಗಿದೆ. ಅಮಲನ ಕಥೆಯಿಂದ, ಶ್ರೀರಾಮಾಯಣ ದರ್ಶನಂ ಮಹಾಕಾವ್ಯದವರೆಗೆ ಕುವೆಂಪುರವರ ಪಯಣವಿದೆ. ಕಾವ್ಯ, ಕಾದಂಬರಿ, ಸಣ್ಣಕಥೆ, ಪ್ರಬಂಧ, ನಾಟಕ, ವಿಮರ್ಶೆ, ಮೀಮಾಂಸೆ, ವ್ಯಾಕರಣ, ಮಕ್ಕಳ ಸಾಹಿತ್ಯ ಮುಂತಾದ ಎಲ್ಲ ಸಾಹಿತ್ಯಿಕ ಪ್ರಕಾರಗಳಲ್ಲಿ ಕೃಷಿ ಮಾಡಿದ ಕೀರ್ತಿ ಕುವೆಂಪುರವರದ್ದು. ಈ ಹಿನ್ನೆಲೆಯಲ್ಲಿ "ರವಿ ಕಾಣದ್ದನ್ನು ಕವಿ ಕಂಡ" ಎಂಬ ಮಾತು ಕುವೆಂಪುರವರಿಗೆ ಅನ್ವಯಿಸುತ್ತದೆ. ಕುವೆಂಪುರವರು ಮಕ್ಕಳ ಸಾಹಿತ್ಯದ ಮೂಲಕ ಮಕ್ಕಳಲ್ಲಿ ವಿಚಾರವಂತಿಕೆಯನ್ನು ಬೆಳೆಸಬೇಕೆಂಬ, ಸಾಹಿತ್ಯಾಸಕ್ತಿಯನ್ನು ಕೆರಳಿಸಬೇಕೆಂಬ ನಂಬಿಕೆಯನ್ನು ಇಟ್ಟುಕೊಂಡವರು. ಈ ಹಿನ್ನೆಲೆಯಲ್ಲಿ ಮಕ್ಕಳ ಸಾಹಿತ್ಯದ ಕೃಷಿಯಲ್ಲಿ ತೊಡಗಿಕೊಂಡರು. "ಕುವೆಂಪು ಮಕ್ಕಳ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಒಟ್ಟು ಒಂಬತ್ತು ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಅಮಲನ ಕಥೆ, ಮರಿವಿಜ್ಞಾನಿ, ನನ್ನ ಮನೆ, ಮೇಘಪುರ, ಹಾಳೂರು ಮತ್ತು ಬೊಮ್ಮನಹಳ್ಳಿಯ ಕಿಂದರಿಜೋಗಿ ಎಂದು ಆರು ಪದ್ಯ ಸಂಕಲನಗಳನ್ನು ಹಾಗೂ 'ನರಿಗಳಿಗೇಕೆ ಕೋಡಿಲ್ಲ' ಎಂಬ ಕಥೆಯೊಂದನ್ನು ಬಿಟ್ಟರೆ, 'ನನ್ನ ಗೋಪಾಲ', 'ಮೋಡಣ್ಣನ ತಮ್ಮ' ಎಂಬ ಎರಡು ನಾಟಕಗಳು".[೪೧]

ಕುವೆಂಪುರವರು ಮಕ್ಕಳಿಗಾಗಿ ರಚಿಸಿದ ಶ್ರೇಷ್ಠಕಾವ್ಯ ಬೊಮ್ಮನಹಳ್ಳಿಯ ಕಿಂದರಿಜೋಗಿ, ಪದಲಾಲಿತ್ಯ, ಶಬ್ದನಾದ, ಸರಳ ನಿರೂಪಣಾ ಶೈಲಿ, ಓದುಗ ಮಕ್ಕಳ ಹೃದಯವನ್ನು

ಅರಳಿಸುತ್ತದೆ. ಬಹುಶಃ ಕುವೆಂಪುರವರ "ಬೊಮ್ಮನಹಳ್ಳಿಯ ಕಿಂದರಿಜೋಗಿ" ಕಾವ್ಯಕ್ಕೆ ಸಮಾನವಾದ ಕಾವ್ಯ ಮತ್ತೆಲ್ಲು ಕಾಣಲಾಗದೆಂಬ ಭಾವನೆ ಮೂಡಿಸದೇ ಇರದು. ಊರನ್ನು ಕಾಡಿಸುವ ಇಲಿಗಳನ್ನು ನಾಶ ಮಾಡಲು ಯಾರಿಂದಲೂ ಸಾಧ್ಯವಾಗುವುದಿಲ್ಲ. ಕೊನೆಗೆ ಊರಗೌಡ ಇಲಿಗಳನ್ನು ನಾಶ ಮಾಡುವವರಿಗೆ ಬಹುಮಾನ ಕೊಡುತ್ತೇನೆಂದು ಘೋಷಿಸುತ್ತಾನೆ. ಆ ಕೆಲಸವನ್ನು ಮಾಡಿದವನು ಕಿಂದರಿಜೋಗಿ. ಮಾತಿನ ಪ್ರಕಾರ ಬಹುಮಾನ ಕೊಡಬೇಕಾಗಿದ್ದ ಗೌಡ ಮಾತು ತಪ್ಪುತ್ತಾನೆ. ಇದರಿಂದ ಕುಪಿತನಾದ ಕಿಂದರಿಜೋಗಿ ತನ್ನ ಕೇವಲ ಕಿಂದರಿಯ ನಾದದಿಂದ ಊರಿನ ಮಕ್ಕಳನ್ನೆಲ್ಲ ಸೆಳೆದು ಗುಡ್ಡದ ಗವಿಯಲ್ಲಿ ಸೇರಿಕೊಂಡು ಬಿಡುತ್ತಾನೆ. ಈ ಘಟನೆಯಿಂದ ಆತಂಕಗೊಂಡ ತಂದೆ-ತಾಯಿಗಳು ಎಷ್ಟು ಗೋಗರೆದರೂ ಮಕ್ಕಳನ್ನು ಬಿಡುವುದಿಲ್ಲ. ಹೀಗೆ ಹೇಳುವುದಕ್ಕಿಂತಲೂ ಜೋಗಿಯ ಕಿನ್ನರಿ ನಾದಕ್ಕೆ ಮರುಳಾದ ಮಕ್ಕಳೇ ಮನೆಗೆ ಹೋಗುವುದಿಲ್ಲ ಎನ್ನುವುದು ಸೂಕ್ತ. ಅದೇನೆ ಇರಲಿ ಕುವೆಂಪುರವರ ಕಿಂದರಿಜೋಗಿ ಕಥನಕಾವ್ಯ ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ಅಭೂತಪೂರ್ವವಾದುದು. ಇಡೀ ಪ್ರಸಂಗದಲ್ಲಿ ಬೊಮ್ಮನಹಳ್ಳಿಯ ಗೌಡ ಜನರ ಒತ್ತಡಕ್ಕೆ ಮಣಿದು ಜೋಗಿಗೆ ಕೊಡಬೇಕಾದ ಬಹುಮಾನವನ್ನು ಕೊಟ್ಟು ಮಕ್ಕಳನ್ನು ಬಿಡಿಸಿಕೊಂಡು ಬರುವ ಕುವೆಂಪು ಚಿಂತನೆಯೇ ಅಮೋಘವಾದುದು. ಇಡೀ ಈ ಪ್ರಕರಣ ಪಾಳೇಗಾರಿಕೆ ಪಳೆಯುಳಿಕೆಗಳ ಸಿದ್ಧಾಂತವನ್ನು ಮಕ್ಕಳ ಮುಖೇನ ವಿರೋಧಿಸಲು ಹೊರಟ ಕುವೆಂಪುರವರ ಶ್ರೇಷ್ಟ ಚಿಂತನೆ 'ಬೊಮ್ಮನಹಳ್ಳಿಯ ಕಿಂದರಿಜೋಗಿ"ಯಲ್ಲಿ ವ್ಯಕ್ತವಾಗಿದೆ.

ಧಾರ್ಮಿಕ ಮೂಲಭೂತವಾದ ಗಟ್ಟಿಗೊಳ್ಳುತ್ತಿರುವ, ಅಸಹಿಷ್ಣುತೆ ಹೆಚ್ಚುತ್ತಿರುವ ಇಡೀ ಮನುಕುಲವನ್ನು ದಿಕ್ಕು ತಪ್ಪಿಸುತ್ತಿರುವ ಅವೈಚಾರಿಕ, ಅವೈಜ್ಞಾನಿಕ ಸಂಗತಿಗಳು ವಿಜೃಂಭಿಸುತ್ತಿರುವ ಈ ಹೊತ್ತಿನಲ್ಲಿ ಮನುಷ್ಯ ಜನಾಂಗದ ಆಹಾರ ಸಂಸ್ಕೃತಿಯ ಮೇಲೆ ದಾಳಿ ಮಾಡುತ್ತಿರುವ ಧರ್ಮ, ದೇವರು, ಗುಡಿ-ಗುಂಡಾರಗಳ, ಮಠಮಾನ್ಯಗಳ ಅಸೈದ್ಧಾಂತಿಕ ನಿಲುವುಗಳ ಮಧ್ಯೆ ದಾರುಣ ಬದುಕನ್ನು ಬದುಕುತ್ತಿರುವ ನಾವುಗಳು ಕುವೆಂಪುರವರ ವೈಚಾರಿಕ, ವೈಜ್ಞಾನಿಕ, ತಾತ್ವಿಕ ಚಿಂತನೆಗಳು ಹೇಗಿರುತ್ತವೆ ಎನ್ನುವುದಕ್ಕೆ ಅವರ 'ಅರ್ಧಚಂದ್ರ' ಕಾವ್ಯವನ್ನು ಉದಾಹರಣೆಯಾಗಿ ಓದಬೇಕಿದೆ. ಕುವೆಂಪು ತಮ್ಮ 'ಅರ್ಧಚಂದ್ರ' ಕಾವ್ಯದಲ್ಲಿ ದೇವರು ತಾಯಿಗಿಂತಲೂ ಮಿಗಿಲಲ್ಲ ಎಂಬ ಮಹೋನ್ನತ ಸಿದ್ಧಾಂತವನ್ನು ಪ್ರತಿಪಾದಿಸಿ ಬಿಡುತ್ತಾರೆ. ಅದರ ಪೂರ್ಣ ಪಾಠ ಇಲ್ಲಿದೆ.

> "ದೇವರ ಪೆಪ್ಪರಮೆಂಟೇನಮ್ಮ
> ಗಗನದೊಳಲೆಯುವ ಚಂದಿರನು?
> ಎಷ್ಟೇ ತಿಂದರು ಖರ್ಚೇ ಆಗದ
> ಬೆಳೆಯುವ ಪೆಪ್ಪರಮೆಂಟಮ್ಮಾ"!
>
> "ದಿನದಿನ ನೋಡುವೆ, ದಿನವೂ ಕರಗುತ
> ಎರಡೇ ವಾರದೊಳಳಿಯುವುದು!

ಮತ್ತದು ದಿನ ದಿನ ಹೆಚ್ಚುತ ಬಂದು
ಎರಡೇ ವಾರದಿ ಬೆಳೆಯುವುದು!

"ಅಕ್ಷಯವಾಗಿಹ ಪೆಪ್ಪರಮೆಂಟದು
ನನಗೂ ದೊರಕುವುದೇನಮ್ಮಾ?"
"ನೀನೂ ದೇವರ ಬಾಲಕನಾಗಲು
ನಿನಗೂ ಕೊಡುವನು ಕಂದಯ್ಯ!"

"ದೇವರ ಬಾಲಕನಾಗಲು ಒಲ್ಲೆ
ಆತನ ಮೀರಿಹೆ ನೀನಮ್ಮಾ!
ತಾಯಿಯನಗಲಿಸಿ ದೇವರ ಹಿಡಿಸುವ
ಪೆಪ್ಪರಮೆಂಟೂ ಬೇಡಮ್ಮಾ!"[೨]

ಇಡೀ ಈ ಕಾವ್ಯವನ್ನು ಕುವೆಂಪು ಮಕ್ಕಳಿಗಾಗಿ ಬರೆದಿದ್ದರೂ ವೈಚಾರಿಕ ಕ್ರಾಂತಿಯನ್ನೇ ಸಾರಿ ಬಿಡುತ್ತಾರೆ. ಕುವೆಂಪು ವಿಶೇಷವಾಗಿ ನಮ್ಮೊಳಗೆ ವೈಚಾರಿಕ ಮತ್ತು ವೈಜ್ಞಾನಿಕ ಚಿಂತನೆಗಳಿಂದಾಗಿ ಅಮೋಘ ಸ್ಥಾನವನ್ನು ಪಡೆದಿದ್ದಾರೆ. ಬಾಲಕನೊಬ್ಬನನ್ನು ಸಾಂಕೇತಿಕ ರೂಪಕವನ್ನಾಗಿ ಬಳಸಿಕೊಳ್ಳುವ ಕುವೆಂಪು 'ನಾನು ದೇವರ ಬಾಲಕನಾಗಲು ಒಲ್ಲೆ, ಆತನನ್ನು ಮೀರಿಸಿದವಳು ನೀನೆ ತಾಯಿ, ನಿನಗಿಂತಲೂ ದೊಡ್ಡ ದೇವರಿಲ್ಲ, ನಿನಗಿಂತಲೂ ದೊಡ್ಡ ಧರ್ಮವಿಲ್ಲ, ಮಗು ಮತ್ತು ತಾಯಿಯನ್ನು ಅಗಲಿಸಿ ದೈವಿಕ ಸಿದ್ಧಾಂತಗಳನ್ನು ಪ್ರತಿಪಾದಿಸುವ ಈ ವ್ಯವಸ್ಥೆಯೇ ನನಗೆ ಬೇಕಿಲ್ಲ ಎಂದು ಮಗುವಿನ ಮೂಲಕ ಹೇಳಿಸುವ ಈ ಬಗೆಯ ಸೈದ್ಧಾಂತಿಕ ಅನುಸಂಧಾನತೆಯ ಪ್ರತಿಪಾದನೆಯೇ ಮಹೋನ್ನತವಾದುದು. ಕುವೆಂಪು ವೈಚಾರಿಕತೆಯ ಪ್ರತಿಪಾದಕ. ಮಕ್ಕಳಿರಲಿ, ಯುವಕರಿರಲಿ, ಮುದುಕರಿರಲಿ ಯಾರ ಬಗ್ಗೆ ಬರೆದರೂ ಕೂಡ ವೈಚಾರಿಕ ಎಲ್ಲೆಯನ್ನು ಮೀರಿದವರಲ್ಲ. ಇಂತಹ ವೈಚಾರಿಕ ಸಂಘರ್ಷಗಳ ಮಧ್ಯೆಯು ಕುವೆಂಪು ಒಮ್ಮೊಮ್ಮೆ ಯಾವುದೇ ನೀತಿ ಅಥವಾ ತತ್ವದ ಬಲವಂತದ ಹೇರಿಕೆಯನ್ನು ಮಕ್ಕಳ ಎಳೆ ಮನಸ್ಸಿನ ಮೇಲೆ ಹೇರುವ ಪ್ರಯತ್ನವನ್ನು ಎಷ್ಟೋ ಬಾರಿ ಮಾಡದೇ ಕೇವಲ ಮಕ್ಕಳಿಗೆ ಮುದ ನೀಡುವ ಅಥವಾ ಖುಷಿ ಕೊಡುವ ಅಪ್ಪಟ ಕಾವ್ಯವನ್ನು ರಚಿಸಿಬಿಡುತ್ತಾರೆ. 'ಕಾಮನಬಿಲ್ಲು ಕಮಾನು ಕಟ್ಟಿದೆ" ಎನ್ನುವ ಪದ್ಯ ಇದಕ್ಕೆ ನಿದರ್ಶನ.

"ಕಾಮನಬಿಲ್ಲು ಕಮಾನು ಕಟ್ಟಿದೆ
ಮೋಡದ ನಾಡಿನ ಬಾಗಿಲಿಗೆ!

ಬಣ್ಣಗಳೇಳನು ತೋರಣ ಮಾಡಿದೆ;
ಕಂದನ ಕಣ್ಣಿಗೆ ಚಂದವನೂಡಿದೆ

ಹಣ್ಣಿನ ಹೂವಿನ ಹೊನ್ನನು ಕೂಡಿದೆ;
ಮಕ್ಕಳಿಗೋಕುಳಿಯಾಟವನಾಡಿದೆ.

ತೆಂಗಿನ ತೋಟದ ಬುಡದಲಿ ಮೂಡಿದೆ
ಭೂಮಿಗೆ ಬಾನಿಗೆ ಸೇತುವೆ ಹೂಡಿದೆ.

ಕಾಮನ ಬಿಲ್ಲು ಕಮಾನು ಕಟ್ಟಿದೆ.
ಮೋಡದ ನಾಡಿನ ಬಾಗಿಲಿಗೆ![೪೨]

ಕುವೆಂಪುರವರ ಈ ಕಾವ್ಯ ಬಣ್ಣ, ಹೂವು, ತೋಟ, ಭೂಮಿ, ಕಾಮನಬಿಲ್ಲು ಇವುಗಳ ಅಂದ-ಚೆಂದದ ಮಧ್ಯೆ ಮಕ್ಕಳ ಮನಸ್ಸನ್ನು ಹಿಡಿದು ಸುತ್ತಿಸುವ ಪ್ರಯತ್ನವನ್ನು ಮಾಡುತ್ತದೆ. ಕನ್ನಡ ಮಕ್ಕಳ ಕಾವ್ಯದ ಹಲವು ಸಂದರ್ಭಗಳಲ್ಲಿ ಕುವೆಂಪುರವರ "ಕಾಮನಬಿಲ್ಲು ಕಮಾನು ಕಟ್ಟಿದೆ" ಪದ್ಯ ಸರಳವಾಗಿ ಮಕ್ಕಳ ಮನದೊಳಗೆ ನಿಲ್ಲುವ ಛಾತಿಯನ್ನು ಹೊಂದಿದೆ.

ಕನ್ನಡ ಸಾಹಿತ್ಯದಲ್ಲಿ ಆನಂದಕಂದ ಎಂಬ ಕಾವ್ಯನಾಮದಿಂದ ಸುಪ್ರಸಿದ್ಧರಾದ ಸಿದ್ಧಯ್ಯ ಪುರಾಣಿಕರು ತಮ್ಮನ್ನು ತಾವು ಗಂಭೀರವಾಗಿಯೇ ತೊಡಗಿಸಿಕೊಂಡರು. 'ಗಿಲ್ ಗಿಲ್ ಗಿಲಗಚ್ಚಿ', 'ಪುಟ್ಟಾ ರೊಟ್ಟಿ ಗೇಗೇ', 'ತಿರುಗೆಲೆ ತಿರುಗೆಲೆ ತಿರುಗುಯ್ಯಾಲೆ' ಕವನ ಸಂಕಲನಗಳನ್ನು ಮಕ್ಕಳಿಗಾಗಿ ಪುರಾಣಿಕರು ರಚಿಸಿದ್ದಾರೆ.

'ನ್ಯಾಯ ನಿರ್ಣಯ' ಎನ್ನುವ ಮಕ್ಕಳ ನಾಟಕ ಪುರಾಣಿಕರ ಪ್ರಸಿದ್ಧ ನಾಟಕ ಕೃತಿ. ಕಾವ್ಯಾನಂದರ ಮಕ್ಕಳ ಕಾವ್ಯ ಪ್ರೀತಿ ಅದೆಷ್ಟು ಅಮೋಘವಾಗಿತ್ತೆಂದರೆ ೧೯೫೦ರಲ್ಲಿ ಭೀಮಸೇನ ರಾಯರು ರೂಪಿಸುತ್ತಿದ್ದ ಸತ್ಯಾಶ್ರಯ ಪಠ್ಯಪುಸ್ತಕ ಮಾಲೆ ಕೃತಿಗೆ ಒಂದೆರಡು ಕಾವ್ಯಗಳನ್ನು ಬರೆದುಕೊಡಿ ಎಂದು ಕೇಳಿದೊಡನೆ ಪುರಾಣಿಕರು ಬರೆದುಕೊಟ್ಟರು. ಎರಡೂ ಅದ್ಭುತ ಪದ್ಯಗಳೇ. 'ಅಜ್ಜನ ಕೋಲಿದು ನನ್ನಯ ಕುದುರೆ' ಮತ್ತು 'ಕರಡಿಯ ಕುಣಿತ'. ಮಕ್ಕಳ ಕುರಿತಾಗಿ ಅತೀವ ಕಾಳಜಿವಹಿಸುತ್ತಿದ್ದ ಪುರಾಣಿಕರು ಮಕ್ಕಳ ಮನೋವಿಕಾಸಕ್ಕಾಗಿ ಸಾಹಿತ್ಯ ಕೃಷಿಗೆ ತೊಡಗಿಕೊಂಡವರು. ಕನ್ನಡ ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ಸಿದ್ಧಯ್ಯ ಪುರಾಣಿಕರ 'ಕರಡಿಯ ತಕತಕ ಕುಣಿಸುತ ಬಂದನು. ಸಿಧ್ಧಿಧ್ಧಿ ಬಾವ ಬಾಲರ ಜೀವ, ಬಾವ ಬಾವ ಬಾಲರ ಜೀವ' ಎನ್ನುವ ಸಾಲುಗಳನ್ನು ಮಕ್ಕಳೆಂದೂ ಮರೆಯಲು ಸಾಧ್ಯವಿಲ್ಲ. ಮಾನವ ಜೀವನದ ನಿತ್ಯ ಘಟನೆಗಳ ಬೇರೆ ಬೇರೆ ಬಗೆಯ ಜೈವಿಕ ಬೆಳವಣಿಗೆಗಳನ್ನು ಸಾಧಿಸಿ ತೋರಿಸಿದ ಪುರಾಣಿಕರ ಕಾವ್ಯಾನುಸಂಧಾನ ಅಮೋಘವಾದುದು. ಆಧುನಿಕ ಈ ಹೊತ್ತಿನ ಸಂದರ್ಭದಲ್ಲಿ ಪ್ರಾಣಿ ದಯಾ ಸಂಘಗಳು ನಿರ್ಮಾಣಗೊಂಡು ಸರ್ಕಾರಗಳ ವತಿಯಿಂದ ಯಾವುದೇ ಪ್ರಾಣಿಗಳನ್ನು ಮನರಂಜನೆಗಾಗಿ ಅಥವಾ ದುಡಿಮೆಗಾಗಿ ಬಳಸಿಕೊಳ್ಳಬಾರದೆಂಬ ನೀತಿಯಿಂದ ಸರ್ಕಸ್ಸು ಮತ್ತು ಮಠಗಳನ್ನು ಹೊರತುಪಡಿಸಿ ರೂಪಿತಗೊಂಡ ಈ ಕಾನೂನು ಕರಡಿ ಆಡಿಸುವ ತಳಸಮುದಾಯಗಳನ್ನು ನೇಪಥ್ಯಕ್ಕೆ ಸರಿಸಿಬಿಟ್ಟಿದೆ. ವಾಸ್ತವವಾಗಿ ಪ್ರಾಣಿದಯೆ ಎನ್ನುವ ಪರಿಕಲ್ಪನೆಯೇ ಭಿನ್ನವಾದುದು. ಬಹುಶಃ ಇಂಥ ಕಾನೂನಿನ ಅವಜ್ಞ ಮನಸ್ಥಿತಿ ಎಷ್ಟೋ ಬಾರಿ ಮಕ್ಕಳ ಮಾನಸಿಕ ವಿಕಸನಕ್ಕೆ ಅಡ್ಡಿ ಉಂಟು ಮಾಡುತ್ತವೆ. ಈ ಸ್ಥಿತಿ

ಮುಂದುವರೆದು ಬೇರೆ ಬೇರೆ ಬಗೆಯ ಪ್ರಾಣಿ-ಪಕ್ಷಿ ಸಂಕುಲಗಳನ್ನು ಕೇವಲ ಚಿತ್ರಪಟಗಳಲ್ಲಿ ಮಾತ್ರ ನೋಡುವ ಸ್ಥಿತಿ ನಿರ್ಮಾಣವಾಗಿ ಬಿಟ್ಟಿದೆ. ಈ ಚರ್ಚೆ ಬೇರೆ.

ಸಾಮಾನ್ಯವಾಗಿ ಪುರಾಣಿಕರು ಮನುಷ್ಯ ಬದುಕಿನೊಡನೆ ಇತರೆ ಜೀವಿಗಳನ್ನು ಸಮೀಕರಿಸುವ ಗಂಭೀರ ಪ್ರಯತ್ನವನ್ನು ಮಕ್ಕಳ ಸಾಹಿತ್ಯ ರಚನೆಯ ಸಂದರ್ಭದಲ್ಲಿ ಮಾಡಿದ್ದಾರೆ. ಪುರಾಣಿಕರ ಮಕ್ಕಳ ಕಾವ್ಯ 'ನನ್ನ ಕುದುರೆ' ಇದಕ್ಕೊಂದು ಉತ್ತಮ ಉದಾಹರಣೆಯಾಗಿದೆ.

"ಅಜ್ಜನ ಕೋಲಿದು ನನ್ನಯ ಕುದುರೆ
ಹೆಜ್ಜೆಗೆ ಹೆಜ್ಜೆಗೆ ಕುಣಿಯುವ ಕುದುರೆ

ಕಾಲಿಲ್ಲದೆಯೇ ನಡೆಯುವ ಕುದುರೆ
ಕೂಳಿಲ್ಲದೆಯೇ ಬದುಕುವ ಕುದುರೆ
ನಾಲನು ಬಡಿಸದ ಜೂಲವ ಹೊದಿಸದ
ಲಾಲನೆ ಪಾಲನೆ ಬಯಸದ ಕುದುರೆ
ಅಜ್ಜನ ಕೋಲಿದು ನನ್ನಯ ಕುದುರೆ

ಚಂದಪ್ಪನಿಗೆ ಚಿಗರೆಯ ಕುದುರೆ
ಮಾದೇವನಿಗೆ ನಂದಿಯ ಕುದುರೆ
ರಾಮಚಂದ್ರನಿಗೆ ನಂದಿಯ ಕುದುರೆ
ರಾಮಚಂದ್ರನಿಗೆ ಹನುಮನೆ ಕುದುರೆ
ಹೊಟ್ಟೆಯ ಗಣಪಗೆ ಇಲಿಯೇ ಕುದುರೆ
ಅಜ್ಜನ ಕೋಲಿದು ನನ್ನಯ ಕುದುರೆ

ನಿಂತರೆ ನಿಲ್ಲುವ ಒಳ್ಳೆಯ ಕುದುರೆ
ಓಡಿದರೋಡುವ ನನ್ನಿಯ ಕುದುರೆ
ಕಾಡದ ಬೇಡದ ಕರುಳಿನ ಕುದುರೆ
ನೋಡಲು ಬಿಡದಿಹ ಬೆತ್ತದ ಕುದುರೆ
ಅಜ್ಜನ ಕೋಲಿದು ನನ್ನಯ ಕುದುರೆ

ಅರಬರ ದೇಶದಿ ದೊರೆಯದ ಕುದುರೆ
ಕಾಠೇವಾಡದಿ ಕಾಣದ ಕುದುರೆ
ಅರಸು ಮಕ್ಕಳಿಗೂ ಸಿಕ್ಕದ ಕುದುರೆ
ನನಗೇ ಸಿಕ್ಕಿದೆ ನನ್ನೀ ಕುದುರೆ
ಅಜ್ಜನ ಕೋಲಿದು ನನ್ನಯ ಕುದುರೆ"[೪೪]

ಅಜ್ಜ-ಅಜ್ಜಿ ಕುಟುಂಬದ ಹಿರಿಯ ಎರಡು ಕಣ್ಣುಗಳು. ಅವರನ್ನು ಪಡೆಯದ ಮಕ್ಕಳೆಂದು ಮಾನಸಿಕ, ಬೌದ್ಧಿಕ ವಿಕಸನಗಳಿಗೆ ಒಳಗಾಗರು. ಕೌಟುಂಬಿಕ ಪರಿಸರದಲ್ಲಿ ಅಜ್ಜ-ಅಜ್ಜಿ ಹೇಳುವ

ಕಥೆ ಕಾವ್ಯಗಳಿಂದಲೇ ಮಾನಸಿಕ, ಬೌದ್ಧಿಕ ವಿಕಾಸಕ್ಕೊಳಗಾಗಿ ಮಹತ್ವದ ಸಾಧನೆಗಳನ್ನು ಮಾಡಿದ ಹಿಂದಿನ ಪರಂಪರೆ ಇದಕ್ಕೊಂದು ನಿದರ್ಶನ. ಈ ಬಗೆಯ ಪ್ರಜ್ಞೆ ಪುರಾಣಿಕರಲ್ಲಿ ನಿರಂತರವಾಗಿ ಪ್ರವಹಿಸುತ್ತಿದ್ದ ಕಾರಣಕ್ಕಾಗಿಯೇ ಇಂತಹ ಕಾವ್ಯವೊಂದನ್ನು ಕಟ್ಟಿಕೊಡುತ್ತಾರೆ. ಸಾಮಾನ್ಯವಾಗಿ ಮಕ್ಕಳು ಕಟ್ಟಿಗೆಯನ್ನು ನಾನಾ ಬಗೆಯಲ್ಲಿ ಉಪಯೋಗಿಸುತ್ತಿದ್ದರೂ ಎರಡು ಕಾಲ ಸಂಧಿಯಲ್ಲಿ ಅದನ್ನೊಂದು ಹೊತ್ತು ಸಾಗುವ ಬೇರೆ ಬೇರೆ ಬಗೆಯ ಸಾಧನಗಳಿಗೆ ಹೋಲಿಸಿಕೊಳ್ಳುತ್ತಾರೆ. ಆಧುನಿಕ ಸಂದರ್ಭದಲ್ಲಿ ಆ ಕೋಲು ಜೀಪು, ಕಾರು, ಬಸ್ಸು, ಬೈಕುಗಳಾದರೆ ಹಿಂದೆ ಅದು ಒಂಟೆ, ಕುದುರೆ, ಆನೆ, ಎಮ್ಮೆ, ಕೋಣಗಳಾಗಿರುತ್ತಿದ್ದವು. ಯಾಂತ್ರಿಕ ಯುಗದ ಆವಿಷ್ಕಾರಗಳಿಗಿಂತಲೂ ಜೀವಸಂಬಂಧಿ ಚಿಂತನೆಗಳೇ ಶ್ರೇಷ್ಠ ಎಂಬುದು ಪುರಾಣಿಕರ ಈ ಕಾವ್ಯ ಸಾಬೀತುಪಡಿಸುತ್ತದೆ. ಅಜ್ಜನ ಕೋಲನ್ನೇ ಕುದುರೆಯನ್ನಾಗಿ ಮಾಡಿಕೊಳ್ಳುವ ಪುಟ್ಟ ಬಾಲಕ ಆ ದೇಸಿ ಕುದುರೆಯ ಶ್ರೇಷ್ಠತೆಯನ್ನು ಅರಬರ ದೇಶ ಕಾಠೇವಾಡದ ಅರಸು ಮಕ್ಕಳಿಗೆ ಸಿಗದ ಶ್ರೇಷ್ಠ ಕುದುರೆ ಎಂದು ಹೆಮ್ಮೆಯಿಂದ ಹೇಳಿಕೊಳ್ಳುವ ಮೂಲಕ ಕುಟುಂಬದ ಹಿರಿಯ ಜೀವಿಗಳ ಶ್ರೇಷ್ಠತೆಯನ್ನು ಸಾರಿಬಿಡುತ್ತಾರೆ.

ಕನ್ನಡ ಮಕ್ಕಳ ಸಾಹಿತ್ಯದ ಚರಿತ್ರೆಯನ್ನು ನಿರ್ಮಿಸುವಾಗ ಶಿವರಾಮ ಕಾರಂತರ ಹೆಸರನ್ನು ಮರೆಯುವ ಹಾಗಿಲ್ಲ. ಬಹುಮುಖಿ ಪ್ರತಿಭೆಯ ಕಾರಂತರು ಮಕ್ಕಳಿಗಾಗಿ 'ಬಾಲ ಪ್ರಪಂಚ' ಎನ್ನುವ ಮೂರು ಸಂಪುಟಗಳನ್ನು ಹೊರತಂದಿದ್ದಾರೆ. ವಿಶೇಷವಾಗಿ ಈ ಸಂಪುಟಗಳಿಗೆ ಕಿರಿಯರ ವಿಶ್ವಕೋಶ ಎಂದೇ ಕರೆಯಲಾಗುತ್ತಿದೆ. ಕಾರಂತರು ಪಠ್ಯಪುಸ್ತಕಗಳಿಗೆ ಉಪಯುಕ್ತವಾಗುವ ಹಲವು ಕೃತಿಗಳನ್ನು ರಚಿಸಿದ್ದಾರೆ. ಚಿತ್ರಕಲಾ ಮಾಲೆಯ ಮೂಲಕ ಮಕ್ಕಳ ಸಾಹಿತ್ಯಕ್ಕೆ ಅಭೂತಪೂರ್ವ ಕೊಡುಗೆಯನ್ನು ಕಾರಂತರು ನೀಡಿದ್ದಾರೆ. ಮಂಗನ ಮದುವೆ, ಮೀಸೆಯ ನಂಟು, ಹುಲಿರಾಯ, ಗಜರಾಜ, ಸೂರ್ಯ-ಚಂದ್ರ, ಭೂತಾರಾಧನೆ ಮುಂತಾದ ೨೫ಕ್ಕೂ ಕೃತಿಗಳನ್ನು ಮಕ್ಕಳಿಗಾಗಿ ರಚಿಸಿದ ಕೀರ್ತಿ ಕಾರಂತರದು. ಕಾರಂತರು ಹಿರಿಯರಿಗಾಗಿ ಹಲವು ವೈಶಿಷ್ಟ್ಯಪೂರ್ಣ ಕೃತಿಗಳನ್ನು ರಚಿಸಿದ್ದರೂ, ಅವರ ಮಾನಸಿಕ ಒಳತೋಟಿ ಮಕ್ಕಳಿಗಾಗಿಯು ನಿರಂತರ ಮಿಡಿಯುತ್ತಿತ್ತು. ಮಕ್ಕಳಿಗಾಗಿ ಒಂದು ಸಂಸ್ಥೆ ಮಾಡಬೇಕಾಗಿದ್ದ ಕೆಲಸವನ್ನು ಕಾರಂತ ಎನ್ನುವ ಏಕವ್ಯಕ್ತಿ ಮಾಡಿ ಮುಗಿಸಿದ. ಅವರು 'ಅದ್ಭುತ ಜಗತ್ತು' ಎನ್ನುವ ವಿಜ್ಞಾನ ಸಂಪುಟವನ್ನು ಹೊರತಂದು ಮಕ್ಕಳ ಸಾಹಿತ್ಯ ಕ್ಷೇತ್ರಕ್ಕೆ ಅಭೂತಪೂರ್ವ ಕೊಡುಗೆಯನ್ನು ನೀಡಿದರು. ಕಾರಂತರು ಮಕ್ಕಳ ಮನೋವೈಜ್ಞಾನಿಕ, ಮನೋಸಾಮಾಜಿಕ, ಮನೋಚಿಂತನಾತ್ಮಕ ನೆಲೆಯ ಸಾಹಿತ್ಯ ಕೃಷಿಗೆ ತಮ್ಮನ್ನು ತಾವು ತೊಡಗಿಸಿಕೊಂಡವರು. ಪ್ರಯೋಗಶೀಲ ಗುಣವನ್ನು ಹೊಂದಿದ್ದ ಕಾರಂತರ ಮಾನಸಿಕ ಅಭೀಪ್ಸೆ ನಿರಂತರ ಮಕ್ಕಳ ವೈಚಾರಿಕ, ವೈಜ್ಞಾನಿಕ, ಮಾನಸಿಕ ವಿಕಸನಕ್ಕಾಗಿ ತುಡಿಯುತ್ತಿತ್ತು. ಹಾಗಾಗಿ ಕಾರಂತರು ಮಕ್ಕಳಿಗಾಗಿ ಬರೆದ ಹಲವು ಕೃತಿಗಳು ಈ ನೆಲೆಯ ಆವಿಷ್ಕಾರಗಳನ್ನು ಒಳಗೊಂಡಿದೆ. ಕನ್ನಡ ಮಕ್ಕಳ ಸಾಹಿತ್ಯಿಕ ಜಗತ್ತು ಯಾವುದೇ ಬಗೆಯ ಪ್ರಾಯೋಗಿಕ ತೀರ್ಮಾನಕ್ಕಿಳಿದಿದ್ದರೂ ಅದರಲ್ಲಿ ಕುವೆಂಪು ಮತ್ತು

ಕಾರಂತರ ಸೈದ್ಧಾಂತಿಕ ದೃಷ್ಟಿಕೋನ ಭಿನ್ನವೆನಿಸುತ್ತದೆ. ಇದರರ್ಥ ಕುವೆಂಪು ಮತ್ತು ಕಾರಂತರು ಮಕ್ಕಳಿಗೆಂದೇ ವಿಶೇಷ ವೈಚಾರಿಕ, ವೈಜ್ಞಾನಿಕ ಅನುಸಂಧಾನತೆಯ ಜಗತ್ತನ್ನು ನಿರ್ಮಿಸಲು ಅನವರತ ಪ್ರಯತ್ನಿಸಿದರು. ಇದಕ್ಕೆ ಒಂದು ನಿದರ್ಶನ ಅವರ 'ತಾಳೆಗುಬ್ಬಿ' ಪದ್ಯ.

"ತಾಳೆ ಮರದ ಸೋಗೆಗೆಲ್ಲ
ಶ್ರುತಿಯು ಬುರುಡೆಯು!
ಗಾಳಿ ಬೀಸಿ ಹಾಯುವಾಗ
ದನಿಯು ಕೊಡುತಿದೆ

ಯಾವ ಹಾವುಗಾರ ಇದನು
ಕಟ್ಟಿ ಹೋದನು?
ಹಾವು ಇರುವ ಬುಟ್ಟಿಯನ್ನು
ಎಲ್ಲಿ ಒಯ್ದನು?

'ಹಾವು ಬರಲಿ ಹಾವು ಬರಲಿ'
ಎಂದು ಕರೆದರೆ,
'ನಾವು ಇಲ್ಲಿ, ನಾವು ಇಲ್ಲಿ
ಎಂದು ಬಂದುವು.

ಹಾವ ಬದಲು ತಾಳೆಗುಬ್ಬಿ
ಹೊರಕೆ ಬಂದುವು!
'ನಾವು ಇಲ್ಲಿ ವಾಸವಿಹೆವು'
ಎಂದು ನುಡಿದವು.

'ಹಾವನೇಕೆ ಕರೆಯುತೀರಿ
ಬೇಡ ಬೇಡವು!
ಅದರ ಕಾಟ ತಪ್ಪಿಸಲಿಕೆ ಇಲ್ಲಿ ಬಂದೆವು."[೪೫]

ಈ ಕಾವ್ಯ ಬ್ರಿಟಿಷ್ ವಸಾಹತುಶಾಹಿ ವಿರೋಧಿ ಧೋರಣೆಯನ್ನು ಮಕ್ಕಳ ಮನಸ್ಸಿನೊಳಗೆ ಬಿತ್ತುವ ಪ್ರಯತ್ನವನ್ನು ಮಾಡಿತು. ಕನ್ನಡ ಮಕ್ಕಳ ಕಾವ್ಯದ ವೈಚಾರಿಕ ಜಗತ್ತಿನ ಹಲವು ಕವಿಗಳು ಹಾವನ್ನು ಸಾಂಕೇತಿಕವಾಗಿ ಬಳಸಿಕೊಂಡಂತೆ ಕಾರಂತರು ತಮ್ಮ ಈ ಕಾವ್ಯದಲ್ಲಿ ಅದೇ ಹಾವನ್ನು ಸಾಂಕೇತಿಕವಾಗಿ ಬಳಸಿಕೊಳ್ಳುತ್ತಾರೆ. ಇಲ್ಲಿ ಉಲ್ಲೇಖಗೊಳ್ಳುವ ತಾಳೇಮರದ ಸೋಗೆ ಗುಬ್ಬಿ, ಗುಬ್ಬಿಯ ಬುಟ್ಟಿ, ಅವುಗಳ ವಾಸ ಇವೆಲ್ಲವೂ ದೇಶಿ ನೆಲೆಯ ಚಿಂತನೆಗಳಾದರೆ ಹಾವು, ಗಾಳಿ, ಬ್ರಿಟಿಷ್ ವಸಾಹತುಶಾಹಿ ಶೋಷಣೆಯ ಮೂರ್ತ ರೂಪಕಗಳಾಗಿವೆ. ಕಾರಂತರು ಈ ಪದ್ಯದಲ್ಲಿ ಗುಬ್ಬಿಗಳ ವಾಸವನ್ನು ಭಾರತೀಯರ ವಾಸಸ್ಥಳಕ್ಕೆ ಹೋಲಿಸಿ ಅವುಗಳ ಮೇಲೆ

ನಡೆಯುವ ಹಾವಿನ ದಾಳಿಯನ್ನು ವಸಾಹತುಶಾಹಿ ವ್ಯವಸ್ಥೆಯ ದಾಳಿಗೆ, ಸಮೀಕರಿಸುವ ಪ್ರಯತ್ನವನ್ನು ಪ್ರಸ್ತುತ ಪದ್ಯದಲ್ಲಿ ಮಾಡಿದ್ದಾರೆ. ಹಾಗಾಗಿ ಹಾವನೇಕೆ ಕರೆಯುತೀರಿ ಬೇಡ ಬೇಡವೋ, ಅದರ ಕಾಟ ತಪ್ಪಿಸಲಿಕ್ಕೆ ಇಲ್ಲಿ ಬಂದೆವು" ಎಂದು ಬರೆಯುತ್ತಾರೆ. ಬ್ರಿಟಿಷರ ಸಾಮ್ರಾಜ್ಯ ವಿಸ್ತರಣೆಯ ಧೋರಣೆಯನ್ನು, ಭಾರತೀಯರನ್ನು ಗುಬ್ಬಿಗಳೆಂದು ಸಮೀಕರಿಸುವ ಕಾರಂತರು ಅವರು ವಾಸಿಸುವ ಪ್ರದೇಶವನ್ನು ಇದು ನಮ್ಮ ವಾಸಸ್ಥಳ ಎನ್ನುವ ಮೂಲಕ ಆ ವಾಸಸ್ಥಳಗಳನ್ನು ಆಕ್ರಮಿಸಿಕೊಳ್ಳಲು ಯತ್ನಿಸಿದ ಪರಕೀಯರ ದಾಳಿಯ ವಿರುದ್ಧ ಮಕ್ಕಳೊಳಗೆ ಒಂದು ವಸಾಹತು ವಿರೋಧಿ ನೀತಿಯ ಧೋರಣೆಯನ್ನು ಬಿತ್ತುವ ಪ್ರಯತ್ನವನ್ನು ಮಾಡುತ್ತಾರೆ.

ಭಾರತೀಯ ಮಕ್ಕಳ ಸಾಹಿತ್ಯಿಕ ಸಂದರ್ಭದಲ್ಲಿ 'ಚಂದ್ರ' ಕುತೂಹಲದ ಕೇಂದ್ರಬಿಂದು. ರಾತ್ರಿಯ ನೀರವತೆಯಲ್ಲಿ ಬೆಳ್ಳನೆ ಹಾಲ ಬೆಳಕನ್ನು ಚೆಲ್ಲುವ ಚಂದಿರನ ಕುರಿತು ಕಾವ್ಯ ರಚಿಸದೇ ಇರುವ ಮಕ್ಕಳ ಸಾಹಿತಿಗಳೇ ಇಲ್ಲ ಎನ್ನುವಷ್ಟು ವಿರಳ. ಕಾರಂತರು ಮಕ್ಕಳಿಗಾಗಿ 'ಹುಣ್ಣಿಮೆ ಹಪ್ಪಳ' ಎನ್ನುವ ಚಂದ್ರನ ಕುರಿತ ಪದ್ಯವನ್ನು ರಚಿಸಿದ್ದಾರೆ. ಇದು ವೈಚಾರಿಕ ತಳಹದಿಯ ಕಾವ್ಯವಂತು ಖಂಡಿತ ಅಲ್ಲ. ಪುಟ್ಟ ಮಗುವೊಬ್ಬನ ಮಾನಸಿಕ ಸ್ಥರಕ್ಕಿಳಿಯುವ ಕಾರಂತರು ಚಂದ್ರನನ್ನು ಅಜ್ಜ ತಿನ್ನದೇ ಸುಟ್ಟು ಆಕಾಶಕ್ಕೆಸೆದ ಹಪ್ಪಳವೇ ಚಂದ್ರ ಎಂದು ಮಗುವಿನ ಮನೋಕಲ್ಪನೆಗಳ ಹಿನ್ನೆಲೆಯಲ್ಲಿ ನಿರ್ವಚಿಸಿದ್ದಾರೆ.

"ಅಜ್ಜನು ಎರಡು ಹಪ್ಪಳ ಸುಟ್ಟ
ತಿನ್ನುವುದೊಂದನು ಕಂಡನು ಕಿಟ್ಟ
ಕಂಡನು; ಕಂಡವ ಹಲ್ಲನು ಬಿಟ್ಟ
ಅಜ್ಜಗೆ ಬಂದಿತು ಸಿಟ್ಟಿನ ಬೆಟ್ಟ
ಕದ್ದೂ ತಿಂದಿಹ ಸಿಟ್ಟಿಗೆ ಕಿಟ್ಟ

'ನೀ ಮುದಿ ಹದ್ದು!' ಅಂದೇ ಬಿಟ್ಟ
ಅಜ್ಜನು ಆಗಲೆ ಸಿಟ್ಟಿನಿಂದ
ಹಪ್ಪಳ ಎಸೆಯುತ 'ಹಿಡೀ' ಅಂದ.

ಕಿಟ್ಟು ಕೈಯಲಿ ಇತ್ತೊಂದು ಚೆಂಡು
ಮೇಣದ ಚಂಡಲಿ ಹೊಡೆದನು ಗುಂಡು
ಹಪ್ಪಳ ಗುಂಡು ಒಟ್ಟೊಟ್ಟಾಯಿತು
ಬೇಗದಿ ಹೋಗಿ ಬಾನಿಗೆ ಅಂಟಿತು.

ಹಪ್ಪಳ ಅಂಟುತ ಚಂದ್ರನು ಆದ
ಅಜ್ಜಗು ಕಿಟ್ಟಗು ಸಿಕ್ಕದೇ ಹೋದ
ಹುಣ್ಣಿಮೆ ಹಪ್ಪಳ ಕಂಡವರೆಲ್ಲ
ಬಾಯ್ಬಾಯ್ ಬಿಡುವರು, ಸಿಕ್ಕದಲ್ಲ."೪೬

ಕನ್ನಡ ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ಜೀವನ ಪರ್ಯಂತ ಮಕ್ಕಳ ಸಾಹಿತ್ಯ ರಚಿಸಿದ ಪಳಕಳ ಸೀತರಾಮಭಟ್ಟರ ಮಕ್ಕಳ ಸಾಹಿತ್ಯಿಕ ಸೇವೆ ಅಮೋಘವಾದುದು. ೫೯ ಮಕ್ಕಳ ಕಥಾಸಂಗ್ರಹ, ೩೫ ಮಕ್ಕಳ ಕವನ ಸಂಗ್ರಹ, ೨೪ ಮಕ್ಕಳ ನಾಟಕಗಳು, ೬ ಮಕ್ಕಳ ಕಿರುಕಾದಂಬರಿಗಳು, ಜೀವನ ಚರಿತ್ರೆ, ಮಕ್ಕಳ ಪ್ರಬಂಧ ಒಳಗೊಂಡಂತೆ ಮಕ್ಕಳಿಗಾಗಿ ರಚಿಸಿದ ಒಟ್ಟು ಕೃತಿಗಳು ೧೨೪. ಪ್ರೌಢಶಾಲೆಯ ಶಿಕ್ಷಕರಾದ ಸೀತರಾಮಭಟ್ಟರು ಗ್ರಾಮೀಣ ಸೊಗಡಿನ ಮಕ್ಕಳ ಕವಿತೆ ಕಥೆಗಳಲ್ಲಿ ಶಿಸ್ತು, ದೇಶಪ್ರೇಮ, ಮಾನವೀಯ ಮೌಲ್ಯಗಳನ್ನು ಸ್ಥಾಯಿಭಾವಗಳಾಗಿಟ್ಟುಕೊಂಡು ಸಾಹಿತ್ಯ ಕೃಷಿಯಲ್ಲಿ ತೊಡಗಿಕೊಂಡವರು. ಇವರದು ಸರಳ, ಸುಂದರ ಗೇಯ ಶೈಲಿ. ಭಟ್ಟರ ಮಕ್ಕಳ ಸಾಹಿತ್ಯಿಕ ಸೇವೆಯನ್ನು ಸ್ಮರಿಸುತ್ತ ರಾಧೆಯ ತೊಳ್ಪಾಡಿಯವರ ಕವನ ಸಂಕಲನ 'ಹಲೋ ಹಲೋ ಚಂದಮಾಮ' ಕೃತಿಯ ಬೆನ್ನುಡಿಯಲ್ಲಿ ಎಚ್.ಎಸ್. ಲಕ್ಷ್ಮೀನಾರಾಯಣಭಟ್ಟರು ಪಳಕಳ ಸೀತಾರಮಭಟ್ಟರ ಮಕ್ಕಳ ಸಾಹಿತ್ಯಿಕ ಸೇವೆಯನ್ನು ಕುರಿತು ಈ ಬಗೆಯ ಶೈಲಿಯಲ್ಲಿ ಮಕ್ಕಳ ಕವನಗಳನ್ನು ರಚಿಸಿದ ಮತ್ತೊಬ್ಬ ಸಿಗುವುದು ವಿರಳ ಎಂದು ನಮೂದಿಸಿದ್ದಾರೆ. ಅಂತಹ ಅಮೋಘ ಶೈಲಿ ಸೀತರಾಮಭಟ್ಟರದು. ಒಗಟು ಒಡಪಿನ ಶೈಲಿಯಲ್ಲಿ ಕುತೂಹಲಭರಿತ ಕಾವ್ಯಗಳನ್ನು ರಚಿಸುವಲ್ಲಿ ಸೀತರಾಮಭಟ್ಟರದು ಎತ್ತಿದ ಕೈ. 'ನಾನು ಯಾರು' ಎಂಬ ಈ ಶೈಲಿಯ ಪದ್ಯವನ್ನು ಇಲ್ಲಿ ಹೆಸರಿಸಬಹುದು.

"ಚಿಕ್ ಚಿಕ್ ಚಿವ್ ಚಿವ್"
ಎಂದುಕೊಂಡು ಮರಗಳಲ್ಲಿ
ಅತ್ತ ಇತ್ತ ಓಡುತಿರುವೆ
ನಾನು ಯಾರು?
ಹಣ್ಣು ಕಾಯಿ ಬೀಜ ಗೊರಟು
ದವಸಧಾನ್ಯವೆಲ್ಲವನ್ನು
ತಿಂದುಕೊಂಡು ಹೊಟ್ಟೆ ಹೊರೆವೆ
ನಾನು ಯಾರು?

ಮರದ ಚಿಕ್ಕ ಪೊಟರೆಯೊಳಗೆ
ಗೂಡುಕಟ್ಟಿ ಮರಿಗಳೊಡನೆ
ವಾಸ ಮಾಡುತಿರುವೆನಣ್ಣ
ನಾನು ಯಾರು?

ಉಣ್ಣೆಯಂತೆ ನುಣ್ಣಗಾದ
ರೋಮವಿರುವ ಬೆನ್ನ ಮೇಲೆ
ಬಿಳಿಯ ಮೂರು ಗೆರೆಗಳಿಹವು
ನಾನು ಯಾರು?"

“ಚಿಕ್ ಚಿಕ್ ಚಿವ್ ಚಿವ್
ಚಿಕ್ ಚಿಕ್ ಚಿವ್ ಚಿವ್
ಎನುವ ಪುಟ್ಟ ಹಾಡುಗಾರ
ನಾನು ಯಾರು?”[೪೭]

ಅಳಿಲೊಂದನ್ನು ಉದಾಹರಣೆಯಾಗಿಟ್ಟುಕೊಂಡು ಬಹಳ ಸುಲಭವಾಗಿ ಕಾವ್ಯವನ್ನು ಕಟ್ಟುವ ಸೀತಾರಾಮಭಟ್ಟರ ಶೈಲಿ ಆಕರ್ಷಕವಾದುದು. ಪ್ರಾರಂಭದಲ್ಲಿ ಉತ್ತರಿಸಲು ಮಗು ಹೆಣಗಿದರೂ ‘ಹುಣ್ಣೆಯಂಥ ಸುಣ್ಣಗಾದ ರೋಮವಿರುವ ಬೆನ್ನ ಮೇಲೆ ಬಿಳಿಯ ಮೂರು ಗೆರೆಗಳಿಹವು ನಾನು ಯಾರು?’ ಎಂಬ ಸಾಲುಗಳು ಬಂದೊಡನೆ ಮಗು ಗಟ್ಟಿಯಾಗಿ ಅಳಿಲು ಎಂದು ಚೀರಿ ಬಿಡಬೇಕು ಅಂಥ ಮನೋಜ್ಞ ಶೈಲಿ ಪಳಕಳ ಸೀತರಾಮಭಟ್ಟರದು. ಕರ್ನಾಟಕದ ತುಂಬಾ ಆಂಗ್ಲ ಮಾಧ್ಯಮ ಶಾಲೆಗಳೇ ವಿಜೃಂಭಿಸಿ ನಾಯಿಕೊಡೆಗಳಂತೆ ಹುಟ್ಟಿಕೊಳ್ಳುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ಮಕ್ಕಳೊಳಗೆ ಮಮ್ಮಿ ಡ್ಯಾಡಿಯಂತಹ ಇಂಗ್ಲೀಷ್ ಸಂಸ್ಕೃತಿಯ ವಿರುದ್ಧ ಅಪ್ಪ, ಅಮ್ಮ ಕನ್ನಡ ಸಂಸ್ಕೃತಿಯ ಕುರಿತು ‘ಏಕೆ ಹೇಳು?’ ಎನ್ನುವ ಅವರ ಕಾವ್ಯ ಮಗುವಿನ ಮನಸ್ಸಿನಲ್ಲಿ ನಿಲ್ಲುತ್ತದೆ.

“ಅಮ್ಮ ನನ್ನ ಮಾತು ಒಂದು
ಕಿವಿಯ ಕೊಟ್ಟು ಕೇಳು
ಏಕೆ ನಿನ್ನ ಮಮ್ಮಿ ಎಂದು
ಕರೆಯಬೇಕು ಹೇಳು?

ಅಪ್ಪನನ್ನು ಅಪ್ಪ ಎಂದು
ಎನುವ ಬದಲು ಕೇಳು
ಡ್ಯಾಡಿ ಎಂದು ಏಕೆ ಇಂದು
ಕರೆಯಬೇಕು ಹೇಳು?

ನಿನ್ನ ಮಾತು ನನ್ನ ಮಾತು
ಕನ್ನಡವಿದೆ ಕೇಳು
ಈಗ ನಮಗೆ ಬೇರೆ ಮಾತು
ಏಕೆ ಬೇಕು ಹೇಳು?

ಕನ್ನಡದಲಿ ಕಲಿವ ಇಷ್ಟ
ಉಂಟು ನನಗೆ ಕೇಳು
ಇಂಗ್ಲೀಷಿನಲ್ಲೇ ಕಲಿವ ಕಷ್ಟ
ಕೊಡುವೆ ಏಕೆ ಹೇಳು?”[೪೮]

ದಿನಕರ ದೇಸಾಯಿಯವರು ಜೀವನ ಪ್ರೀತಿಯ ಸಾಹಿತಿ, ಬದುಕನ್ನು ಗಾಢವಾಗಿ ಪ್ರೀತಿಸಿದವರು. ಸಮಾಜಮುಖಿ ವ್ಯಕ್ತಿತ್ವವನ್ನು ಹೊಂದಿದವರು. ಬಡವರ ಬಗ್ಗೆ, ದೀನ ದಲಿತರ ಬಗ್ಗೆ, ನೊಂದವರ ಬಗ್ಗೆ ಅಪಾರ ಕಾಳಜಿ ಉಳ್ಳವರು. ಗೋಪಾಲಕೃಷ್ಣ ಗೋಖಲೆಯವರು ಸ್ಥಾಪಿಸಿದ್ದ "Servents of India Society"ಯ ಅಜೀವ ಸದಸ್ಯರಾಗಿದ್ದ ದಿನಕರ ದೇಸಾಯಿಯವರು ಜನಪರ ಹೋರಾಟಗಾರರು ಆಗಿದ್ದರು. ಬಂಡಾಯ ಮನೋಭಾವದ ದಿನಕರ ದೇಸಾಯಿಯವರು ಕಾವ್ಯದ ಮೂಲಕ ಸಾಮಾಜಿಕ ಸಂಘಟನೆಗಳ ಮೂಲಕ ಹೋರಾಟದ ಕಿಚ್ಚನ್ನು ಹಚ್ಚಿದವರು. ಬಂಗಾಳಿ ಮಕ್ಕಳ ಸಾಹಿತ್ಯದಿಂದ ಪ್ರಭಾವಿತರಾಗಿದ್ದ ದೇಸಾಯಿಯವರು ನವೋದಯ ಸಾಹಿತ್ಯಿಕ ಸಂದರ್ಭದಲ್ಲಿ ಹುಟ್ಟಿ ಬಂದ ಸಮಾಜವಾದಿ ಧೋರಣೆಯನ್ನು ಪಾಲಿಸುವ ವಾಸ್ತವವಾದಿ ಯಾಗಿದ್ದರು. ದೇಸಾಯಿಯವರು ಬಾಲಿಶವಾದ ಮಕ್ಕಳ ಪದ್ಯಗಳನ್ನು ಬರೆಯದೆ ಪ್ರಯೋಗಶೀಲ ಮಕ್ಕಳ ಗೀತೆಗಳನ್ನು ರಚಿಸಿದವರು ೧೦ ವರ್ಷದ ಕೆಳಗಿನ ಮಕ್ಕಳನ್ನು ಲಕ್ಷ್ಯದಲ್ಲಿ ಇಟ್ಟುಕೊಂಡು ದಿನಕರರು ಮಕ್ಕಳ ಸಾಹಿತ್ಯ ಕೃಷಿಗೆ ತೊಡಗಿಕೊಂಡವರು. ಸಾಹಿತ್ಯಿಕ ರಚನೆಯಲ್ಲಿ ಅಲ್ಲಲ್ಲಿ ಮಕ್ಕಳಿಗೆ ಅರ್ಥವಾಗದ ಶಬ್ದಗಳನ್ನು ದಿನಕರರು ಬಳಸಿರುವುದು ಕಂಡು ಬರುತ್ತದೆ. ದಿನಕರರು ಮಕ್ಕಳ ದೃಷ್ಟಿಯಿಂದ ಮಕ್ಕಳೇ ಬರೆದಂತೆ ಕಾಣುವ ಕಾವ್ಯವನ್ನು ಹೆಚ್ಚು ರಚಿಸಿದರು. ಈ ಮಾತಿಗೆ ಉದಾಹರಣೆಯಾಗಿ ಅವರ 'ಬೆಕ್ಕು' ಮತ್ತು 'ಗಡಿಯಾರ' ಪದ್ಯಗಳನ್ನು ಹೆಸರಿಸಬಹುದು. ದಿನಕರರು ತಮ್ಮ 'ಬೆಕ್ಕು' ಕಾವ್ಯದಲ್ಲಿ;

"ಗುರು ಗುರು ಎಂದು
ನೆಗೆಯುತ ಬಂದು
ಇಲಿಯನು ಕೊಂದು ಮೆಂಟ್ ಮೆಂಟ್
ಹೆದರದ ಕಪ್ಪೆಯು ಡ್ರೊಂಯ್ ಡ್ರೊಂಯ್"[೪]

ಎಂದು ಪ್ರಾರಂಭಿಸಿ ಇಡೀ ಬೆಕ್ಕಿನ ಗುಣವನ್ನು ಮನೋಜ್ಞವಾಗಿ ಕಟ್ಟಿಕೊಡುವ ಮೂಲಕ

"ಏತರ ತಲುಬು?
ಮೀನಿನ ಎಲುಬು?
ಅದೆನೆ ನೆಕ್ಕುವೆ ಛೀ ಛೀ
ನಿನಗದು ಬಹಳೇ ಸೀಸಿ.

ಎಂದು ಬರೆಯುತ್ತ ಮಾರ್ಜಾಲ ಸ್ವಭಾವವನ್ನು ಉಲ್ಲೇಖಿಸುತ್ತಾರೆ. 'ಗಡಿಯಾರ' ಪದ್ಯ ದಿನಕರ ದೇಸಾಯಿಯವರ ವಿಶಿಷ್ಟ ರಚನೆ.

"ಗಂಟೆಯ ನೆಂಟನೆ ಓ ಗಡಿಯಾರ
ಬೆಳ್ಳಿಯ ಬಣ್ಣದ ಗೋಳಾಕಾರ
ವೇಳೆಯ ತಿಳಿಯಲು ನೀನಾಧಾರ
ಟಿಕ್ ಟಿಕ್ ಗೆಳೆಯಾ, ಟಿಕ್ ಟಿಕ್ ಟಿಕ್

ಹಗಲೂ ಇರುಳೂ ಒಂದೇ ಬಾಳು
ನೀನಾವಾಗಲು ದುಡಿಯುವ ಆಳು
ಕಿವಿಯನು ಹಿಂಡಲು ನಿನಗದು ಕೂಳು
ಟಿಕ್ ಟಿಕ್ ಗೆಳೆಯಾ, ಟಿಕ್ ಟಿಕ್ ಟಿಕ್

ಮುಖ ಒಂದಾದರು ದ್ವಾದಶ ನೇತ್ರ!
ಎರಡೇ ಕೈಗಳು ಏನು ವಿಚಿತ್ರ!
ಯಂತ್ರ ಪುರಾಣದ ರಕ್ಕಸ ಪುತ್ರ!
ಟಿಕ್ ಟಿಕ್ ಗೆಳೆಯಾ, ಟಿಕ್ ಟಿಕ್ ಟಿಕ್

ಟಿಕ್ ಟಿಕ್ ಎನ್ನುತ ಹೇಳುವೆಯೇನು?
ನಿನ್ನೀ ಮಾತಿನ ಒಳಗುಟ್ಟೇನು?
'ಕಾಲವು ನಿಲ್ಲದು' ಎನ್ನುವಿಯೇನು?
ಟಿಕ್ ಟಿಕ್ ಗೆಳೆಯಾ, ಟಿಕ್ ಟಿಕ್ ಟಿಕ್

ದುಡಿಯುವುದೊಂದೇ ನಿನ್ನಯ ಕರ್ಮ
ದುಡಿಸುವುದೊಂದೇ ನಮ್ಮಯ ಧರ್ಮ
ಇಂತಿರುವುದು ಕಲಿಯುಗದಿ ಧರ್ಮ
ಟಿಕ್ ಟಿಕ್ ಗೆಳೆಯಾ, ಟಿಕ್ ಟಿಕ್ ಟಿಕ್"[೫೦]

ಈ ಕಾವ್ಯದಲ್ಲಿ ಗಡಿಯಾರದ ಇಡೀ ಓಟವನ್ನು ಮನುಷ್ಯ ಜೀವನದೊಂದಿಗೆ ಸಮೀಕರಿಸುವ ವೈಶಿಷ್ಟ್ಯಪೂರ್ಣ ಚಿಂತನೆಯನ್ನು ಗುರುತಿಸಲು ಸಾಧ್ಯವಿದೆ. ಗಡಿಯಾರದ ಮಾತಿನಗುಟ್ಟು ಏನೆಂದು ಪ್ರಶ್ನಿಸುತ್ತಾ 'ಕಾಲವು ನಿಲ್ಲದು ಮತ್ತು ಯಾರಿಗೂ ಕಾಯದು' ಎಂಬ ಚಿಂತನೆಯನ್ನು ಈ ಕಾವ್ಯದಲ್ಲಿ ಪ್ರತಿಷ್ಠಾಪಿಸಿದ್ದಾರೆ. ದುಡಿಯುವ ಮತ್ತು ದುಡಿಸಿಕೊಳ್ಳುವ ನೀತಿಗಳು ಈ ಕಾವ್ಯದಲ್ಲಿ ಪ್ರಸ್ತಾಪಗೊಳ್ಳುತ್ತವೆ. ಇದನ್ನು ಈ ಯುಗದ 'ಧರ್ಮ' ಎಂದು ಕವಿ ಸಾರುತ್ತಾರೆ. ಮಕ್ಕಳಿಗೆ ಬೇಧ-ಭಾವಗಳ ವ್ಯತ್ಯಾಸವನ್ನು ಟಿಕ್ ಟಿಕ್ ಗಡಿಯಾರದ ಮೂಲಕ ದೇಸಾಯಿಯವರು ಮನವರಿಕೆ ಮಾಡಿಕೊಡುವ ಪ್ರಯತ್ನ ಮಾಡುತ್ತಾರೆ.

ಕನ್ನಡ ಮಕ್ಕಳ ಸಾಹಿತ್ಯದ ಸಂರಚನೆಯ ಸಂದರ್ಭದಲ್ಲಿ ಸಿಸು ಸಂಗಮೇಶರ ಹೆಸರು ಬಹಳ ದೊಡ್ಡದು. ೧೨ ಮಕ್ಕಳ ಕಥಾ ಸಂಕಲನಗಳು, ೩ ಜೀವನ ಚರಿತ್ರೆ, ೧ ಕಿರುಕಾದಂಬರಿ, ೧೧ ಮಕ್ಕಳ ಕವನ ಸಂಕಲನಗಳು, ೪ ಪ್ರೌಢ ಸಾಹಿತ್ಯದ ಕೃತಿಗಳು, ೩ ಅನುವಾದಿತ ಕೃತಿಗಳು, ೮ ಸಂಪಾದಿತ ಕೃತಿಗಳನ್ನು ಕನ್ನಡ ಮಕ್ಕಳ ಸಾಹಿತ್ಯ ಸಾರಸ್ವತ ಲೋಕಕ್ಕೆ ಸಿಸು ಸಂಗಮೇಶರು 'ಏಕಮಾದ್ವಿತೀಯ' ಎನ್ನುವಂತೆ ಮೆರೆದವರು. 'ನರಿಯ ಫಜೀತಿ', 'ಯಾರು ಜಾಣರು', 'ಮಂಕು ಮರಿ', 'ಅಲಿಯ ಒಂಟೆ', 'ಮೊಲದ ಮೂಗು ಮೊಂಡಾಯಿತು', 'ಆಸೆಬುರುಕಿ ಆಶಾ', 'ಕತೆ ಹೇಳುವೆ ಬಾ', 'ಹೇಗಿದ್ದರು ಹೇಗಾದರು ಭಾಗ-೧', 'ದಾರಿಯ

ಬುತ್ತಿ ಭಾಗ-೧', 'ಮಕ್ಕಳ ಆಯ್ದ ಕಥೆಗಳು', 'ದಾರಿಯ ಬುತ್ತಿ ಭಾಗ-೨', 'ಹೇಗಿದ್ದರು ಹೇಗಾದರು ಭಾಗ-೨' ಎನ್ನುವ ಮಕ್ಕಳ ಕಥಾ ಸಂಕಲನಗಳು, 'ಕಳ್ಳಿ ಸಿದ್ಧ' ಎಂಬ ಕಿರುಕಾದಂಬರಿ, 'ನಾವು ನಾಳೆಯ ರವಿಗಳು', 'ಚುಟುಕು-ಗುಟುಕು', 'ಸವಿಸಾಹಿತ್ಯ', 'ನನ್ನ ಕವಿತಾ ಪುಸ್ತಕ', 'ಕಾಡಿನ ಕಲಿಗಳು', 'ಚಕ್ಕಾ ಚೌಕಳಿ', 'ಸೂರ್ಯ-ಚಂದ್ರರ ನಡುವೆ', 'ಶಾಲೆಗಿಂತ ಚೀಲ ಭಾರ', 'ಅಂಗಿಯಲ್ಲಿ ತಂಗಿ', 'ಬಿದ್ದ ಚಂದಿರನ ಒದ್ದು ಓಡಿಸಿದ'. 'ಗಾಳಿ ಹೋಯ್ತು ನೀರು ಬಂತು' ಎಂಬ ಹೆಸರಿನ ಮಕ್ಕಳ ಕವನ ಸಂಕಲನಗಳು. 'ನವಸಾಕ್ಷರರಿಗಾಗಿ', 'ಜಪಾನ', 'ಹೊರನಾಡ ರೈತರು', ಪ್ರೌಢ ಸಾಹಿತ್ಯ ಕೃತಿಗಳನ್ನು, 'ಮಕ್ಕಳ ಸಾಹಿತ್ಯ ನಾನು ಕಂಡಂತೆ' ಎನ್ನುವ ಶ್ರೇಷ್ಟ ಕೃತಿಯನ್ನು, 'ಕನಸಿನ ಲೋಕ', 'ಗೋಮುಖಿ ಯಾತ್ರೆ', 'ಚತುರ ಚಾಣಾಕ್ಷ' ಅನುವಾದಿತ ಕೃತಿಗಳನ್ನು, ಪುಟ್ಟ ಚೆಂಡು ಭಾಗ ೧ ಮತ್ತು ೨, ಆಣೇಕಲ್ಲು ಭಾಗ ೧ ಮತ್ತು ೨, ನಾವು ನಮ್ಮವರು ಭಾಗ ೧ ಮತ್ತು ೨, ಕಲಬುರ್ಗಿ ಪ್ರಥಮ ಮಕ್ಕಳ ಸಾಹಿತ್ಯ ಸಮ್ಮೇಳನ ಸಂಪುಟ, ಮಕ್ಕಳ ಸಾಹಿತ್ಯ ೧೯೮೮, ಇವು ಸಿಸು ಸಂಗಮೇಶರು ಮಕ್ಕಳಿಂಗೆಂದೇ ರಚಿಸಿದ ವಿಪುಲ ಸಾಹಿತ್ಯಿಕ ಭಂಡಾರ. ಸುಲಭವಾಗಿ ಮಕ್ಕಳಿಗೆ ಅರ್ಥವಾಗುವ ಶೈಲಿ ಸಂಗಮೇಶ್ವರ ಸಾಹಿತ್ಯಿಕ ವಿಶೇಷ. ಬಹುಶಃ ಸಂಗಮೇಶರು ಮಕ್ಕಳಿಗೆಂದು ರಚಿಸಿದ ಗುಣಾತ್ಮಕ ಮತ್ತು ಸಂಖ್ಯಾತ್ಮಕ ಸಾಹಿತ್ಯ ಸೃಷ್ಟಿಗೆ ಸಮಾನವಾಗಿ ಬೇರಾರಿಂದಲೂ ರಚಿಸಲಾಗಿಲ್ಲ ಎಂದರೆ ಅತಿಶಯೋಕ್ತಿಯಾಗಲಾರದು. ಮಕ್ಕಳಿಗಾಗಿಯೇ ಸಾಹಿತ್ಯ ಸೃಷ್ಟಿಗಿಳಿದ ಸಂಗಮೇಶರವರು ತಮ್ಮ ಹೆಸರಿನೊಡನೆ 'ಶಿಶು' ಎನ್ನುವ ವಿಶೇಷಣವನ್ನು ಸೇರಿಸಿಕೊಂಡು ಮಕ್ಕಳಿಗಾಗಿಯೇ ಬರೆದ ಕವಿ ಎನಿಸಿಕೊಂಡಿದ್ದಾರೆ. ಸಾಂದರ್ಭಿಕವಾಗಿ ಅವರ ಕೆಲವು ಕಾವ್ಯಗಳ ಕುರಿತು ಚರ್ಚಿಸುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ. ಸಂಗಮೇಶರ 'ಮೊದಲು ಕೆಲಸ ಮಾಡುವೆ' ಎಂಬ ಪದ್ಯ ವಿಶೇಷವಾದುದು. ಇರುವೆ, ನಾಯಿ, ಜೇನು, ಕೋಗಿಲೆಗಳೊಡನೆ ಮಗು ಸಂಭಾಷಿಸುವ ವಿಶಿಷ್ಟ ಜೀವಮುಖಿ ನೆಲೆಯ ಚಿಂತನೆಯನ್ನು ಈ ಕಾವ್ಯದಲ್ಲಿ ಕಾಣಬಹುದು. ನಿಸರ್ಗದ ಎಲ್ಲ ಜೀವಿಗಳು ತಮ್ಮ ತಮ್ಮ ಕೆಲಸ ಕಾರ್ಯಗಳಲ್ಲಿ ಮಗ್ನರಾಗಿರುವಾಗ ಮಗು ಮಾತ್ರ ಆಟವಾಡುವ ಚಿಂತನೆಯಲ್ಲಿ ಕಾಲ ಕಳೆಯುತ್ತಿರುವಾಗ ಯಾರು ಆಟ ಆಡಲಿಕ್ಕೆ ಬರದೆ ಹೋದಾಗ ನಾನು ಕೂಡ ನನ್ನ ಕೆಲಸವನ್ನು ಮುಗಿಸಿದ ನಂತರ ಆಟವಾಡಬೇಕೆಂಬ ನೀತಿಪಾಠವನ್ನು ಸಂಗಮೇಶರು ಈ ಕಾವ್ಯದ ಮೂಲಕ ಕಟ್ಟಿಕೊಡುತ್ತಾರೆ.

ಮಗು: ಇರುವೆ ಇರುವೆ ಕರಿಯ ಇರುವೆ
ನಾನು ಜೊತೆಗೆ ಬರುವೆ
ಆಡಲಿಕ್ಕೆ ಅಮ್ಮನಿಂದ ಕರಣಿ ಬೆಲ್ಲ ತರುವೆ

ಇರುವೆ: ಮಳೆಯ ಕಾಲ ಬರುತಲಿಹುದು
ನನಗೆ ಸಮಯವಿಲ್ಲ
ಅನ್ನ ಕೂಡಿ ಹಾಕಿ ಇಟ್ಟು ಕರೆಯ ಬರುವೆನಲ್ಲ!

ಮಗು:- ಸಾಯಿಮರಿ ನಾಯಿಮರಿ
ನಿನ್ನ ಜೊತೆಗೆ ಆಡುವೆ
ಕುಂಯ್ ಕುಂಯ್ ರಾಗ ಕಲಿಸು ನಿನ್ನ ಹಾಗೆ ಹಾಡುವೆ.

ನಾಯಿ: ಆಡಲಿಕ್ಕೆ ಹಾಡಲಿಕ್ಕೆ
ನನಗೆ ಸಮಯವಿಲ್ಲ
ಅನ್ನ ಹಾಕಿದವನ ಮನೆಯ
ಕಾಯುತಿರುವೆನಲ್ಲ!

ಮಗು: ಜೇನು ಹುಳುವೆ ಜೇನು ಹುಳುವೆ
ಎಲ್ಲಿ ಹೋಗುತಿರುವೆ?
ಕರೆದುಕೊಂಡು ಹೋಗು ನನ್ನ
ನಿನ್ನ ಜೊತೆಗೆ ಬರುವೆ.

ಜೇನು: ಬನವ ಸುತ್ತಿ ಸುಳಿದು ನಾನು
ಜೇನನರಸಿ ತರುವೆ
ಈಗ ಬೇಡ ಚೈತ್ರ ಬರಲಿ
ಆಗ ನಾನು ಕರೆವೆ.

ಮಗು: ಕುಹೂ ಕುಹೂ ಕೂಗುತಿರುವ
ಮಧುರ ಕಂಠ ಕೋಗಿಲೆ
ಎಲೆಯ ಬಲೆಯ ನೆಲೆಯೊಳಿರಲು
ನಾನು ಜೊತೆಗೆ ಬರುವೆ.

ಕೋಗಿಲೆ: ಕಾಕದೃಷ್ಟಿ ತಪ್ಪಿಸಲ್ಕೆ
ಹೊಂಚಿನಲ್ಲಿ ಇರುವೆ
ಚೈತ್ರ ಕಳೆಯೆ ಒಂಟಿ ಇರುವೆ
ಆಗ ಕರೆಯ ಬರುವೆ.

ಮಗು: ಯಾರು ಇವರು ನನ್ನ ಕೂಡ
ಆಡಲಿಕ್ಕೆ ಒಲ್ಲರು
ತಮ್ಮ ತಮ್ಮ ಕೆಲಸದಲ್ಲಿ ವೇಳೆ ಕಳೆವರೆಲ್ಲರು.
ಅವರ ಹಾಗೆ ಮೊದಲು ನನ್ನ ಕೆಲಸ ನಾನು ಮಾಡುವೆ
ಓದು ಬರೆಹ ಮುಗಿಸಿಕೊಂಡು ಸಮಯ ಉಳಿಯೆ
ಆಡುವೆ.''[೫೧]

'ಬಿದ್ದ ಚಂದಿರನ ಒದ್ದು ಓಡಿಸಿದ' ಸಂಕಲನದಲ್ಲಿ, ಸಂಗಮೇಶರ ಅದ್ಭುತ ಕವನವೊಂದಿದೆ. ಅದು 'ಜ್ಯೋತಿಷಿ ನರಿರಾಯ'. ಜ್ಯೋತಿಷ್ಯದ ನೆಪದಲ್ಲಿ ಜನರನ್ನು ಭಯಪಡಿಸಿ ಶೋಷಣೆ ಮಾಡುವ ಮೂಢರನ್ನು ಕುತಂತ್ರ ಬುದ್ಧಿಯ ನರಿಗೆ ಹೋಲಿಸಿ ಮಂಗನಿಂದ ಪಾಠ ಕಲಿಸುವ ಪರಿ ವಿಶಿಷ್ಟವಾದುದು.

"ಕಾವಿ ತೊಟ್ಟನು ಕಾವಿ ಉಟ್ಟನು
ಹಿಡಿದು ಕೈಯಲಿ ಮಣಿಯನು
ನರಿಯು ಜೋತಿಷಿಯಾಗಿ ನಡೆದನು
ವನದಿ ಹೇಳುತ ಕಣಿಯನು

'ಹಿಂದು ಮುಂದಿನ ಇಂದು ನಡೆಯುವ
ಒಳಿತು ಕೆಡುಕನು ನುಡಿಯುವೆ
ಮುಂದೆ ನಿಮ್ಮಯ ಜೀವಕಾಗುವ
ಕುತ್ತನೆಲ್ಲವ ತೊಡೆಯುವೆ

ಕೇಳಿ ಎಲ್ಲರು ಬಂದು ನಿಮ್ಮಯ
ಮನದಲಿರುವಾ ತೊಂದರೆ
ಮೂರು ಲೋಕದ ತೆರೆದು ತೋರುವೆ
ನನ್ನ ಹತ್ತಿರ ಬಂದರೆ!

ಮಂಗ ಮನಸಿಗೆ ಏನೊ ಹೊಳೆಯಿತು
ಕೋಣೆ ಒಳಗಡೆ ಓಡಿದ
ನರಿಯ ಫಜೀತಿ ಮಾಡುವಂತಹ
ತಂತ್ರವೊಂದನ್ನು ಹೂಡಿದ

ನುಲಿಯ ಹೆಣೆಯದ ಹೊರಸು ಕಂಡನು
ನಾಲ್ಕು ಕಾಲನು ಮುಚ್ಚಿದ
ಹೆಣಿಕೆ ಅರಿವೆಯ ಮೇಲೆ ಹೊಚ್ಚಿದ
ತನ್ನುಪಾಯಕೆ ಮೆಚ್ಚಿದ

ಹೊರಗೆ ಓಡುತ ಬರುತ ಕೂಗಿದ
ಬನ್ನಿ ರಾಯರೆ, ಈ ಕಡೆ
ಕಣಿಯ ಹೇಳಲು ಕುಳಿತುಕೊಳ್ಳಿರಿ
ಹೊರಸು ಹಾಕಿದೆ ಒಳಗಡೆ

ಎದೆಯ ಉಬ್ಬಿಸಿ ಠೀವಿಯಿಂದಲಿ
ಕುಳಿತು ಬಿಟ್ಟರು ಗಪ್ಪನೆ

ಅರಿವೆ ಸರಿಯಲು ಕಾಲು ಮೇಲಕೆ
ಮಾಡಿ ಬಿದ್ದರು ದೊಪ್ಪನೆ!

ಏನು ರಾಯರೆ ನಿಮ್ಮ ಕಾಲಡಿ
ಇರುವುದೇ ನಿಮಗರಿಯದು
ಮೂರು ಲೋಕವನೇನು ಬಲ್ಲಿರಿ
ನಿಮ್ಮ ತಲೆಯೇ ಬರಿಯದು

ಯಾರ ಮುಂದೂ ಹೇಳ ಬೇಡಿರಿ
ಇಲ್ಲಿ ನಡೆದಾ ಸುದ್ದಿಯ
ಮೋಸ ಮಾಡುತ ತಿರುಗಬೇಡಿರಿ
ಹೇಳಿ ಕಾಲಿಗೆ ಬುದ್ಧಿಯ![೫೨]

ಈ ಕಾವ್ಯದಲ್ಲಿ ಕಾವಿ ತೊಟ್ಟೊಡನೆ ಸನ್ಯಾಸಿಯಾಗಲಾರ, ಮತ್ತೊಬ್ಬರ ಭವಿಷ್ಯ ಹೇಳುವವರಿಗೆ ತಮ್ಮದೇ ಭವಿಷ್ಯದ ಬಗ್ಗೆ ಏನೂ ತಿಳಿದಿರುವುದಿಲ್ಲ. ಅಂತವರು ಇನ್ನೊಬ್ಬರ ಭವಿಷ್ಯವನ್ನು ಹೇಗೆ ನಿರ್ಮಿಸಬಲ್ಲರು ಎನ್ನುವ ಮಹತ್ತರ ಸಂದೇಶವೊಂದಿದೆ. ನಿಮ್ಮ ಕಾಲಡಿ ಇರುವುದೇ ನಿಮಗರಿವಿಲ್ಲ ಎಂದ ಮೇಲೆ ಇನ್ನು ಮೂರು ಲೋಕಗಳನ್ನೇನು ಬಲ್ಲಿರಿ ಎಂದು ಉತ್ತರಿಸುವ ಮಂಗ ವೈಚಾರಿಕತೆಯ ಪ್ರತಿನಿಧಿಯಾಗಿ ತೋರುತ್ತದೆ.

ಸಂಗಮೇಶರು 'ನಾವು ನಾಳೆಯ ರವಿಗಳು' ಎನ್ನುವ ಸಂಕಲನದಲ್ಲಿ ಅದೇ ಶೀರ್ಷಿಕೆಯ ಪದ್ಯವೊಂದನ್ನು ಬರೆದಿದ್ದಾರೆ. ಬಹುಶಃ ಮಕ್ಕಳ ಕಾವ್ಯ ಕ್ಷೇತ್ರದಲ್ಲಿ ಆ ಪದ್ಯಕ್ಕೆ ಒಂದು ವಿಶೇಷ ಪ್ರಾತಿನಿಧ್ಯವನ್ನು ಕಲ್ಪಿಸಿಕೊಡಬೇಕೆಂದು ತೋರುತ್ತದೆ.

"ನಾವು ನಾಳೆಯ ವಿಶ್ವ ವ್ಯೋಮದಿ
ಬೆಳಕು ಬೀರುವ ರವಿಗಳು
ನಾವು ನಾಳೆಯ ಎದೆಯ ಹಾಳೆಯ
ಮೇಲೆ ಬರೆಯುವ ಕವಿಗಳು

ದುಡಿವ ಚೇತನ ಕೊಡುವ ಶಕ್ತಿಯ
ಎಳೆಯ ಫಲದಾ ಮಿಡಿಗಳು
ಸ್ನೇಹ ಸಮತೆಯ ಜ್ಞಾನ ದೀಪದ
ಬೆಳಕು ಹಿಡಿಯುವ ಕುಡಿಗಳು

ವೈರ-ಮತ್ಸರ-ಜಾತಿ-ಪಂಥವ
ಸುಟ್ಟು ಹಾಕುವ ಕಿಡಿಗಳು
ವಿಶ್ವ ಜನತೆಯ ಮನದ ಹಿಂಸೆಯ
ಧೂಳು ಹೊಡೆಯುವ ಹಿಡಿಗಳು

ಇದ್ದ ಹಾಗೆಯೆ ಇರಲಿ ಹಿರಿಯರೆ
ಕೆಡಿಸಬೇಡಿರಿ ಜಗವನು
ನೀವು ಸರಿಯಿರಿ ಹೊರಲು ಬಂದೆವು
ವಿಶ್ವದೇಳ್ಗೆಯ ನೊಗವನು

ಬಿತ್ತ ಬೇಡಿರಿ ಸ್ವಾರ್ಥ ವಂಚನೆ
ಜಾತಿ ಪಂಥದ ಸಸಿಯನು
ಮೆತ್ತ ಬೇಡಿರಿ ನಮ್ಮ ಅಂಗಕೆ
ವಿಷದ ಉಸಿರಿನ ಮಸಿಯನು

ನೀವು ಬೆಳೆಸಿದ ಕಳೆಯ ಕೀಳಲು
ಮತ್ತೆ ಯುಗವೇ ಕಳೆವುದು
ಜಗವು ಒಂದೇ ಎಂಬ ಬೆಳೆಯನು
ನಾವು ಎಂದಿಗೆ ಬೆಳೆವುದು?[೫೩]

ಜಾತಿ, ಪಂಥ, ಹೊಟ್ಟೆ ಕಿಚ್ಚು, ವೈರತ್ವ, ಸ್ವಾರ್ಥ, ವಂಚನೆಗಳಿಂದ ಕೂಡಿರುವ ಜಗತ್ತನ್ನು ಹೊಸ ವಿಚಾರಧಾರೆಗಳಿಂದ ಸ್ನೇಹ, ಸಮತೆ, ಜ್ಞಾನಗಳೆಂಬ ದೀಪಗಳಿಂದ ಮೂಲೋತ್ಪಾಟನೆ ಮಾಡುವ ಸೂರ್ಯರಾಗುತ್ತೇವೆ ಎಂಬ ಸಂದೇಶವನ್ನು ಮಕ್ಕಳೊಳಗೆ ಬಿತ್ತಲು ಈ ಕಾವ್ಯದ ಮೂಲಕ ಪ್ರಯತ್ನಿಸಿದ್ದಾರೆ. ಯುಗ-ಯುಗಗಳಿಂದ ಸ್ವಾರ್ಥ, ಲಾಲಸೆಯ ಜನ ಬೆಳೆಸಿಕೊಂಡು ಬಂದ ಕಳೆಯನ್ನು ಕಿತ್ತೆಸೆಯುವ ಸಾಮಾಜಿಕ ಜವಾಬ್ದಾರಿಯನ್ನು ಮಕ್ಕಳಿಗೆ ವಹಿಸುವ ಸಂಗಮೇಶರ ಕಾವ್ಯಾತ್ಮಕ ಚಿಂತನೆ ಶ್ರೇಷ್ಠವಾದುದು.

ಕನ್ನಡ ಮಕ್ಕಳ ಸಾಹಿತ್ಯದ ಸಂದರ್ಭದಲ್ಲಿ ಹೆಸರಿಸಲೇಬೇಕಾದ ಮತ್ತೊಬ್ಬ ಮಹತ್ವಪೂರ್ಣ ಕವಿ ಹೆಚ್.ಎಸ್. ವೆಂಕಟೇಶಮೂರ್ತಿಯವರು. ೧೩೮ ಕವಿತೆಗಳನ್ನು, 'ಅಮಾನುಷರು', 'ಕದೀರನ ಕೋಟೆ', ಅಗ್ನಿಮುಖಿ ಎಂಬ ೩ ಮಕ್ಕಳ ಕಥೆಗಳನ್ನು, 'ಅಳಿಲು ರಾಮಾಯಣ', 'ಹೂವಿ', 'ಸುಣ್ಣದ ಸುತ್ತು', 'ಕಂಸಾಯಣ', 'ಕುಣೀಕುಣೀ ನವಿಲೇ' ಎಂಬ ೫ ಮಕ್ಕಳ ನಾಟಕಗಳನ್ನು ಮಕ್ಕಳಿಗಾಗಿಯೇ ರಚಿಸಿದ ಕೀರ್ತಿ ಹೆಚ್.ಎಸ್. ವೆಂಕಟೇಶಮೂರ್ತಿಯವರದು. ಪ್ರಾಸಂಗಿಕವಾಗಿ ಅವರ ಕೆಲವು ಕಾವ್ಯಗಳನ್ನು ಇಲ್ಲಿ ಉಲ್ಲೇಖಿಸುವ ಪ್ರಯತ್ನವನ್ನು ಮಾಡಲಾಗಿದೆ. ವೆಂಕಟೇಶಮೂರ್ತಿಯವರ ಕಾವ್ಯ ರಚನೆಯಲ್ಲಿ 'ಕನ್ನಡ ಮಕ್ಕಳಿಗೆ' ಎಂಬ ಪದ್ಯಕ್ಕೆ ಒಂದು ವೈಶಿಷ್ಟ್ಯತೆ ಇದೆ.

ಕನ್ನಡ ಮಾತೆಯ ಮುದ್ದಿನ ಮಕ್ಕಳೆ
ಮಾತೆಗೆ ಮಾತನು ನೀಡಿ!
ಎಲ್ಲೇ ಹೋದರು ಏನೇ ಆದರೂ
ಕನ್ನಡದಲೆ ಮಾತಾಡಿ!

ಕನ್ನಡ ನಾಡಿನ ಚೆಲುವನು ನೋಡಿ
ಕರುನಾಡನು ಸುತ್ತಾಡಿ!
ಕನ್ನಡ ತಾಯಿಯ ಬಾವುಟ ಏರಿಸಿ
ಕನ್ನಡವನು ಕೊಂಡಾಡಿ!

ಪಂಜೆ ಕುವೆಂಪು ಹೊಯಿಸಳ ಬರೆದ
ಮಕ್ಕಳ ಕವಿತೆಯ ಹಾಡಿ
ಅಮ್ಮಾ ಗುಮ್ಮನ ಕರೆಯದಿರೆನ್ನುವ
ದಾಸರೊಡನೆ ನಲಿದಾಡಿ!

ಉಡುಪೀ ಕೃಷ್ಣ ಗೆಳೆತನ ಮಾಡಿ
ಕಡೆಗೋಲಾಟವ ಆಡಿ!
ಶ್ರೀ ಶೃಂಗೇರಿಯ ಶಾರದಾಂಬೆಯ
ನವಿಲೊಂದಿಗೆ ಕುಣಿದಾಡಿ!

ಇಡುಗುಂಜಿಯ ಶ್ರೀ ಗಣೇಶ್ ಮಾಮನ
ಅರೆಕ್ಷಣ ಇಲಿಯಿಂದಿಳಿಸಿ
ಮೂಷಿಕರಾಯಗೆ ಬಡ್ತಿಯ ನೀಡಿ
ಬೊಮ್ಮನಹಳ್ಳಿಗೆ ಕಳಿಸಿ![೫೪]

ಈ ಕಾವ್ಯ ಕನ್ನಡ ಮಾತೆಯ ಮಕ್ಕಳು ಕನ್ನಡದಲ್ಲೇ ಮಾತನಾಡುವ ವ್ಯವಹರಿಸುವ ಭಾಷೆಯನ್ನು ನೀಡಲು ಒತ್ತಾಯಿಸುತ್ತದೆ. ಪಂಜೆ, ಕುವೆಂಪು, ಹೊಯಿಸಳರು ಬರೆದ ಮಕ್ಕಳ ಕವಿತೆಯನ್ನು ಹಾಡಿ ಎಂದು ಪ್ರೇರೇಪಿಸುತ್ತದೆ. ಕುವೆಂಪುರವರ 'ಬೊಮ್ಮನಹಳ್ಳಿಯ ಕಿಂದರಿಜೋಗಿ' ಕೊನೆಯ ನಾಲ್ಕು ಸಾಲುಗಳ ಮೇಲೆ ಮಹತ್ತರ ಪ್ರಭಾವವನ್ನು ಬೀರಿರುವುದು ಕಂಡುಬರುತ್ತದೆ. ಈ ಪದ್ಯವನ್ನು ಓದುತ್ತಿದ್ದರೆ ಆನಂದಕಂದರ 'ಕನ್ನಡಕ್ಕೆ ಹೋರಾಡು ಕನ್ನಡದ ಕಂದ, ಕನ್ನಡವ ಕಾಪಾಡು ನನ್ನ ಆನಂದ, ಜೋಗುಳದ ಹರಕೆಯಿದು ಮರೆಯದಿರು ಚಿನ್ನ ಮರೆತೆಯಾದರೆ ಅಯ್ಯೋ ಮರೆತಂತೆ ನನ್ನ' ಎಂಬ ಕಾವ್ಯ ನೆನಪಾಗುತ್ತದೆ.

ವೆಂಕಟೇಶ ಮೂರ್ತಿಯವರು ಮಕ್ಕಳಿಗಾಗಿಯೇ 'ಬಣ್ಣದ ಚಿಟ್ಟೆ' ಎಂಬ ನೀಳ್ಗವಿತೆಯನ್ನು ಬರೆದಿದ್ದಾರೆ.

೧
ದಟ್ಟ ಕಾಡಿನ ನಡುವೆ ಮುಗಿಲಾ
ಮಟ್ಟ ಬೆಳೆದ ದೊಡ್ಡ ಆಲ
ಬೆಟ್ಟದೇರಲಿ ಬೆಳೆದುನಿಂತಿದೆ
ಕಟ್ಟ ಕಡೆಯ ಶಿಖರದೆ ||

೨

ಹಣ್ಣು ಹಣ್ಣು ಮುದಿಯ ತನ್ನ
ಬೆನ್ನ ಬಾಗಿಸಿ ಪೊರೆಯುತಾ ಇದೆ
ಮುನ್ನ ಸಾವಿರದೆರಡು ನೂರು
ಕಣ್ಣ ತುಂಬೋ ತೊಟ್ಟಿಲ ||

೩

ವೃಕ್ಷವದರಾ ಹರೆಗಳಲ್ಲಿ
ದಕ್ಷವಾಗಿ ಗೂಡುಕಟ್ಟಿ
ರಕ್ಷೆ ಪಡೆದಿವೆ ಸ್ವಸ್ಥವಾಗಿ
ಪಕ್ಷಿ ಸಂಕುಲ ಸಾವಿರಾ ||

೪

ಮತ್ತೆ ಮರದಾ ಪೊಟರೆಯಲ್ಲಿ
ಚಿತ್ತ ಚೋರಿ ಚಕೋರಿ
ಕತ್ತ ಕುಣಿಸೋ ನವಿಲು ಅರಗಿಳಿ
ಸುತ್ತ ಮುತ್ತಾ ನೆಲೆಸಿವೆ ||

೫

ರೆಂಬೆಯಿಂದ ರೆಂಬೆಗೆಗೆರೋ
ಜಂಬದಾ ಕಪಿ ಕರಿಯ ಮುಸವ
ಕೊಂಬು ಮಸೆಯೋ ಹರಿಣ ಕಡವೆ
ತುಂಬಿಯಾಡಿವೆ ಸುತ್ತಲು ||

೬

ಅಲ್ಲೆ ಸನಿಯದಲ್ಲಿತ್ತು ಒಂದು
ಕಲ್ಲ ಬಂಡೆಯ ಮೇಲೆ ಎಲ್ಲೂ
ನಿಲ್ಲದಲೆ ಹರಿಹರಿವ ಹುಳು ಎ
ಲ್ಲೆಲ್ಲಿಯೂ ತಾ ಸಲ್ಲದೆ ||

೭

ಮೋಟು ಕೂದಲು ಮೈಯ ಪೂರಾ
ಚೂಟಿಯಿಲ್ಲದ ದೇಹಭಾರ
ನೋಟಕೋ ಅದು ಬಲು ವಿಕಾರ
ಆಟಕದನು ಕರೆಯರು ||

೮

ಹಿಂದೆ ಬಂದು ಬೆರೆವರಿಲ್ಲ
ಮುಂದೆ ನಿಂದು ಕರೆವರಿಲ್ಲ
ಕಂದು ಕಪ್ಪಿನ ಚಂದವಿಲ್ಲದ
ಒಂದು ತಬ್ಬಲಿ ಹುಳುವುದು ||[೫೫]

ಹೀಗೆ ಮುಂದುವರೆಯುವ ಈ ಕಾವ್ಯ, ದಟ್ಟ ಆಲದ ಮರ ವಿವಿಧ ಜೀವಿಗಳಿಗೆ ಜೀವಿಸಲು ಜಾಗ ನೀಡುವ ಸನ್ನಿವೇಶವನ್ನು ಸೊಗಸಾಗಿ ಕಟ್ಟಿಕೊಡುತ್ತದೆ. ಸಹಬಾಳ್ವೆ, ಸ್ನೇಹ, ಪ್ರೀತಿ, ಮಮತೆಗಳಿಂದ ಸಮಾಜದೊಂದಿಗೆ ಮನುಷ್ಯ ಜೀವಿ ಬದುಕಬೇಕೆಂಬ ಅರ್ಥಪೂರ್ಣ ಸಂದೇಶವನ್ನು ಈ ಪದ್ಯದ ಮೂಲಕ ಹೆಚ್.ಎಸ್.ವಿ.ಯವರು ಸಾರುತ್ತಾರೆ. ಕನ್ನಡದಲ್ಲಿ ಬಂದ ವಿಶೇಷ ಮಕ್ಕಳ ಪದ್ಯದಲ್ಲಿ ಈ ಕವನವೂ ಒಂದು.

“ಮಕ್ಕಳ ಸಾಹಿತ್ಯ ರಚನೆಯ ಎರಡನೇ ಘಟ್ಟದಲ್ಲಿ ಗುಣದಲ್ಲಿ ಎದ್ದು ಕಾಣುವ ಆಸಕ್ತಿಯಿಂದ ಕ್ಷೇತ್ರದಲ್ಲಿ ತೊಡಗಿಸಿಕೊಂಡವರು ಕಂಚ್ಯಾಣಿ ಶರಣಪ್ಪ ಅವರು. ಕಂಚ್ಯಾಣಿಯವರು ಮುಖ್ಯವಾಗಿ ಶಿಕ್ಷಕರಾಗಿ ಬಹುಕಾಲ ಮಕ್ಕಳೊಂದಿಗೆ ಬೆರೆತು ಅವರ ಮನಸನ್ನು ಅರಿತವರು. ಮೌಲ್ಯಯುತ ನುಡಿಗಟ್ಟುಗಳಿಗೆ ಅನುಭವವನ್ನು ಮೂಸೆ ಮಾಡಿ ಪ್ರಾಸದ ಚೌಕಟ್ಟು ತೊಡಿಸಿ, ಲಯಬದ್ಧವಾಗಿ ನಾಲಿಗೆಯಲ್ಲಿ ಕುಣಿಸುವಂತೆ ಮಾಡುವ ಕಲೆಯನ್ನು ಸಿದ್ಧಿಸಿಕೊಂಡವರು. ಕಂಚ್ಯಾಣಿಯವರ ಸೋಲು-ಗೆಲುವು ಚರ್ಚೆಯ ವಿಷಯವಷ್ಟೇ ಅಲ್ಲ. ಅವರ ಕಾಣಿಕೆ, ಕನ್ನಡದ ಸಂದರ್ಭದಲ್ಲಿ ಅಳಿಸಲಾಗದ್ದು ಎಂಬುದಷ್ಟೇ ಪ್ರಮುಖವಾದದ್ದು.”[೫೬]

ಕಂಚ್ಯಾಣಿಯವರು ನಾಡು-ನುಡಿ, ಪ್ರಕೃತಿ, ದೇಶದ ನೇತಾರರು, ಬುದ್ಧನಂತ ಆದರ್ಶ ವ್ಯಕ್ತಿಗಳ ಬಗ್ಗೆ ಕಾವ್ಯ ಕಟ್ಟಿದ ಕೀರ್ತಿಗೆ ಭಾಜನರಾಗಿದ್ದಾರೆ. ಪರಿಸರ ಜಾಗೃತಿ ಗೀತೆಗಳು ಇವರ ಸಾಹಿತ್ಯದ ವಸ್ತುವಾಗಿದೆ. ಉದಾಹರಣೆಗೆಂದು ಅವರ “ಸ್ವಾತಂತ್ರ್ಯ ಸಂಗ್ರಾಮ” ಎಂಬ ಕವಿತೆಯನ್ನು ವಿಶ್ಲೇಷಣೆ ಮಾಡಲಾಗಿದೆ.

ಮಧ್ಯ ರಾತ್ರಿಯಲ್ಲಿ ಸೂರ್ಯ
ಮೂಡಿ ಬಂದನು
ಭಾರತಕ್ಕೆ ಸ್ವಾತಂತ್ರ್ಯವ
ಹೊತ್ತು ತಂದನು

ರಕ್ತರಹಿತ ಕ್ರಾಂತಿಯಲ್ಲಿ
ತೇಲಿ ಬಂದನು
ಕತ್ತಲಲ್ಲಿ ಬೆಳಕು
ಸ್ತಂಭವಾಗಿ ನಿಂತನು

ಪರತಂತ್ರ ಕಾಳರಾತ್ರಿ
ಕರಗಿ ಹೋಯಿತು
ಸತ್ಯ, ಶಾಂತಿ, ಸಮತೆ, ಪ್ರೀತಿ
ಉಕ್ಕಿ ಹರಿಯಿತು

ಝೂನ್ಸಿರಾಣಿ, ಚೆನ್ನಮ್ಮಾಜಿ
ನೆತ್ತರು ಇತ್ತರು
ಭಗತ್‌ಸಿಂಗ್, ಆಜಾದ್, ಬೋಸ್
ಪ್ರಾಣ ತೆತ್ತರು

ಗಾಂಧಿತಾತ, ನೆಹರು ಚಾಚಾ
ದೇಶಭಕ್ತರು
ರಕ್ತರಹಿತ ಕ್ರಾಂತಿ ಮಾಡಿ
ಗೆಲುವು ಪಡೆದರು

ನೋಡಿರಣ್ಣ ಮೂರು ಬಣ್ಣ
ಧ್ವಜವು ಹಾರಿತು
ಜನಗಣಮನ ರಾಷ್ಟ್ರಗೀತೆ
ಮೊಳಗತೊಡಗಿತು[೨೭]

ಪ್ರಸ್ತುತ ಕಾವ್ಯದಲ್ಲಿ ಸ್ವಾತಂತ್ರ್ಯ ಹೋರಾಟದ ಹಲವು ಸೇವಕರನ್ನು ಹೆಸರಿಸುವ ಮೂಲಕ ಪರತಂತ್ರದಿಂದ ಸ್ವಾತಂತ್ರ್ಯದ ಕಡೆಗೆ ಹೊರಳಿದ ಭಾರತ ರಕ್ತರಹಿತ ಕ್ರಾಂತಿಯ ಮೂಲಕ ಬ್ರಿಟಿಷರಿಂದ ಬಿಡುಗಡೆ ಹೊಂದಿತು ಎಂಬ ಸಂದೇಶವನ್ನು ನೀಡ ಬಯಸುತ್ತದೆ.

ಎಲ್ಲೆಡೆಯು ಹಿಂಸೆಯೇ ಪ್ರತಿಧ್ವನಿಸುತ್ತಿರುವ ಈ ಸಂದರ್ಭದಲ್ಲಿ ಕಂಚ್ಯಾಣಿಯವರ ಈ ಕಾವ್ಯ ಮಕ್ಕಳನ್ನು ಚಿಂತನೆಗೀಡುಮಾಡುತ್ತದೆ.

ಕಂಚ್ಯಾಣಿಯವರ ಮತ್ತೊಂದು ವಿಶೇಷ ರಚನೆ 'ನನ್ನ ಕವಿತೆ' ತಾತ್ವಿಕವಾಗಿ ಯಾವುದೇ ಭಿನ್ನತೆಯಿದ್ದರೂ ಕಂಚ್ಯಾಣಿಯವರ ಈ ಕವಿತೆ ಸಿದ್ಧಲಿಂಗಯ್ಯನವರ 'ಗುಡಿಸಲಿನಲ್ಲಿ ಅರಳಿದ ಗುಲಾಬಿ ನಕ್ಷತ್ರ ನನ್ನ ಕವನ' ಕವಿತೆಯನ್ನು ನೆನಪಿಸುತ್ತದೆ.

ಕಳೆದು ಹೋಗಿದೆ
ನನ್ನ ಕವಿತೆಯು
ಹೋದುದೆಲ್ಲಿಗೆ ಹೇಳಿರಿ?
ಹುಡುಕಿಕೊಟ್ಟರೆ
ಸುರಿದು ಬಿಡುವೆನು
ನಿಮ್ಮ ಬಾಯಿಗೆ ಸಕ್ಕರೆ!

ಗಾಳಿ ಪಟವನು
ಮಾಡಿ ತಮ್ಮನು
ಹಾರಿಬಿಟ್ಟನೆ ಹರುಷದಿ!
ನನ್ನ ಕವಿತೆಯು
ಮೇಲೆ ಮೇಲಕೆ
ಹಾರಿ ಹೋಯಿತೆ ಗಗನದಿ!

ಹಾಳಿ ಹಡಗವ
ಮಾಡಿದ ತಂಗಿಯು
ಆಡುತಿರುವಳೆ ನೀರಲಿ?
ನನ್ನ ಕವಿತೆಯು
ದೂರ ದೂರಕೆ
ತೇಲಿ ಹೋಯಿತೆ ತೊರೆಯಲಿ!!

ಮುದ್ದು ಮಕ್ಕಳು
ಚುಚ್ಚಿ ಮುಳ್ಳನು
ಮಾಡಿಬಿಟ್ಟರೆ ಗಿರಿಗಿಟಿ!!
ನನ್ನ ಕವಿತೆಯು
ಊರುಕೇರಿಯ
ಸುತ್ತುತಿರುವುದು ಗಿರಿಗಿರಿ!!

ನನ್ನ ಕವಿತೆಯು
ನನ್ನ ಪ್ರಾಣವು
ಕಳೆದುಹೋದರೆ ಹೋಗಲಿ!!
ಮುದ್ದು ಮಕ್ಕಳು
ಆಡಿ ಕುಣಿಯಲಿ
ಏಕೆ ಚಿಂತೆ ಮಾಡಲಿ!![೫೮]

ಈ ಕವಿತೆಯಲ್ಲಿ ಬರುವ 'ಮುದ್ದು ಮಕ್ಕಳು ಚುಚ್ಚಿ ಮುಳ್ಳನು ಮಾಡಿಬಿಟ್ಟರೆ ಗಿರಿಗಿಟಿ, ನನ್ನ ಕವಿತೆಯು ಊರುಕೇರಿಯ ಸುತ್ತುತಿರುವುದು ಗಿರಿಗಿರಿ' ಎನ್ನುವ ಸಾಲುಗಳು ಮೌಲ್ವಿಕ ಚಿಂತನೆಯನ್ನು ಹೊತ್ತಿವೆ. ಊರು-ಕೇರಿಗಳನ್ನು ಬೆಸೆಯುವ ಕವಿ ಮಕ್ಕಳಲ್ಲಿ ವಿಶೇಷ ಪ್ರಜ್ಞೆಯನ್ನು ಸೃಷ್ಟಿ ಮಾಡುತ್ತಾನೆ. ಕವಿತೆ ಕಳೆದರೂ ಚಿಂತಿಸಲಾರೆ, ಮುದ್ದು ಮಕ್ಕಳು ಆಡ್ಯಾಡಿ ಕುಣಿಯಲಿ ಎನ್ನುವ ಸಂದೇಶ ಕಂಚ್ಯಾಣಿಯವರದು.

ಟಿ.ಎಸ್. ನಾಗರಾಜಶೆಟ್ಟಿಯವರು ಕಂಚ್ಯಾಣಿ ಶರಣಪ್ಪನವರ ಹಾಗೆ ಮಕ್ಕಳ ಕಾವ್ಯ ರಚಿಸಿದ ೨ನೇ ಕಾಲಘಟ್ಟದವರು. ಮುಖ್ಯವಾಗಿ ಇಲ್ಲಿ ಗಮನಿಸಬೇಕಾದ ಸಂಗತಿ ಇದೆ. ಪಂಜೆ

ಮಂಗೇಶರಾಯ, ಹೊಯಿಸಳ, ಕುವೆಂಪು, ಜಿ.ಪಿ. ರಾಜರತ್ನಂ, ಮೇವುಂಡಿ ಮಲ್ಲಾರಿಯವರ ಮೊದಲ ಮಕ್ಕಳ ಸಾಹಿತ್ಯಿಕ ಘಟ್ಟ ಮುಗಿದ ಮೇಲೆ ೨ನೇ ಮಕ್ಕಳ ಸಾಹಿತಿಗಳಿಗೆ ಒಂದು ನಿರ್ದಿಷ್ಟ ಪ್ಲಾಟ್‌ಫಾರಂ ನಿರ್ಮಾಣವಾಗಿತ್ತು. ಹಿರಿಯ ಮಕ್ಕಳ ಕವಿಗಳ ಜ್ಞಾನದ ಬೆಳಕಲ್ಲಿ ೨ನೇ ತಲೆಮಾರಿನ ಮಕ್ಕಳ ಕವಿಗಳು ಸಾಹಿತ್ಯಿಕ, ಕೃಷಿಗೆ ತೊಡಗಿಕೊಂಡರು. ಅಂತವರಲ್ಲಿ ಟಿ.ಎಸ್. ನಾಗರಾಜಶೆಟ್ಟಿಯು ಒಬ್ಬರು. ಈ ಘಟ್ಟದಲ್ಲಿ ನಾಗರಾಜ ಶೆಟ್ಟಿಯವರು ವಿಜ್ಞಾನದ ನಿತ್ಯ-ಸತ್ಯಕ್ಕಿಂತ ಭ್ರಮಾತ್ಮಕ ಓಟದ ಮುದ ನೀಡುವ ತಾರ್ಕಿಕ ಶಬ್ದಗಳ ಲಾಲಿತ್ಯ ಪೋಣಿಸಿ ಕಾವ್ಯ ರಚನೆಗೆ ಇಳಿದರು. ಅದೇನೆ ಇರಲಿ ನಾಗರಾಜಶೆಟ್ಟಿಯವರು ಮಕ್ಕಳ ಮನಸಿನಲ್ಲಿ ನಿಲ್ಲುವ ಕೆಲವು ಪದ್ಯಗಳನ್ನು ನೀಡಿದ್ದಾರೆ. ಅಂತಹ ಪದ್ಯಗಳಲ್ಲಿ ವಿಶಿಷ್ಟ ಕಾವ್ಯ ಗೋಸುಂಬೆ.

ರೋಡಿಗೆ ಅಡ್ಡ ತೂಗಾಡುತ್ತ
ಆಡಿಸಿ ಗಡ್ಡ ವಾಲಾಡುತ್ತ
ಮೆಲ್ಲಗೆ ಮೆಲ್ಲಗೆ ಎಲ್ಲಿಗೆ ಹೊರಟ್ಟಿದ್ದೀ?
ಸಾವಿರ ನಿಮಿಷ ಸರಿದಾಡುತ್ತ
ಗುರಿಯನು ತಲುಪುವೆ ಅಲುಗಾಡುತ್ತ
ಬೇಸರವಿಲ್ಲವೆ ನಿನಗೆ ಊಸರವಳ್ಳಿ?

ಮೇಲೆ ಕೆಳಗೆ ತಲೆಯನು ತೂಗಿ
ಏನನು ತೂಗುವೆ ಬಾಳಿನಲಿ?
ಹಿಂದಕೆ ಮುಂದಕೆ ತೂರಾಡುತ್ತ
ಏನನು ತೂರುವೆ ಗಾಳಿಯಲಿ?

ಬಾಲವ ಸುತ್ತಿ ಚಕ್ಕುಲಿ ಮಾಡುವ
ಮಾದರಿ ನೀನು ತೋರಿದೆಯಾ?
ಕೋಳಿಯ ಜುಟ್ಟನು ಬ್ರಹ್ಮನು ಮಾಡಲು
ಪ್ರೇರಣೆ ನೀನು ನೀಡಿದೆಯಾ?

ಸರಸರ ಸೇರಲು ಆಸೆಯೇ ಇಲ್ಲವೆ
ಬೀಸೇ ಇಲ್ಲದೆ ನಡೆದಿರುವೆ?
ಸಣ್ಣನೆ ರೂಪದ ಡೈನೋಸಾರಿನ
ಕಾಲನು ನೀನು ಪಡೆದಿರುವೆ

ಕೀಟದ ಮೇಲೆ ಬಿದ್ದರೆ ನೋಟ
ಉದ್ದನೆ ನಾಲಗೆ ಸರ‍್ರನೆ ಚಾಚಿ
ಭರ‍್ರನೆ ಅದನು ಬಾಚಿರುವೆ!

ಮಿನಿಮಿನಿ ಕೀಟಕು ಕಿರಿ ಕಿರಿ ಕ್ರಿಮಿಗೂ
ತಪ್ಪದು ನಿನ್ನೀ ನಾಲಿಗೆ ಕಾಟ
ಹಾರುವ ನಡೆಯುವ ತೆವಳುವ ಓಡುವ
ಹುಳುಗಳಿಗೆಲ್ಲ ನಿನ್ನದು 'ಶನಿಕಾಟ'

ಅಂಬೆಗಾಲನೆ ಇಟ್ಟರು ನೀನು
ರೆಂಬೆಯ ನಡುವೆ ಕಾಣದು ಬಿಂಬ
ಮೆಳೆಗಳ ಮೇಲೆ ಎಲೆಗಳ ನಡುವೆ
ಕಣ್ಣನು ಪಿಳುಕಿಸಿ ಬಣ್ಣವ ಬದಲಿಸಿ
'ಮಂಗಮಾಯ'ವ ಪಾಲಿಸುವೆ
ಅಡಗಿದ ತಾಣವು ಎಲ್ಲಿದೆ ಹೇಳು
ಅಲ್ಲಿಗೆ ಕಣ್ಣನು ಕೀಲಿಸುವೆ"

ಗೋಸುಂಬೆ ಅಥವಾ ಊಸರವಳ್ಳಿ ಎಂದು ಕರೆಸಿಕೊಳ್ಳುವ ಈ ಜೀವಿ ಭಾರತೀಯ ಸಾಂಪ್ರದಾಯಿಕ ಮನಸುಗಳಿಗೆ ಅಪಶಕುನ, ಮಾಟ-ಮಂತ್ರಗಳಿಗೆ ಮತ್ತು ಮನುಷ್ಯ ಮುಟ್ಟಿದರೆ ಗೋಸುಂಬೆಯ ಹಾಗೆ ಬಣ್ಣ ಬದಲಾಗಿ ಸಾಯುತ್ತಾರೆ ಎನ್ನುವ ನಂಬಿಕೆಯಿದೆ. ಆದರೆ ಈ ಎಲ್ಲ ನಂಬಿಕೆಗಳ ಪರಿಧಿಯ ಆಚೆ ನಿಂತು ಗೋಸುಂಬೆಯ ಚಿತ್ರಣವನ್ನು ನೀಡುವ ಪ್ರಯತ್ನ ಮಾಡುತ್ತಾರೆ ಕವಿ ನಾಗರಾಜಶೆಟ್ಟಿಯವರು. ಇದು ಅವರ ಕಾವ್ಯಶಕ್ತಿ.

ನಾಗರಾಜಶೆಟ್ಟಿಯವರ 'ಪಾಪುವಿನ ಅದ್ಭುತ ದೀಪ' ಮಕ್ಕಳ ಮನಸಿನಲ್ಲಿ ಉಳಿಯುವ ಪದ್ಯ. ಇದು 'ಅಲ್ಲಾವುದ್ದೀನನ ಅದ್ಭುತ ದೀಪ'ವನ್ನು ನೆನಪಿಗೆ ತರುವ ಕಾವ್ಯ. ದೀಪದ ಮೂಲಕ ಭೂತವೊಂದು ಸೃಷ್ಟಿಯಾಗಿ, ಸೃಷ್ಟಿಸಿದ ಮಾನವನ ಬೇಡಿಕೆಗಳನ್ನು ಪೂರೈಸುವ ಕಥಾಧಾರಿತ ಕಾವ್ಯ ಅಲ್ಲಾವುದ್ದೀನನ ಅದ್ಭುತ ದೀಪ. ಒಂದು ವೇಳೆ ಅಲ್ಲಾವುದ್ದೀನನ ಅದ್ಭುತ ದೀಪ ಮಗುವಿನ ಕೈಗೆ ಸಿಕ್ಕರೆ ಅದರ ಬೇಡಿಕೆಗಳು ಏನಾಗಿರಬಹುದೆನ್ನುವ ಅದ್ಭುತ ಕೌತುಕದ ಲೋಕವೊಂದನ್ನು ನಾಗರಾಜಶೆಟ್ಟಿಯವರು ಈ ಕಾವ್ಯದಲ್ಲಿ ಅನಾವರಣಗೊಳಿಸುತ್ತಾರೆ.

ಅಲ್ಲಾವುದ್ದೀನ್ ಅದ್ಭುತ ದೀಪ
ಸಿಕ್ಕಿತು ಎನ್ನಿರಿ ನನಗೆ
ಮಾಡಲು ಏನೊ ಕೂಡಲೆ ಓಡುವೆ
ಗಪ್‌ಚಿಪ್ಪೆನ್ನದೆ ಹೊರಗೆ!

ನಿನ್ನೆಯ ಸಂಜೆ ಮಣ್ಣಲಿ ಆಡಲು
ಅಜ್ಜನು ಬೈದನು ನನ್ನ
ದೀಪವನುಜ್ಜಿ ಅಜ್ಜಿಗೆ ಕಜ್ಜಿ
ತರಿಸದೆ ಬಿಟ್ಟರೆ ಕೇಳಣ್ಣ!

ಮೊನ್ನೆಯ ಹಗಲು ಎಂತಹ ದಿಗಿಲು
ಹಾಯುತ ಬಂದಿತು ಗೂಳಿ
ಹೊಡೆ ಹೊಡೆ ಎನುತಲಿ ಬಡಿಸುವೆ ಕೋಲಲಿ
ದೀಪದ ಆಳಿಗೆ ಹೇಳಿ!

ಗೆಳೆಯರ ಎದುರಿಗೆ ಹಳಿದರು ಮೇಷ್ಟರು
ತರಗತಿಯಲ್ಲಿ ಎಡಬಿಡದೆ
ಬಾಳೆಯ ಸಿಪ್ಪೆಯ ಕಾಲಡಿ ಹಾಕಿಸಿ
ಬಿಡುವೆನೆ ಅವರನು ಜಾರಿಸದೆ!

ಅಮ್ಮನ ಕಾಟ ಸುಮ್ಮನೆ ಸಿಗುವುದು
ಮನೆಯಲಿ ತಪ್ಪದೆ ಆಗಾಗ!
ದೀಪದ ಗುಮ್ಮನ ಕಾಣಿಸಿ ಅಮ್ಮಗೆ
ಆರತಿ ಮಾಡುವೆ ನಾನೀಗ!

ಹುಡುಗರ ಒಳಿತಿಗೆ ಹಿರಿಯರು ಹಳಿವರು
ಹಿಂಸೆಯ ಕೊಡುವುದು ಹೇಗಪ್ಪ?
ಬೈದರು ಅವರು ಹಿರಿಯರು ತಾನೆ
ದೀಪದ ರಾಯನೆ ಹೋಗಪ್ಪ![೬೦]

ಈ ಕಾವ್ಯವನ್ನು ಸೂಕ್ಷ್ಮವಾಗಿ ಗಮನಿಸಿದಾಗ ಮಣ್ಣಲ್ಲಿ ಆಟದಾಡುವ ಮಗುವಿನ ಸ್ವಾತಂತ್ರ್ಯ ಹರಣವಾಗುತ್ತಿರುವ ಈ ಕಾಲಘಟ್ಟದಲ್ಲಿ ಮಗು ಆ ಬಗೆಯ ಸ್ವಾತಂತ್ರ್ಯ ಸಿಗುವ ಹಾಗೆ ಮಾಡೆಂದು ಭೂತವನ್ನು ಕೋರುವ ಸಾಲುಗಳು ಮನಸೂರೆಗೊಳ್ಳುತ್ತವೆ. 'ನಿನ್ನೆಯ ಸಂಜೆ ಮಣ್ಣಲಿ ಆಡಲು ಅಜ್ಜನು ಬೈದನು ನನ್ನ' ಎಂಬೆರಡು ಸಾಲುಗಳು ಜನಪದೀಯ ಪರಿಕಲ್ಪನೆಯಿಂದ ಆಧುನೀಕರಣಗೊಂಡು ಅರೆ ಸುಧಾರಣವಾದಿ ಹಂತ ತಲುಪಿರುವ ಸಾಮಾಜಿಕ ಸ್ಥಿತ್ಯಂತರಗಳು ಮಕ್ಕಳ ಸ್ವಾತಂತ್ರ್ಯವನ್ನೇ ಕಿತ್ತುಕೊಂಡು ಹಿರಿಯರು ಬಯಸಿದ ಹಾಗೆ ಮಕ್ಕಳಿರಬೇಕೆಂಬ ಮನೋದಾರ್ಢ್ಯವನ್ನು ಪ್ರಶ್ನಿಸುವ ಈ ಕಾವ್ಯದ ಪರಿ ಶ್ರೇಷ್ಟವಾದುದು.

ಕನ್ನಡದಲ್ಲಿ ಮಕ್ಕಳ ಸಾಹಿತ್ಯ ಎನ್ನುವ ಈ ಭಾಗವು ವಿಷಯ ಪ್ರವೇಶಿಕೆಯಿಂದ ಪ್ರಾರಂಭಗೊಂಡು ಸಂಕ್ಷಿಪ್ತವಾಗಿ ಕನ್ನಡ ಮಕ್ಕಳ ಕಾವ್ಯದ ಪಕ್ಷಿನೋಟವನ್ನು ಕೊಡುವ ಪ್ರಯತ್ನ ಮಾಡಲಾಗಿದೆ. ಹಾಗೆಂದು ಇರುವ ಮಾಹಿತಿ ಪರಿಪೂರ್ಣ ಎಂದೇನೂ ಅಲ್ಲ. ಮುಖ್ಯವಾಗಿ ಅಧ್ಯಯನದ ಚೌಕಟ್ಟಿನ ಒಳಗೆ ಪ್ರಾತಿನಿಧಿಕವೆನಿಸುವ ಸಂಗತಿಗಳನ್ನಷ್ಟೇ ಕೇಂದ್ರೀಕರಿಸುವ ಪ್ರಯತ್ನ ಮಾಡಲಾಗಿದೆ. ಹಾಗೆ ನೋಡಿದರೆ ಮಕ್ಕಳ ಸಾಹಿತ್ಯ ಕಟ್ಟುವ ಕ್ರಿಯಾತ್ಮಕ ಚಟುವಟಿಕೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡ ಗಂಗಾಧರ ಮಡಿವಾಳೇಶ್ವರ ತುರಮುರಿ, ವೆಂಕಟರಂಗೋಕಟ್ಟಿ, ಚಾ. ವಾಸುದೇವಯ್ಯ, ಎಂ.ಎನ್. ಪುಟ್ಟಣ್ಣ, ಕರ್ಕಿ ಸೂರಿ ವೆಂಕಟಣ್ಣಶಾಸ್ತ್ರಿ, ಶಾಂತಕವಿ,

ಶಿವರುದ್ರಪ್ಪ ಸೋಮಪ್ಪ ಕುಲಕರ್ಣಿ, ವಲ್ಲಭ ಮಹಾಲಿಂಗ ತಟ್ಟಿ, ಜಿ.ಹೆಚ್. ಹೊನ್ನಾಪುರ ಮಠ, ಐರೋep ಶಿವರಾಮಂಛ, ನರಹh •ʼರ್ಮ, ಸುಬೋಧ ರಾಮರಾಂಛ, ಹೊಂಛ'', Cರ್. ಕ√ಣಮ, ಕೊರಂʼVʼ ಶ್ರೀ಼ಖಾಸರಾವ್, ದೇವುಂ಼ ನರ™ಅಹ•ಾ™, ನಾ. ಕಸೂh, ಬೆj ಗೇh ಕಟ •ʼರ್ಮ, ಚೆನ್ನಿಗಸಪ್ಪ ಂಛ√ಿಪುರವಲಿ, I √. ಗುಂಂʼಪ್ಪ, ಜಿ.I ನ್. ಲಕ ಣ ಪೆ, ವೆ,I ಸ್. ಗುಂಂʼಪ್ಪ, ಹೆಚ್.ವೆ, ಸರಸತಮ, ಮೇವುಂp ಮ√h, ≥ •ʼಂಕರಭj, ಸದಾಶಿವಂಛ, ದಾಮೋದರ ಬಾ´ಗಾ, I ಂ.ſ. ™ತಾರಾಮಂಛ, ಟಿ.I ಂ.Cರ್. ಸಾſು, ≥ ಪಾಂಂಸರಂಗರಾಂಛ, Cರ್.ಸ್. ರಾಮರಾವ್, ಭಾರuಸುತ, ಕುವಛರ ವೆಂಕಣ, Bbುʼನ ವೆಂಕk•ʼ, ವರದರಾbು ಹುJುಲಗೋ'', ಸಂಗಮೇ•ʼ ಹೊಸಮಣ ಗುರುಪಾದಸಾſು ˇರೇಮಠ, F ʼುſೀ•ʼ, •ʼಂ.ಗು. ≥ಾದಾರ್, ಪರ•ುರಾಮ ತ್ರಗಾರ, bಗು ϵುಂಛದರ್ಶಿ,∞ I ಸ್.ſ. ಶ್ರೀ಼ಖಾಸರಾವ್, ರ™ಕಪುuಗೆ, E•ʼರ ಕವಛರ, ಖುಪವಛ, I .ಕೆ. ರಾಮೇ•ʼರ, ≥I ಸ್. ರುಕಮಿ, ಹ.ರಾ. PΩಂಛೂರ, Bನುಪವಛ ಖುಂbನ, ಸುಗ್ರಮಣಂ, ಮನೋಹರ ಬಾಲಚಂದ್ರ Vಾs'ೀQರ, ≥I ಸ್. ಸನΩ, ಘಾ.≥. ಪಾಟೀ√, ಸುಮuೀಂದ್ರ ನಾpಗ, ನಾ. pಸೋb, ಶ್ರೀ ರſ, ಸಂಪj ಉರು ſ•ʼನಾv, ರಾb•ʼೀQರ ಭೂಸನೂರು ಮಠ, Bಪ್ಪಾಸಾſು, I ಂ.p. ಗೋಗೇh, ≥I ಸ್. ಸಾſು, ≥ಜಿ. ರಮೇ•ʼ, Bsಾರಾಂಛ ಸಾಲೀಮಣ ಲPೀನಾರಾಂಛಣ ಭj್ರರು, ಗಾJುu ಮೂರu, bಂಗನಾv ಕಂಚಾಣಿ, ಚಂದ್ರೇಗ•ಂʼ ಕುಲಕರ್ಣಿ, ರಾcʼೀಂದ್ರ ಗಂಾದ, I .ϵ. Bಂಗp, B•ʼೋಕ ಚೋ''ಗುಂʼ, E•ʼರ ಕಪಾಸೆ, E•ʼh ಭಕ್, F ವಛತನಂಛ ʼರಾb, ಂಾ. ಕರſೀರ ಪ್ರಭು ಕಾಲಗೊಂಂʼ, ಕſತಾ ಕಟ, ™ϵ. ಕಟಕುವಛರ, ಗಂಗಾಧರ ನಂΩ, Uತಾ ಶ್ರೀ಼ಖಾಸ್, ಗುರುರಾb ಬೆಣಕ√, ಚನ್ನಿಗಸಪ್ಪ ಹೊಸಮಂಸತಾwf(, ಚೆನ್ನſೀರ ಕಣſ, ಖಗಣ ಕುಂಟಿ, ಭಾUರw ಹೆಗಂʼ, I ಚ್.I ಂ. ಭಾನು, ರಾb•ʼೀQರ ಕುಕುರಿದಾ, I ಸ್. ರಾಧೇ•ʼ ತೋ'ಾp, ರಾcʼೀ•ʼhರಾವ್, ರಾಮಚಂದ್ರ ಪಾಟೀಲ, ಂಛು.Cರ್. ಲಲಿತಾ, ಲಕ ಣ ಕಂದಕೂರ, ಮುದು uೀvʼಹ´ Dವರೆಲ್ಲ ಕನ್ನಂʼ ಮಕ" ಸಾˇತ ಕೇತ್ರದಲ್ಲಿ ದುpದ ಕſಗ'ು.

**ಕೊನೆ ಟಿಪ್ಪಣಿಗಳು**

೧. ಕನ್ನಡ ವಿಷಯ ವಿಶ್ವಕೋಶ; ಪು. ೯೭೭.

೨. ಮಕ್ಕಳ ಸಾಹಿತ್ಯ ಒಂದಿಷ್ಟು ಮಾತುಕತೆ (ತ್ರೈಮಾಸಿಕ) ಸಂಚಿಕೆ ೨೦; ಪುಟ ೨.

೩. ಅದೇ; ಪುಟ ೪.

೪. ಅದೇ; ಪುಟ ೫.

೫. ಅದೇ; ಪುಟ ೫.

೬. ಲನೇ ತರಗತಿಯ ಇಂಗ್ಲೀಷ್ ಪಠ್ಯಪುಸ್ತಕ; ಪುಟ ೮೯.

೭. ಭಾರತೀಯ ಮಕ್ಕಳ ಸಾಹಿತ್ಯ ಸಮೀಕ್ಷೆ; ಡಾ. ನಿರುಪಮಾ (ಲೇ.); ಪುಟ ೧.

೮. ಅದೇ; ಪುಟ ೬.

೯. ಅದೇ; ಪುಟ ೭.

೧೦. ಅದೇ; ಪುಟ ೧೮.

೧೧. ಅದೇ; ಪುಟ ೨೪೫.

೧೨. ಅದೇ; ಪುಟ ೨೫೫.

೧೩. ಅದೇ; ಪುಟ ೨೬೯.

೧೪. ಅದೇ; ಪುಟ ೨೬೯.

೧೫. ಅದೇ; ಪುಟ ೧೫೦.

೧೬. ಅದೇ; ಪುಟ ೧೫೫.

೧೭. ಅದೇ; ಪುಟ ೧೮೯.

೧೮. ಅದೇ; ಪುಟ ೧೯೭.

೧೯. ಅದೇ; ಪುಟ ೧೯೭.

೨೦. ಅದೇ; ಪುಟ ೩೧೯.

೨೧. ಅದೇ; ಪುಟ ೩೩೪.

೨೨. ಕನ್ನಡ ಸಾಹಿತ್ಯ ಕೋಶ; ಲೇ: ರಾಜಪ್ಪ ದಳವಾಯಿ; ಪುಟ ೪೧.

೨೩. ಭಾರತೀಯ ಮಕ್ಕಳ ಸಾಹಿತ್ಯ ಸಮೀಕ್ಷೆ; ಲೇ: ನಿರುಪಮಾ; ಪುಟ ೬೨.

೨೪. 'SPRINGS' ದ್ವಿತೀಯ ಪಿಯುಸಿ ಇಂಗ್ಲೀಷ್ ಪಠ್ಯಪುಸ್ತಕ.

೨೫. ತಟ್ಟು ಚಪ್ಪಾಳೆ ಪುಟ್ಟ ಮಗು; ಸಂ: ಬೊಳುವಾರು ಮಹಮದ್ ಕುಂಞ್; ಪುಟ ೨೯೦.

೨೬. ಭಾರತೀಯ ಮಕ್ಕಳ ಸಾಹಿತ್ಯ ಸಮೀಕ್ಷೆ; ಲೇ: ನಿರುಪಮಾ; ಪುಟ ೬೨.

೨೭. ಅದೇ; ಪುಟ ೬೩.

೨೮. ಅದೇ; ಪುಟ ೬೩.

೨೯. ಕನ್ನಡ ಸಾಹಿತ್ಯ ಕೋಶ; ಲೇ: ರಾಜಪ್ಪ ದಳವಾಯಿ; ಪುಟ ೧೦೬-೧೦೭.

೩೦. ತಟ್ಟು ಚಪ್ಪಾಳೆ ಪುಟ್ಟ ಮಗು; ಸಂ: ಬೊಳುವಾರು ಮಹಮದ್ ಕುಂಞ್; ಪುಟ ೧೫೨.

೩೧. ಅದೇ; ಪುಟ ೨೩೨.

೩೨. ಭಾರತೀಯ ಮಕ್ಕಳ ಸಾಹಿತ್ಯ ಸಮೀಕ್ಷೆ; ಲೇ: ನಿರುಪಮಾ; ಪುಟ ೬೫.

೩೩. ತಟ್ಟು ಚಪ್ಪಾಳೆ ಪುಟ್ಟ ಮಗು; ಸಂ: ಬೊಳುವಾರು ಮಹಮದ್ ಕುಂಞ್; ಪುಟ ೧೫೪.

೩೪. ಅದೇ; ಪುಟ ೨೮೦.

೩೫. ಮಕ್ಕಳ ಸಾಹಿತ್ಯ ಶತಮಾನ; ಸಂ: ಆನಂದ ವಿ. ಪಾಟೀಲ, ನ. ರವಿಕುಮಾರ; ಪುಟ ೧೧.

೩೬. ತಟ್ಟು ಚಪ್ಪಾಳೆ ಪುಟ್ಟ ಮಗು; ಸಂ: ಬೊಳುವಾರು ಮಹಮದ್ ಕುಂಞ್; ಪುಟ ೨೩೦.

೩೭. ಮಕ್ಕಳ ಸಾಹಿತ್ಯ ಶತಮಾನ; ಸಂ: ಆನಂದ ವಿ. ಪಾಟೀಲ, ನ. ರವಿಕುಮಾರ; ಪುಟ ೧೩.

೩೮. ಕಂದನ ಕಾವ್ಯಮಾಲೆ; ಲೇ: ಜಿ.ಪಿ. ರಾಜರತ್ನಂ; ಪುಟ ೩೨.

೩೯. ಅದೇ; ಪುಟ ೮೨.

೪೦. ಅದೇ; ಪುಟ ೫೦.

೪೧. ಕುವೆಂಪು ಸಾಹಿತ್ಯ ಲೋಕ; ಲೇ: ಡಾ. ಡಿ.ಕೆ. ರಾಜೇಂದ್ರ; ಪುಟ ೧೨೬

೪೨. ತಟ್ಟು ಚಪ್ಪಾಳೆ ಪುಟ್ಟ ಮಗು; ಸಂ: ಬೊಳುವಾರು ಮಹಮದ್ ಕುಂಞ್; ಪುಟ ೧೩೬

೪೩. ಅದೇ; ಪುಟ ೧೭೮.

೪೪. ಅದೇ; ಪುಟ ೭೮.

೪೫. ಅದೇ; ಪುಟ ೧೫೬.

೪೬ ಅದೇ; ಪುಟ ೧೦೦.

೪೭. ಅದೇ; ಪುಟ ೭೨.

೪೮. ಸುಧಾ ವಾರಪತ್ರಿಕೆ; ೧೩ ಸೆಪ್ಟೆಂಬರ್ ೨೦೧೨; ಸಂ: ಕೆ.ಎನ್. ತಿಲಕ್‌ಕುಮಾರ್; ಪುಟ ೬೫.

೪೯. ತಟ್ಟು ಚಪ್ಪಾಳೆ ಪುಟ್ಟ ಮಗು; ಸಂ: ಬೊಳುವಾರು ಮಹಮದ್ ಕುಂಞ್; ಪುಟ ೬೪.

೫೦. ಅದೇ; ಪುಟ ೧೭೪.

೫೧. ಅದೇ; ಪುಟ ೧೨೬.

೫೨. ಬಿದ್ದ ಚಂದಿರನ ಒದ್ದು ಓಡಿಸಿದ; ಲೇ: ಸಿಸು ಸಂಗಮೇಶ; ಪುಟ ೧೪.

೫೩. ನಾವು ನಾಳೆಯ ರವಿಗಳು; ಲೇ: ಸಿಸು ಸಂಗಮೇಶ; ಪುಟ ೪.

೫೪. ಎಚ್ಚೆಸ್ವಿ ಸಮಗ್ರ ಮಕ್ಕಳ ಸಾಹಿತ್ಯ; ಲೇ: ಎಚ್‌ಎಸ್. ವೆಂಕಟೇಶಮೂರ್ತಿ; ಪುಟ ೧೫.

೫೫. ಅದೇ; ಪುಟ ೧೬೮.

೫೬. ಮಕ್ಕಳ ಸಾಹಿತ್ಯ ಶತಮಾನ; ಸಂ: ಆನಂದ ವಿ. ಪಾಟೀಲ, ನ. ರವಿಕುಮಾರ; ಪುಟ ೮೦-೮೧.

೫೭. ಮಕ್ಕಳ ಸಾಹಿತ್ಯ ೨೦೦೯; ಸಂ: ಡಾ. ಬಿದರಿ ಚಂದ್ರಕಲಾ; ಪುಟ ೧೧೩.

೫೮. ಮಕ್ಕಳ ಸಾಹಿತ್ಯ ೧೯೯೪; ಸಂ: ಈಶ್ವರ ಚಂದ್ರ ಚಿಂತಾಮಣಿ; ಪುಟ ೭೫.

೫೯. ಮಕ್ಕಳ ಸಾಹಿತ್ಯ ೨೦೦೬; ಸಂ: ಆನಂದ ಪಾಟೀಲ; ಪುಟ ೩೦.

೬೦. ಚಂದ್ರನ ಶಾಲೆ; ಲೇ: ಟಿ.ಎಸ್. ನಾಗರಾಜಶೆಟ್ಟಿ; ಪುಟ ೪೨.

•••

ಅಧ್ಯಾಯ : ಮೂರು

# ಕನ್ನಡದಲ್ಲಿ ಮಕ್ಕಳ ಕಾವ್ಯ ಪರಿಕಲ್ಪನೆ ಮತ್ತು ಸ್ವರೂಪ

೩.೧. ಹಿರಿಯರು ರಚಿಸಿದ ಮಕ್ಕಳ ಕಾವ್ಯ

೩.೨. ಮಕ್ಕಳು ರಚಿಸಿದ ಮಕ್ಕಳ ಕಾವ್ಯ

## ಅಧ್ಯಾಯ : ಮೂರು

# ಕನ್ನಡದಲ್ಲಿ ಮಕ್ಕಳ ಕಾವ್ಯ ಪರಿಕಲ್ಪನೆ ಮತ್ತು ಸ್ವರೂಪ

**ಕ**ನ್ನಡದಲ್ಲಿ ಮಕ್ಕಳ ಕಾವ್ಯ ಸ್ವರೂಪವನ್ನು ಮುಖ್ಯವಾಗಿ ಎರಡು ನೆಲೆಯಲ್ಲಿ ನೋಡಬಹುದು.

೧. ಹಿರಿಯರು ರಚಿಸಿದ ಮಕ್ಕಳ ಕಾವ್ಯ

೨. ಮಕ್ಕಳು ರಚಿಸಿದ ಮಕ್ಕಳ ಕಾವ್ಯ

**೩.೧. ಹಿರಿಯರು ರಚಿಸಿದ ಮಕ್ಕಳ ಕಾವ್ಯ**

ಮುಖ್ಯವಾಗಿ ಹಿರಿಯರು ರಚಿಸಿದ ಮಕ್ಕಳ ಕಾವ್ಯ ಹಿರಿಯರಿಗೂ ಅನ್ವಯಿಸಬಹುದಾದರೂ ಬಹುತೇಕ ಅದು ಮಕ್ಕಳನ್ನು ಕೇಂದ್ರವಾಗಿಟ್ಟುಕೊಂಡೇ ರಚಿಸಲ್ಪಟ್ಟ ಕಾವ್ಯವಾಗಿರುತ್ತದೆ. ಈ ಕಾವ್ಯ ಮಕ್ಕಳಿಗೆ ಇಷ್ಟವಾಗುವಂತೆ ಬಹಳ ಎಚ್ಚರದಿಂದ ಪ್ರಾಸ, ಜೋಡು ನುಡಿ, ಪುನರುಕ್ತಿ ಇತ್ಯಾದಿಗಳನ್ನು ಅಳವಡಿಸಿ, ನೀತಿಯನ್ನು ಉಣಬಡಿಸಿ ಜೊತೆಗೆ ಮನೋರಂಜನೆ ಹಾಗೂ ಜ್ಞಾನ ಪ್ರಸಾರದ ಉದ್ದೇಶವನ್ನು ಕವಿ ಇಲ್ಲಿ ಹೊಂದಿರುತ್ತಾನೆ. ಹಿರಿಯರು ರಚಿಸಿದ ಮಕ್ಕಳಕಾವ್ಯ ಬಹುಮುಖಿ ಸಾಧ್ಯತೆಗಳಿಗೆ ತೆರೆದುಕೊಳ್ಳುವಂತದ್ದು. ಅಂತಹ ಕೆಲ ಕಾವ್ಯಗಳ ಚರ್ಚೆಯನ್ನು ಪ್ರಸ್ತುತ ಅಧ್ಯಾಯದ ಈ ಮೊದಲನೇ ಭಾಗದಲ್ಲಿ ಮಾಡಲಾಗಿದೆ ಹಾಗೂ ಇಲ್ಲಿನ ಬಹುಪಾಲು ಕವಿತೆಗಳು ಅಪ್ರಕಟಿತ ಜನಪದ ಪರಂಪರೆಯ ಭಾಗವಾಗಿದ್ದು ಇಂದಿಗೂ ನಮ್ಮ ನಡುವೆ ಬಳಕೆಯಲ್ಲಿರುವ ಮಕ್ಕಳ ಕಾವ್ಯಗಳನ್ನೇ ಬಳಸಿಕೊಂಡಿರುವುದರಿಂದ ಇವುಗಳಿಗೆ ಪ್ರತ್ಯೇಕ ಟಿಪ್ಪಣಿಗಳನ್ನು ನೀಡಿರುವುದಿಲ್ಲ.

ಹತ್ತಿಕಟಿಗಿ ಬತ್ತಿಕಟಿಗಿ
ಭಾವನೂರು ಬಸವನೂರ
ಕೈಕೈ ಧೂಳಗೈ
ಪಂಚಂ ಪಗಡಂ
ನೆಲಮಟ ಹನುಮ
ದಾಸರ ಬರುಮ

ತಿಪ್ಪಿ ಮ್ಯಾಲೆ ಕೋಳಿ
ರಗತ್ತ ಬೋಳಿ
ಸೊಂಟ್ಯಾ ಸಕ್ರ್ಯಾ?

ಕೈ ಕೈ ಎತ್ತಾಗೋದ್ವು
ಕದದಿಂದೆ ಹೋದ್ವು
ಕದ ಏನ್ ಕೊಡ್ತು
ಚಕ್ಕಿ ಕೊಡ್ತು
ಚಕ್ಕಿ ಏನ್ ಮಾಡ್ದಿ
ವಲಿಯಾಕ ಹಾಕ್ದೆ
ವಲಿ ಏನ್ ಕೊಡ್ತು
ಬೂದಿ ಕೊಡ್ತು
ಬೂದಿ ಏನ್ ಮಾಡ್ದಿ
ತಿಪ್ಪಿಗೊಯ್ದು ಹಾಕ್ದೆ
ತಿಪ್ಪಿ ಏನ್ ಕೊಡ್ತು
ಗೊಬ್ರ ಕೊಡ್ತು
ಗೊಬ್ರ ಏನ್ ಮಾಡ್ದಿ
ಹೊಲಕ್ಕ ಹಾಕ್ದೆ
ಹೊಲ ಏನ್ ಕೊಡ್ತು
ಜೋಳ ಕೊಡ್ತು
ಜೋಳ ಏನ್ ಮಾಡ್ದಿ
ಚಲೋ ಚಲೋವೆಲ್ಲ ನಾನಿಟಗಂದೆ
ಕೆಟ್ಟ ಕೆಟ್ಟದ್ದವೆಲ್ಲ ಕುಂಬಾರಗ ಕೊಟ್ಟೆ.

ಕನ್ನಡದ ಮೌಖಿಕ ಪರಂಪರೆಯ ಅತ್ಯಂತ ಜನಪ್ರಿಯ ಮಕ್ಕಳ ಕಾವ್ಯಗಳಲ್ಲಿ ಇದು ಕೂಡ ಒಂದು. ಮುಖ್ಯವಾಗಿ ಮಕ್ಕಳು ಈ ಕಾವ್ಯವನ್ನು ಆಟದ ಜೊತೆಗೆ ಹಾಡುತ್ತ ನಲಿಯುವ ಪ್ರಾಸ ಇದಾಗಿದೆ. ಮಕ್ಕಳೆಲ್ಲ ಹಸ್ತಗಳನ್ನು ಇಟ್ಟು ರಂಜನೆಯಾಗಿ ನಾಲ್ಕಾರು ಜನ ಕೂಡಿ ಎಲ್ಲ ಎರಡು ಕೈಯನು ಜೋಡಿಸಿಟ್ಟು, ಅಲ್ಲಿ ಒಂದು ಕೈಯಿಂದ ಪ್ರಾರಂಭಮಾಡಿ ಸರಣಿ ರೀತಿಯಲ್ಲಿ ಎಲ್ಲ ಕೈಗಳ ಮೇಲೆ ಸವಾರಿ ಮಾಡುತ್ತ ಮೇಲಿನ ಹಾಡನ್ನು ಗುನುಗುವಾಗ ಯಾರ ಕೈಗಳ ಸರಣಿ ಬಂದಾಗ ಆ ಹಾಡಿನ ಸೊಂಟ್ಯಾ, ಸಕ್ರ್ಯಾ? ಎಂಬ ಸಾಲುಗಳು ಬರುತ್ತವೆಯೋ ಆಗ ಆ ಕೈಗಳನ್ನು ಸವಾರಿ ಮಾಡುವ ಕೈ ಎತ್ತಿ ಹಿಡಿದು ಸೊಂಟ್ಯಾ, ಸಕ್ರ್ಯಾ ಎಂದು ಕೇಳಿದಾಗ ಒಂದು ಹಂತ ಕೊನೆಗೊಂಡರೆ ಹಾಡಿನ ಎರಡನೇ ಹಂತ ಶುರುವಾಗುವಾಗ ಎಲ್ಲರು ತಮ್ಮ ಕೈಗಳನ್ನು ಬೆನ್ನ ಹಿಂದೆ ಇಟ್ಟುಕೊಳ್ಳುತ್ತಾರೆ. ಆಗ ಮತ್ತೆ ಕೈಯ್ ಕೈಯ್ ಎತ್ತಾಗೋದ್ವು ಎಂಬ ಸಾಲು ಶುರುವಾಗುತ್ತದೆ. ಕೊನೆಯಲ್ಲಿ ಹಾಡು ಪೂರ್ಣಗೊಳ್ಳುವ ಮೂಲಕ ಆಟವೂ ಪೂರ್ಣಗೊಳ್ಳುತ್ತದೆ.

ಈ ಶಿಶುಪ್ರಾಸದಲ್ಲಿ ಕೆಲ ಮೂಲರೂಪಗಳು ಭಿನ್ನವಾಗಿರುವುದನ್ನು ಇಲ್ಲಿ ಗಮನಿಸಬಹುದು. ಇಲ್ಲಿ ಬರುವ 'ದಾಸರ ಬರುಮ' ಎಂಬುದರ ಮೂಲರೂಪ 'ಧಾತರ ಧರುಮ' ಎಂದು, 'ರಗತ್ತ ಬೋಳಿ' ಎಂಬುದು ರಗುತದ ಹೋಳಿ ಎಂದು, 'ಕೈ ಕೈ ಧೂಳಗೈ' ಎನ್ನುವುದು ಕಾಯ ಕಾಯ ಧೂಳಕಾಯವೆಂತಲೂ 'ಬಾವನೂರ, ಬಸವನೂರ' ಎಂಬುದು ಬಾಯುವ ಅಣ್ಣಾವ್ರು, ಬಸಿಯುವ ಅಣ್ಣಾವ್ರು ಎಂದು ತಿಳಿಯಬೇಕಾಗಿದೆ.

ಆಟದ ಹಾಗೂ ಮನೋರಂಜನೆಯ ದೃಷ್ಟಿಯಿಂದ ಈ ಪದ್ಯಕ್ಕೆ ಒಂದು ಸಾಧ್ಯತೆಯಿದ್ದರೆ, 'ಅರ್ಥವಿಸ್ತಾರ'ವು ಈ ಪದ್ಯದ ಇನ್ನೊಂದು ಸಾಧ್ಯತೆಯಾಗಿದೆ. ಇದನ್ನು ತಾತ್ವಿಕವಾಗಿ ಹೀಗೆ ಅರ್ಥೈಸಬಹುದು. ಹತ್ತಿಕಟಿಗಿ ಎಂದರೆ ಜೀವ ಇರುವ ದೇಹವೆಂದು ಮರಣಾನಂತರ ಬತ್ತಿ ಹೋಗುವ ದೇಹವನ್ನು ಬತ್ತಿಕಟಿಗಿ ಎಂತಲೂ ಬಾವನೂರ ಎಂದರೆ ಸತ್ತನಂತರ ಈ ದೇಹವನ್ನು ಬಾವು ಆವರಿಸುತ್ತದೆ. ಹೀಗಾಗಿ ನಾವು ಬಾಯುವ ಅಣ್ಣಾವ್ರು ಎಂದು, ಬಾವು ಬಂದ ಕೆಲ ಘಂಟೆಗಳ ತರುವಾಯ ದೇಹದಿಂದ ಕೀವು ಬಸಿಯುತ್ತೆ. ಆಗ ನಾವು ಬಸಿಯುವ ಅಣ್ಣಾವ್ರು ಆಗುತ್ತೇವೆ, ಅದಕ್ಕೆ ಬಸವನೂರ ಎಂದು, 'ಕೈ ಕೈ ಧೂಳಗೈ' ಎಂಬುದು ದೇಹ ಮಣ್ಣಲ್ಲಿ ಲೀನವಾಗುವುದನ್ನು ಸೂಚಿಸುತ್ತದೆ. ಬದುಕಿದ್ದಾಗ ಪಂಚೇಂದ್ರಿಯಗಳಿಂದಲೂ, ಮರಣ ಹೊಂದಿದಾಗ ಪಂಚಭೂತಗಳಲ್ಲಿ ಬದುಕನ್ನು ಕಳೆಯುವ ಬದುಕಿನ ಅನಿವಾರ್ಯ ಸಹಯೋಗದಲ್ಲೇ ಬದುಕನ್ನು ಕಳೆಯುವ ಬದುಕಿನ ಅನಿವಾರ್ಯತೆಯನ್ನು ಪಂಚಂ ಪಗಡಂ ಎಂಬುದು ಸೂಕ್ಷ್ಮವಾಗಿ ಧ್ವನಿಸುತ್ತದೆ. ಬಳಿಕ ಜೀವ ತ್ಯಜಿಸಿದ ದೇಹವನ್ನು ಊಳುವುದಕ್ಕಾಗಿ ನೆಲ ಕಡಿಯುವ ಪರಿಪಾಠಗಳು ನಮ್ಮಲ್ಲಿ ಉಂಟು. ನೆಲಕಡಿ ಹನುಮ ಸಾಲು ಈ ಪರಿಪಾಠಗಳನ್ನು ಸಂಕೇತಿಸುತ್ತದೆ. ಶವ ತೆಗೆದುಕೊಂಡು ಹೋಗುವಾಗ ಸರ್ವೇಸಾಮಾನ್ಯವಾಗಿ ಎಲ್ಲ ಕಡೆ ಪೂಜಾರರು, ಹಲಗೆಯವರು, ಸ್ವಾಮಿಗಳು ಇವರೆಲ್ಲರಿಗೂ, ಜೋಳ, ಗೋಧಿ ಇತ್ಯಾದಿ ಧರ್ಮ· ಮಾಡುತ್ತಾರೆ. ಧಾತರೆಂದರೆ ಶ್ರೀಮಂತರು ಅಂದರೆ ಅನ್ನದಾತರೆಂದು, ಅನ್ನದಾತರೆಂದರೆ ಕೊನೆಗೆ ಒಕ್ಕಲಿಗನೆಂಬ ಅರ್ಥ ಬರುವುದನ್ನು ಕಾಣಬಹುದು. ಕೆಲವರಂತೂ ಬಂಡಿಗಟ್ಟಲೇ, ಟ್ರ್ಯಾಕ್ಟರ್‌ಗಟ್ಟಲೆ ದಾನ ಮಾಡುವ ಸಂಪ್ರದಾಯಗಳು ಹಳ್ಳಿಗಳಲ್ಲಿ ಇಂದಿಗೂ ಚಾಲ್ತಿಯಲ್ಲಿರುವುದನ್ನು ಕಾಣಬಹುದು. ಇಲ್ಲಿಯವರೆಗೂ ಬದುಕಿನ ಚರಿತ್ರೆಯನ್ನು ಒಳಗೊಂಡ ಈ ಕಾವ್ಯ ಒಂದೇ ಸಲ ಎತ್ತರಕ್ಕೆ ಹೋಗುತ್ತದೆ. ಅದು 'ತಿಪ್ಪಿ ಮ್ಯಾಲೆ ಕೋಳಿ' ಎಂಬ ಸಾಲು ಬಂದಾಗ, ಈ ಸಾಲಿಗೆ ಇಲ್ಲಿ ಆಳವಾದ ಅರ್ಥವಿದೆ. ಭಾರತ ಕೃಷಿ ಪ್ರಧಾನ ರಾಷ್ಟ್ರವಾಗಿರುವುದರಿಂದ ರೈತನೇ ಈ ದೇಶದ ಬೆನ್ನೆಲುಬು ಆಗಿದ್ದು ಅಭಿವೃದ್ಧಿ ಎಂಬುದು ಅವನ ಶ್ರಮದಲ್ಲಿ ಅಡಗಿ ಕುಳಿತಿದೆ. ರೈತ ಹೊತ್ತು ಮೂಡುವ ಮುನ್ನವೇ ಎದ್ದು ತನ್ನ ಕೃಷಿ ಚಟುವಟಿಕೆಗಳನ್ನು ಆರಂಭಿಸುತ್ತಾನೆ. ರೈತ ಎಚ್ಚರಗೊಳ್ಳಲು ಇಂದಿನಂತೆ ಅಂದು ಅಲಾರಾಂಗಳ ಸದ್ದು ಇರಲಿಲ್ಲ. ಈ ಹಿನ್ನೆಲೆಯಲ್ಲಿ ರೈತನನ್ನು ತನ್ನ ಕೆಲಸಕ್ಕೆ ಅಣಿಗೊಳಿಸಲು ಎಚ್ಚರಗೊಳಿಸುವ ಕೆಲಸವನ್ನು ಕೋಳಿ ಮಾಡುತ್ತಿತ್ತು. ದೇಶ ರೈತನನ್ನು ಅವಲಂಬಿಸಿದರೆ, ರೈತ ಕೋಳಿಯನ್ನು ಅವಲಂಬಿಸಿದ್ದಾನೆ. ದೇಶದ ಅಭಿವೃದ್ಧಿಯಲ್ಲಿ ಕೋಳಿಯ

ಪಾತ್ರವು ಪರೋಕ್ಷವಾಗಿ ಅಡಗಿರುವುದನ್ನು ಕಾಣಬಹುದು. ಈ ಕಾರಣದಿಂದ ಕೋಳಿಗೆ ಮಹತ್ವದ ಸ್ಥಾನ ಇದೆ. ತಾತ್ವಿಕವಾಗಿ ಇಷ್ಟೊಂದು ಮೇಲುಸ್ತರದಲ್ಲಿರುವ ಕೋಳಿ ತನ್ನ ಸ್ಥಾನವನ್ನು ಮರೆತು ಮತ್ತೆ ತಿಪ್ಪಿ ಕೆದರುವ ಚಾಳಿಯನ್ನು ಮುಂದುವರೆಸುತ್ತದೆ. ಹೀಗೆ ಮನುಷ್ಯ ಸಹ ತನ್ನ ವಿವೇಕ, ಜ್ಞಾನ-ವಿಜ್ಞಾನ-ಸಂಶೋಧನೆಗಳಿಂದ ತುಂಬಾ ಎತ್ತರದಲ್ಲಿದ್ದರೂ ತನ್ನ ಸ್ಥಾನವನ್ನು, ಬದುಕಿನ ಮಹತ್ವವನ್ನು ಅರಿಯದೇ ಕೆಲ ಕ್ಷುಲ್ಲಕ ಸಂಗತಿಗಳನ್ನು ಕೆದಕುತ್ತ ಅದಕ್ಕಾಗಿ ಕಾಲಹರಣ ಮಾಡುವುದರ ಪ್ರತೀಕವಾಗಿಯೇ ತಿಪ್ಪಿ ಮ್ಯಾಲೆ ಕೋಳಿ ಎಂಬ ಸಾಲುಗಳು ಈ ಪದ್ಯದಲ್ಲಿ ಬಂದಿವೆ. ಮುಂದಿನ ಸಾಲು 'ರಗತ್ತ ಬೋಳಿ' ಎಂದರೆ ಮನುಷ್ಯ ಜನ್ಮ ಜನ್ಮಾಂತರದಲ್ಲೂ ರಕ್ತದ ಜೊತೆಗೆ ಅವಿನಾಭಾವ ಸಂಬಂಧ ಹೊಂದಿರುವುದನ್ನು ತಿಳಿಸುತ್ತದೆ. ಕಾರಣ ರಕ್ತರಹಿತವಾಗಿ ಮನುಷ್ಯನ ದೇಹವನ್ನು ನಾವು ಕಲ್ಪಿಸಿಕೊಳ್ಳುವುದು ಅಸಾಧ್ಯವೇ ಸರಿ. ಕೊನೆಯ ಸಾಲು ಸೊಂಟ್ಯಾ, ಸಕ್ರ್ಯಾ ಎಂಬುದು ಜೀವನ ಎಂಬುದು ವ್ಯಾಖ್ಯಾನಕ್ಕೆ ಸ್ಪಷ್ಟವಾಗಿ ನಿಲುಕದ್ದಾಗಿದ್ದು ಅದು ಅವರವರ ಭಾವಕ್ಕೆ ಬಿಟ್ಟದ್ದಾಗಿದ್ದು ಅದನ್ನು ಹೀಗೆ ಎಂದು ನಿರ್ದಿಷ್ಟವಾಗಿ ಹೇಳಲಾಗದು ಎಂಬುದನ್ನು ಸೂಚಿಸುತ್ತದೆ. ಇಲ್ಲಿಯವರೆಗೂ ಆಟದ ಒಂದು ಹಂತ ಮುಕ್ತಾಯವಾದರೆ, ಬಳಿಕ ಮಕ್ಕಳೆಲ್ಲರು ತಮ್ಮ ಕೈಗಳನ್ನು ಬಗಲಲ್ಲಿ ಅಡಗಿಸಿಟ್ಟುಕೊಂಡಿರಬೇಕು. ಬಗಲಲ್ಲಿ ಅಡಗಿಸಿಟ್ಟುಕೊಂಡ ಕೈಗಳನ್ನು ಕಪಾಳಕ್ಕೆ ಹಚ್ಚಿ ನೋಡುತ್ತಾರೆ. ಹೀಗೆ ಕಪಾಳಕ್ಕೆ ಹಚ್ಚಿ ನೋಡಿದಾಗ ಯಾರ ಕೈಗಳು ಬೆಚ್ಚಗಿರುತ್ತವೆಯೋ ಅವರು ಆಟದಲ್ಲಿ ಉಳಿದರೆ, ತಣ್ಣಗಾದ ಕೈಗಳವರು ಆಟದಿಂದ ಹೊರಗುಳಿಯಬೇಕಾಗುತ್ತದೆ. (ಒಬ್ಬೊಬ್ಬರಾಗಿ ಕೈಗಳನ್ನು ಬಗಲಲ್ಲಿ ಇರಿಸಿಕೊಳ್ಳುತ್ತ ಬಂದಾಗ ಸಹಜವಾಗಿಯೇ ಮೊದಲು ಬಗಲಲ್ಲಿ ಕೈಗಳನ್ನಿರಿಸಿಕೊಂಡ ಸ್ಪರ್ಧಿಯ ಕೈಗಳು ಬೆಚ್ಚಗೆ ಇರುತ್ತವೆ. ಮತ್ತು ಕೊನೆಯಲ್ಲಿ ಬಗಲಲ್ಲಿ ಇಟ್ಟುಕೊಂಡ ಸ್ಪರ್ಧಿಯ ಕೈಗಳು ತಣ್ಣಗೆ ಇರುತ್ತವೆ). ಇಲ್ಲಿ ಮನುಷ್ಯನ ದೇಹ ಸುಡುತ್ತಿರುವುದು ಜೀವಂತಿಕೆಯ ಲಕ್ಷಣವಾದರೆ, ತಣ್ಣಗಾಗುವುದು ಮರಣದ ಸ್ಥಿತಿಯನ್ನು ತಿಳಿಸುತ್ತದೆ. ಜೀವನ್ಮರಣದ ಸತ್ಯಗಳನ್ನು ನಮ್ಮ ಜನಪದರು ಆಟದ ಕ್ರಿಯೆಯೊಳಗೂ ಮುಚ್ಚಿಟ್ಟಿರುವುದು ಈ ಪದ್ಯದ ವೈಶಿಷ್ಟ್ಯವಾಗಿದೆ. ಬಳಿಕ ತುಂಟತನದ ಪ್ರಶ್ನೆಗಳ ಸರಮಾಲೆ ನಮ್ಮ ಕಣ್ಣೆದುರು ಬರುತ್ತದೆ. ಶವವನ್ನು ಹೂತಿಟ್ಟು ಬಂದ ಬಳಿಕ ಕಾಯ ಕಾಯ ಎಲ್ಲಿ ಹೋತು ಎಂಬ ಪ್ರಶ್ನೆ ಮೂಡುತ್ತದೆ. ಆಗ ಅದಕ್ಕೆ ಉತ್ತರವಾಗಿ ಕದದ ಸಂದ್ಯಾಗ ಹೋತು ಎಂಬ ಮಾತಿದೆ. ಕದ ಎಂದರೆ ಇಲ್ಲಿ ಮತ್ತೆ ಮನೆಯೇ. ಅಂದರೆ ಪುನರಪಿ ಜನನದ ಕಲ್ಪನೆ ಇದಾಗಿದೆ. ಪುನರ್ಜನ್ಮ ಮನುಷ್ಯನಿಗೆ ಬರುವುದು ಅತ್ಯಂತ ಅಮೂಲ್ಯವಾದ ಈ ಕಾಯವನ್ನು ಕಾಯಕಕ್ಕಾಗಿ ಸದ್ವಿನಿಯೋಗಗೊಳಿಸಬೇಕೆಂಬ ಹಿನ್ನೆಲೆಯಲ್ಲಿಯೇ ಎಂಬ ಸಂಗತಿಯು ಇಲ್ಲಿದೆ. ಮುಂದೆ ಬರುವಂತಹ ಕದ ಏನ್ ಕೊಡ್ತು. ಚಕ್ಕಿ ಕೊಡ್ತು, ಚಕ್ಕಿ ಏನ್ ಮಾಡ್ದಿ, ವಲಿಯಾಕ ಹಾಕ್ದೆ, ವಲಿ ಏನ್ ಕೊಡ್ತು, ಬೂದಿ ಕೊಡ್ತು, ಬೂದಿ ಏನ್ ಮಾಡ್ದಿ, ತಿಪ್ಪಿಗೊಯ್ದು ಹಾಕ್ದೆ, ತಿಪ್ಪಿ ಏನ್ ಕೊಡ್ತು, ಗೊಬ್ಬರ ಕೊಡ್ತು, ಗೊಬ್ಬರ ಏನ್ ಮಾಡ್ದಿ, ಹೊಲಕ್ಕ ಹಾಕ್ದೆ, ಹೊಲ ಏನ್ ಕೊಡ್ತು, ಜೋಳ ಕೊಡ್ತು ಎನ್ನುವ ಸಾಲುಗಳು

ಮನುಷ್ಯ ಹೇಗೆ ನಿತ್ಯದ ಜಂಜಾಟಗಳೊಂದಿಗೆ ಬದುಕಿನ ವ್ಯಾಪಾರದಲ್ಲಿ ತಲ್ಲೀನನಾಗಿದ್ದಾನೆ ಎಂಬುದನ್ನು ಸೂಕ್ಷ್ಮವಾಗಿ ಧ್ವನಿಸುತ್ತದೆ. ಕೊನೆಯಲ್ಲಿ ಬರುವ ಜೋಳ ಏನ್ ಮಾಡ್ದಿ? ಚಲೋ ಚಲೋವೆಲ್ಲ ನಾನಿಟಗಂದೆ, ಕೆಟ್ಟ ಕೆಟ್ಟದ್ದವೆಲ್ಲ ಕುಂಬಾರಗ ಕೊಟ್ಟೆ ಎನ್ನುವ ಸಾಲುಗಳು, ಮನುಷ್ಯ ಬದುಕಿನಲ್ಲಿ ಏನೇ ಸಾಧನೆ ಮಾಡಿದರೂ ಆ ಸಾಧನೆಗೆ ತನ್ನ ಪರಿಶ್ರಮ, ಪ್ರಯತ್ನ ತಿಳುವಳಿಕೆಗಳೇ ಕಾರಣ ಎಂದು ಆ ಸಾಧನೆ ಪ್ರತಿಫಲಗಳು ತನಗೆ ಸಿಗಬೇಕೆಂದು ಹಂಬಲಿಸುತ್ತಾನೆ. ಆದರೆ ಯಾವುದೋ ಪ್ರಯತ್ನದಲ್ಲಿ ವಿಫಲನಾದರೆ ಅದರ ಹೊಣೆಯನ್ನು, ಜವಾಬ್ದಾರಿಯನ್ನು ತಾನು ಹೊತ್ತುಕೊಳ್ಳದೇ ದೇವರ ಕಡೆ ಬೆರಳುಮಾಡಿ ತೋರಿಸುತ್ತ ಆತನನ್ನು ಗುರಿ ಮಾಡುತ್ತಾನೆ. ಇದು ಮನುಷ್ಯನ ಅಲ್ಪತನಕ್ಕೆ ಸಾಕ್ಷಿಯಾಗಿದೆ. ಇಂತಹ ಮಹತ್ವದ ಸಂಗತಿಗಳನ್ನು ಕೊನೆಯ ಸಾಲುಗಳು ಸಂಕೇತಿಸುತ್ತವೆ.

ಕೆಲವು ಪ್ರದೇಶಗಳಲ್ಲಿ ಈ ಪದ್ಯವು 'ಕುಂಬಾರಗ ಕೊಟ್ಟೆ' (ಈ ಹಿಂದೆ ಉಲ್ಲೇಖಿಸಿದ ಪದ್ಯದ ಕೊನೆಯ ಸಾಲು) ಎನ್ನುವಲ್ಲಿಗೆ ಮುಕ್ತಾಯವಾದರೆ, ಇನ್ನು ಕೆಲವು ಪ್ರದೇಶಗಳಲ್ಲಿ ಈ ಪದ್ಯವು ಇನ್ನು ಮುಂದುವರೆಯುವ ಹಾಗೂ ಪಾಠಾಂತರದ ರೂಪಗಳನ್ನು ಕಾಣಬಹುದು.

ಹತ್ತಿಕಟಗಿ ಬತ್ತಿಕಟಗಿ
ಭಾವನೂರು ಬಸವನೂರ
ಕೈಕೈ ಧೂಳಗೈ
ಪಂಚಂ ಪಗಡಂ
ನೆಲಮಟ ಹನುಮ
ದಾಸರ ಬರುಮ
ತಿಪ್ಪಿ ಮ್ಯಾಲೆ ಕೋಳಿ
ರಗತ್ತ ಬೋಳಿ
ಸೊಂಟ್ಯಾ ಸಕ್ರ್ಯಾ?

ಕೈ ಕೈ ಎತ್ತಾಗೋದ್ವು
ಕದದಿಂದೆ ಹೋದ್ವು
ಕದ ಏನ್ ಕೊಡ್ತು
ಚಕ್ಕಿ ಕೊಡ್ತು
ಚಕ್ಕಿ ಏನ್ ಮಾಡ್ದಿ
ವಲಿಯಾಕ ಹಾಕ್ದೆ
ವಲಿ ಏನ್ ಕೊಡ್ತು
ಬೂದಿ ಕೊಡ್ತು
ಬೂದಿ ಏನ್ ಮಾಡ್ದಿ
ತಿಪ್ಪಿಗೊಯ್ದು ಹಾಕ್ದೆ

ತಿಪ್ಪಿ ಏನ್ ಕೊಡ್ತು
ಗೊಬ್ರ ಕೊಡ್ತು
ಗೊಬ್ರ ಏನ್ ಮಾಡ್ದಿ
ಹೊಲಕ್ಕ ಹಾಕ್ದೆ
ಹೊಲ ಏನ್ ಕೊಡ್ತು
ಜೋಳ ಕೊಡ್ತು
ಜೋಳ ಏನ್ ಮಾಡ್ದಿ
ಚಲೋ ಚಲೋವೆಲ್ಲ ನಾನುತಿಂದೆ
ಸೆರಗ-ಮುರಗ ಇರಾವೆಲ್ಲ ಕುಂಬಾರಗ ಕೊಟ್ಟೆ
ಕುಂಬಾರ ಏನ್ ಕೊಟ್ಟಾ
ಗಡಿಗಿ ಕೊಟ್ಟ
ಗಡಿಗಿ ಏನ್ ಮಾಡ್ದಿ
ಬಾವ್ಯಾಕ ಬಿಟ್ಟೆ
ಬಾವಿ ಏನ್ ಕೊಡ್ತು
ನೀರು ಕೊಡ್ತು
ನೀರು ಏನ್ ಮಾಡ್ದಿ
ಗಿಡಕ್ಕ ಹಾಕ್ದೆ
ಗಿಡ ಏನ್ ಕೊಡ್ತು
ಹೂವು ಕೊಡ್ತು
ಹೂವು ಏನ್ ಮಾಡ್ದಿ
ದೇವರಿಗೆ ಏರಿಸಿದೆ.

ಇಲ್ಲಿ ಉಲ್ಲೇಖಿಸಿದ ಮೊದಲ ಪದ್ಯ ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿಯ ತಾಲೂಕಿನಲ್ಲಿ ಕಂಡುಬಂದರೆ, ಎರಡನೆಯ ಪದ್ಯ (ಪಾಠಾಂತರ ಹಾಗೂ ಮುಂದುವರೆದ ರೂಪದ ಪದ್ಯ) ಬಿಜಾಪುರ, ಬಾಗಲಕೋಟೆ, ತಾಳಿಕೋಟೆ ಭಾಗಗಳಲ್ಲಿ ಹೆಚ್ಚು ಪ್ರಚಲಿತದಲ್ಲಿದೆ. ಬಳ್ಳಾರಿ ಭಾಗಗಳಲ್ಲಿ ಕುಂಬಾರಗ ಕೊಟ್ಟೆ ಎನ್ನುವಲ್ಲಿಗೆ ಮುಕ್ತಾಯವಾದರೆ, ಬಾಗಲಕೋಟೆ, ತಾಳಿಕೋಟೆ ಭಾಗಗಳಲ್ಲಿ ಅಲ್ಲಿಂದ ಮುಂದುವರೆದ ರೂಪವನ್ನು ಕಾಣಬಹುದು. ಇಲ್ಲಿ ಕುಂಬಾರ ಎಂದರೆ ಸೃಷ್ಟಿಕರ್ತ ಎಂತಲೂ, ಗಡಿಗಿ ಎಂದರೆ ದೇಹ ಎಂತಲೂ, ಈ ದೇಹವು ಸೃಷ್ಟಿಕರ್ತನ ಕೊಡುಗೆ ಎಂತಲೂ, ಗಡಿಗಿ ಏನ್ ಮಾಡ್ದಿ, ಬಾವ್ಯಾಕ ಬಿಟ್ಟೆ ಎಂದರೆ ದೇಹದ ಗಡಿಗಿಯನ್ನು ಬದುಕೆಂಬ ಬಾವಿಯ ಒಳಗೆ ಅರಿವಿನ ಜಲ ತುಂಬಲು ಬಿಟ್ಟೆ ಎಂತಲೂ, ಬಾವಿ ಏನ್ ಕೊಡ್ತು, ನೀರು ಕೊಡ್ತು. ನೀರು ಏನ್ ಮಾಡ್ದಿ, ಗಿಡಕ್ಕೆ ಹಾಕ್ದೆ ಎನ್ನುವಲ್ಲಿ ಬದುಕಿನ ಬಾವಿಯಲ್ಲಿ ಅರಿವಿನ ಜಲ ತುಂಬಿಕೊಂಡು ಅದನ್ನು ಆತ್ಮದ ಗಿಡಕ್ಕೆ ಸುರಿಯಬೇಕು ಆಗ

ಆತ್ಮದ ಗಿಡವು ಬದುಕನ್ನು ಸಾಕ್ಷಾತ್ಕಾರ ಮಾಡಿಕೊಂಡ ಪ್ರತೀಕವಾಗಿ ಹೂವು ನೀಡುತ್ತದೆ. ಅಂತಹ ಸಾರ್ಥಕ ಬದುಕಿನ ಸಾಕ್ಷಾತ್ಕಾರದ ಹೂವನ್ನು ಸೃಷ್ಟಿಕರ್ತನಿಗೆ ಏರಿಸುವುದು ದೇಹದ ಗಡಿಗಿಯನ್ನು ನಮಗೆ ಕೊಟ್ಟ ಕಾರಣಕ್ಕಾಗಿ ನಾವು ಪ್ರತಿಯಾಗಿ ನಮನ ಸಲ್ಲಿಸುವುದಾಗಿದೆ. ಇಡೀ ಪದ್ಯವನ್ನು ಸೂಕ್ಷ್ಮವಾಗಿ ಅವಲೋಕನ ಮಾಡಿದರೆ ಕೆರೆಯ ನೀರನ್ನು ಕೆರೆಗೆ ಚೆಲ್ಲಿದಂತೆ ಭಾಸವಾಗುತ್ತದೆ. ಅಂದರೆ ಕುಂಬಾರ ದೇಹ ಕೊಡುವುದು, ಕೊನೆಯಲ್ಲಿ ಬದುಕನ್ನು ಸಾರ್ಥಕಗೊಳಿಸಿ ಕೊಂಡ ಹೂವನ್ನು ಸೃಷ್ಟಿಕರ್ತನಿಗೆ ಸಮರ್ಪಿಸುವುದು ಈ ಅಂಶವೇ ಇದಕ್ಕೆ ಸಾಕ್ಷಿಯಾಗಿದೆ. ಇದು ತಾತ್ವಿಕವಾಗಿ ಸರಿಯಷ್ಟೆ. ಕೆರೆಯ ನೀರನ್ನು ಕೆರೆಗೆ ಚೆಲ್ಲಿದ ಅಂಶವನ್ನೇ ಸಮಾಜಕ್ಕೆ ಅನ್ವಯಿಸಿ ಹೇಳಿದರೆ ವ್ಯಕ್ತಿ ಸಮಾಜದಿಂದ ಎಲ್ಲವನ್ನು ಪಡೆಯುತ್ತಾನೆ. ಆದರೆ ಸಮಾಜಕ್ಕೆ ಅವನ ಕೊಡುಗೆ ಏನು ಎಂಬ ಪ್ರಶ್ನೆಗೆ ಬಹುತೇಕರು ಮೂಕರಾಗುತ್ತಾರೆ. ಅಂದರೆ ಸೃಷ್ಟಿಕರ್ತ ಕೊಟ್ಟ ದೇಹದ ಗಡಿಗಿಯನ್ನು ಸಾಮಾಜಿಕ ಸೇವೆಗೆ ಮುಡಿಪಿಟ್ಟು ಬದುಕಿನ ಸಾರ್ಥಕತೆ ಕಂಡುಕೊಳ್ಳುವ ಎಚ್ಚರದ ಪ್ರಜ್ಞೆಯು ಈ ಕಾವ್ಯದೊಳಗೆ ಅಡಗಿದೆ. ಮೊದಲಿನ ಸಾಫಲ್ಯ ಕಾಣದ ಬದುಕು ಕಾಯ ಕಾಯ ಎಲ್ಲಿಹೋಯ್ತು ಅನ್ನುವ ಪ್ರಶ್ನೆ ಬಂದ ಮೇಲೆ ಈ ದೇಹದ ಒಟ್ಟು ಗುರಿ ಏನು ಎನ್ನುವ ಆಧ್ಯಾತ್ಮದ ಚಿಂತನೆಯನ್ನು ಚಿಕ್ಕದಾದ ಈ ಆಟದೊಳಗೆ ಜನಪದರು ಮುಚ್ಚಿಟ್ಟಿದ್ದಾರೆ. ಇದರ ಜೊತೆಯಲ್ಲಿಯೇ ಕಾಯ ಕಾಯ ಎಲ್ಲಿ ಹೋಯ್ತು ಎನ್ನುವ ಮುಂದಿನ ಚಟುವಟಿಕೆಯೊಳಗೆ ಈ ಸರಣಿಯಾದ ಪ್ರಶ್ನೋತ್ತರಗಳು ಬಂದಾಗ ಇಲ್ಲಿ ಒಂದು ವಸ್ತುವಿಗೆ ಮರಣ ಎನ್ನುವುದಿಲ್ಲ ಅದು ಪುನರಪಿ ರೂಪ ತಾಳುತ್ತಿರುತ್ತದೆ. ಉದಾಹರಣೆಗೆ ಕಾಯ ಎಲ್ಲಿ ಹೋಯ್ತು, ಕದದ ಹಿಂದೆ, ಕದ ಚಕ್ಕಿ ಕೊಡುವುದು, ಚಕ್ಕಿಯನ್ನು ವಲಿಯಲ್ಲಿ ಹಾಕುವುದು ವಲಿ ಬೂದಿ ಕೊಡುವುದು ಇತ್ಯಾದಿ ಪುನರುತ್ಪಾದನೆ ಅಂದರೆ ರೂಪಾಂತರ ಪ್ರಕ್ರಿಯೆಯ ವಿಷಯಗಳು ಈ ಶಿಶುಕಾವ್ಯದೊಳಗೆ ಅಡಗಿ ಕುಳಿತಿವೆ. ಜೈನ ಧರ್ಮದಲ್ಲಿ ಅನೇಕಾಂತವಾದಗಳು ಕಂಡುಬರುವಂತೆ ಇಲ್ಲಿ ರೂಪಾಂತರ ಪ್ರಕ್ರಿಯೆಗಳು ಕಂಡುಬರುತ್ತವೆ.

ಇದಲ್ಲದೆ ಮಕ್ಕಳಿಗೆ ಮಾತನಾಡಲಿಕ್ಕೆ, ಹಾಡಲಿಕ್ಕೆ ಸರಣಿ ಮತ್ತು ತರ್ಕಬದ್ಧವಾದ ರಚನೆ ಈ ಶಿಶುಪ್ರಾಸದಲ್ಲಿ ಇರುವುದರಿಂದ ಒಂದು ಸಾರಿ ಹೇಳಿದರೂ ಮಕ್ಕಳು ನೆನಪಿನಲ್ಲಿ ಇಟ್ಟುಕೊಳ್ಳಬಹುದಾದ ಗುಣ ಈ ಪದ್ಯಕ್ಕಿದೆ. ಜನಪದ ಮಕ್ಕಳ ಕಾವ್ಯಗಳ ರಚನೆಗಳ ವಿಶೇಷತೆ ಎಂದರೆ ಎಷ್ಟು ಅರ್ಥ ಇದೆ ಎನ್ನುವುದು ಎರಡನೆಯ ಸಂಗತಿ ಅರ್ಥಕ್ಕಿಂತ ಮೊದಲು ಲಯಬದ್ಧವಾದ ಮತ್ತು ತುದಿನಾಲಗೆಯ ಮೇಲೆ ಸಹಜವಾಗಿ, ಸರಾಗವಾಗಿ ಉಚ್ಚರಿಸಬಹುದಾದ, ಒಂದು ತರ್ಕಬದ್ಧ ರೀತಿಯಲ್ಲಿ ಬೆಳೆಸಿಕೊಳ್ಳುತ್ತ ಹೋಗಬಹುದಾದ ರಚನೆಗಳೇ ಮಕ್ಕಳ ಶಿಶು ಕಾವ್ಯ ಪರಂಪರೆಯಲ್ಲಿ ಜೀವಂತವಾಗಿ ಉಳಿಯುತ್ತವೆ, ಕಠಿಣವಾದ ರಚನೆಗಳು ತನ್ನಿಂದತಾನೇ ಹಿಂದೆ ಸರಿಯುತ್ತವೆ.

## ಆನಿ ಬಂತಾನಿ

ಕನ್ನಡ ಮಕ್ಕಳ ಜನಪದ ಕಾವ್ಯ ಪರಂಪರೆಯಲ್ಲಿ ಅಚ್ಚಳಿಯದೇ ಉಳಿದಿರುವ, ಇಂದಿಗೂ ಹಳ್ಳಿ-ಹಳ್ಳಿಗಳಲ್ಲೂ ಮನೆ ಮಾತಾಗಿರುವ, ತಾಯಂದಿರ ಅಜ್ಜ-ಅಜ್ಜಿಯರ, ಮಕ್ಕಳ ನಾಲಿಗೆ ಮೇಲೆ ನಲಿದಾಡುವ ಶಿಶುಗೀತೆಗಳಲ್ಲಿ 'ಆನಿ ಬಂತಾನಿ' ಪ್ರಾತಿನಿಧಿಕವೆಂದೇ ತೋರುತ್ತದೆ. ಈ ಕಾವ್ಯದ ವಸ್ತು ಆನೆಯಾಗಿದ್ದು, ಆನೆಯು ತನ್ನ ಎತ್ತರದ ನಿಲುವಿನಿಂದ, ಬೇರಾವ ಪ್ರಾಣಿಗೂ ಇರದ ಸೊಂಡಿಲಿನಿಂದ, ವಿಶಿಷ್ಟ ದಂತಗಳಿಂದ ಹಾಗೂ ಶಕ್ತಿಶಾಲಿ ಎನಿಸಬಹುದಾದ ತನ್ನ ಇತರ ದೈಹಿಕ ಚಹರೆಗಳಿಂದ ಮಕ್ಕಳ ಮನೋಲೋಕದಲ್ಲಿ ವಿಶೇಷ ಸ್ಥಾನ ಪಡೆದುಕೊಂಡಿದ್ದು, ಉಳಿದ ಪ್ರಾಣಿಗಳಿಗಿಂತಲೂ ಇದು ಹೆಚ್ಚು ಪ್ರಿಯವಾದುದಾಗಿದೆ. ಆನೆಯನ್ನು ಕಂಡಾಗ ಮಕ್ಕಳ ಆನಂದಕ್ಕೆ ಎಲ್ಲೆಯೇ ಇಲ್ಲ. ಅಚ್ಚರಿಯ ಉದ್ಗಾರಗಳಿಗೆ ಕೊನೆಯೇ ಇಲ್ಲ. ಇಂತಹ ಆನೆಯನ್ನು ಕುರಿತಾದ ಕಾವ್ಯವೊಂದು ಕನ್ನಡ ಶಿಶುಗೀತೆಗಳ ಲೋಕದಲ್ಲಿ ಶತಮಾನಗಳಿಂದಲೂ ತನ್ನ ಆಪ್ತತೆಯನ್ನು ಇನ್ನೂ ಹಾಗೆ ಉಳಿಸಿಕೊಂಡು ಬಂದಿದೆ. ಈ ಕಾವ್ಯವನ್ನು ಹೇಳುವಾಗ ಮುಖ್ಯವಾಗಿ ಮಕ್ಕಳನ್ನು ಹಿರಿಯರು ಅಂಗಾತ ಮಲಗಿ (ಮುಖ ಮೇಲೆ ಮಾಡಿಕೊಂಡು ಮಲಗುವ ವಿಧಾನ) ತಮ್ಮ ಎರಡು ಕಾಲುಗಳನ್ನು ಕೂಡಿಸಿಕೊಂಡು ಜೊತೆಗೆ ಕಾಲುಗಳೆರಡನ್ನು ಮಡಚಿಕೊಂಡು ಎರಡು ಪಾದಗಳ ಮೇಲೆ ಮಗುವಿನ ಪಾದಗಳನ್ನು ಇರಿಸಿಕೊಂಡು, ತಮ್ಮ ಮಂಡಿಗೆ ಮಗುವನ್ನು ಆನಿಸಿಕೊಂಡು ಮಗುವಿನ ಕೈಗಳೆರಡನ್ನು ತಮ್ಮ ಕೈಗಳಲ್ಲಿ ಗಟ್ಟಿಯಾಗಿ ಬಂಧಿಸಿ ಈಗಾಗಲೇ ಮಗುವಿನ ಪಾದಗಳನ್ನು ತಮ್ಮ ಪಾದಗಳ ಮೇಲೆ ಇರಿಸಿದ ಪಾದಗಳನ್ನು ಮೇಲಕ್ಕೆತ್ತಿ ತಮ್ಮ ಎದೆಯ ಭಾಗದವರೆಗೂ ತರುವುದು ಮತ್ತೇ ಪುನಃ ಮೇಲಕ್ಕೆತ್ತಿದ ಪಾದಗಳನ್ನು ನೆಲಕ್ಕೆ ತಾಗಿಸುವುದು ಆಟದ ವಿಧಾನವಾಗಿದೆ. ಈ ಆಟದ ಕ್ರಿಯೆಯೊಂದಿಗೆ ಹಾಡುವ ಹಾಡು ಈ 'ಆನೆ ಬಂತಾನಿ' ಪ್ರಾದೇಶಿಕವಾಗಿ ಈ ಹಾಡು ಬೇರೆ ಬೇರೆ ರೂಪಗಳನ್ನು ಪಡೆದಿರುವುದುಂಟು. ಬಳ್ಳಾರಿ ಜಿಲ್ಲೆ ಹಗರಿಬೊಮ್ಮನಹಳ್ಳಿಯ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಬಳಕೆಯಲ್ಲಿರುವ ಹಾಡಿನ ರೂಪವೊಂದನ್ನು ಇಲ್ಲಿ ಉದಾಹರಿಸಲಾಗಿದೆ.

ಆನಿ ಬಂತಾನಿ
ಯಾವುರಾನಿ
ಬಿಜಾಪುರದಾನಿ
ಇಲ್ಲಿಗ್ಯಾಕ ಬಂತು
ದಾರಿತಪ್ಪಿ ಬಂತು
ಹಾದಿಗೊಂದು ದುಡ್ಡು
ಬೀದಿಗೊಂದು ದುಡ್ಡು
ಎಲ್ಲಾ ದುಡ್ಡು ಸೇರಿಸಿ
ಸೇರ ಕೊಬ್ರಿ ತಂದು

ಲಟ ಲಟ ಮುರ್ದು
ಹುಡುಗರಿಗೆಲ್ಲ ಹಂಚಿ
ಆನಿ ಎಲ್ಲಿಗೋತು
ಬಿಜಾಪುರ ಕೋತು.

ಈ ಮಕ್ಕಳ ಕಾವ್ಯ ಪ್ರಾದೇಶಿಕವಾಗಿ ಭಿನ್ನ ರೂಪಗಳಿರುವಂತೆ ಆಟದ ರೂಪದಲ್ಲೂ ವೈವಿಧ್ಯತೆ ಇದೆ. ಈ ಹಿಂದೆ ತಿಳಿಸಿದ ವಿಧಾನ ಒಂದಾದರೆ, ಹಿರಿಯರು ಕೈ ಕಾಲುಗಳನ್ನು ನೆಲಕ್ಕೆ ತಾಗಿಸಿ ಪ್ರಾಣಿಗಳ ರೀತಿಯಲ್ಲಿ ಚಲಿಸುವ, ಡುಬ್ಬದ ಮೇಲೆ ಮಗುವನ್ನು ಕೂರಿಸಿಕೊಂಡು ಆಡುವ ಆಟದ ಕ್ರಮವೂ ಒಂದಿದೆ. ಇದು ತನ್ನ ಪ್ರಾಸದ ಗುಣ, ಹಾಡುವ ಧಾಟಿ, ಆಟವಾಡುವ ವಿಧಾನಗಳು, ಇಷ್ಟವಾದ ಆನೆಯ ನೆನಪು ಮೂಡುವ ಬಗೆ, ತಾನೂ ಜಂಬೂ ಸವಾರಿ ಮಾಡಿದ ಕಲ್ಪನೆಯ ಅನುಭವ ಈ ಎಲ್ಲ ಅಂಶಗಳು ಮಕ್ಕಳಿಗೆ ಹೆಚ್ಚು ಮನೋರಂಜನೆ ನೀಡುತ್ತವೆ. ಇದು ಈ ಮಕ್ಕಳ ಕಾವ್ಯಕ್ಕಿರುವ ಮೇಲ್ಮೈ ಸಾಧ್ಯತೆ. ಆದರೆ ಇದರ ಇನ್ನೊಂದು ಸಾಧ್ಯತೆಯೆಂದರೆ ಅದು ಈ ಪದ್ಯಕ್ಕಿರುವ ಅರ್ಥವಿಸ್ತಾರದ ಗುಣ. ಅದೇನೆಂದರೆ ಬಹಮನಿ ಸುಲ್ತಾನರು ವಿಜಯನಗರ ಸಾಮ್ರಾಜ್ಯದ ಮೇಲೆ ಮಾಡಿದ ದಾಳಿ ಹಾಗೂ ಬಳಿಕ ಜನರಿಗೆ ಸುಲ್ತಾನರ ಬಗೆಗೆ ಇದ್ದ ಭಯ ಇತ್ಯಾದಿ ಅಂಶಗಳನ್ನು ಸೂಚ್ಯವಾಗಿ ತಿಳಿಸುತ್ತದೆ. ಕ್ರಿ.ಶ. ೧೩೩೬ರಲ್ಲಿ ಸಂಗಮ ವಂಶದ ಸಹೋದರರಾದ ಹರಿಹರ, ಬುಕ್ಕರಿಂದ ಸ್ಥಾಪಿತವಾದ ವಿಜಯನಗರ ಸಾಮ್ರಾಜ್ಯ ಭಾರತದ ಇತಿಹಾಸದಲ್ಲಿಯೇ ಅವಿಸ್ಮರಣೀಯವಾದುದಾಗಿದೆ. ಇಂತಹ ಸಾಮ್ರಾಜ್ಯದ ಅವನತಿಯ ಕಾಲದಲ್ಲಿ ಅಳಿಯ ರಾಮರಾಯ ಪಟ್ಟಕ್ಕೇರಿದ್ದು, ಅವನು ಬಹಮನಿ ಸುಲ್ತಾನರನ್ನು ಒಡೆದು ಆಳುತ್ತಿದ್ದನು. ಈ ಒಡೆದು ಆಳುವ ನೀತಿಯಿಂದ ಜಾಗೃತರಾದ ಸುಲ್ತಾನರು ಪರಸ್ಪರ ತಮ್ಮ ಕಲಹಗಳನ್ನು ಮರೆತು ಎಲ್ಲರೂ ಒಂದಾಗಿ ವಿಜಯನಗರ ಸಾಮ್ರಾಜ್ಯದ ವಿರುದ್ಧ ದಂಡೆತ್ತಿ ಬಂದರು. ಇದೇ ಮುಂದೆ ಇತಿಹಾಸ ಪ್ರಸಿದ್ಧ ರಕ್ಕಸಗಿ ತಂಗಡಗಿ ಯುದ್ಧವಾಗಿ ಹೆಸರಾಯಿತು. ಈ ಯುದ್ಧದ ಬಳಿಕ ವಿಜಯನಗರ ಸಾಮ್ರಾಜ್ಯದ ರಾಜನಿಲ್ಲದ ರಾಜಧಾನಿಯಾದ ಹಂಪೆಯಲ್ಲಿ ಹರಾಜಕತೆ ತಲೆದೋರಿತು. ಬಿಜಾಪುರದ ಸುಲ್ತಾನರು ಹಂಪಿಯಲ್ಲಿ ನೆಲೆನಿಂತು ಸತತ ಐದು ತಿಂಗಳಗಳ ಕಾಲ ಆಸ್ತಿ–ಪಾಸ್ತಿಗಳನ್ನು ಲೂಟಿ ಮಾಡಿ ದೇವಾಲಯಗಳನ್ನು, ಅರಮನೆಗಳನ್ನು ಬೆಂಕಿಯಿಂದ ವಿಕಾರಗೊಳಿಸಿದರು. ಕತ್ತಿಗಳಿಂದ, ಹಾರೆಗುದ್ದಲಿಗಳಿಂದ ಸುಂದರ ಶಿಲ್ಪಕಲಾ ಕೆತ್ತನೆಗಳನ್ನು ಭಂಜನ ಮಾಡಿದರು. ಹೀಗೆ ದಿನವು ಒಂದೊಂದು ರೀತಿಯಲ್ಲಿ ವಿನಾಶ ಕಾರ್ಯ ಮಾಡುತ್ತ ಹೋದರು.

ಪ್ರಸ್ತುತ ಶಿಶುಕಾವ್ಯಕ್ಕೆ ಈ ಮೇಲೆ ತಿಳಿಸಿದ ಎಲ್ಲಾ ಅಂಶಗಳು ಇದರ ರಚನೆಯ ಮೂಲ ಪ್ರೇರಣೆಗಳೆಂದೇ ತೋರುತ್ತದೆ. ಸುಲ್ತಾನರ ವಿನಾಶಕಾರ್ಯದ ದುಷ್ಪರಿಣಾಮಗಳನ್ನು ಕಂಡುಂಡ ಜನರು ಭಯಭೀತರಾಗಿ ಬದುಕತೊಡಗಿದರು. ಇಂತಹ ಸಮಯದಲ್ಲಿ ಪ್ರಭುತ್ವದ ವಿರುದ್ಧ

ಯಾರೂ ಸಿಡಿದೇಳುವ ಪ್ರಯತ್ನ ಮಾಡುವುದಿರಲಿ, ಚಕಾರ ಎತ್ತುವ ಹಾಗೂ ಇರಲಿಲ್ಲ. ಆದರೆ ನಮ್ಮ ಹಿರಿಯರಿಗೆ ಜವಾಬ್ದಾರಿಯೊಂದಿತ್ತು. ಯಾವ ಮಾರ್ಗದಿಂದಲಾದರೂ ತಾವು ಬದುಕಿದ್ದ ಕಾಲದಲ್ಲಿ ನಡೆದ ತಮ್ಮ ಸಮಕಾಲೀನ ಸಂದರ್ಭದಲ್ಲಿ ನಡೆದ ಸುಲ್ತಾನರ ಹಾವಳಿ, ದೌರ್ಜನ್ಯಗಳನ್ನು ದಾಖಲು ಮಾಡಬೇಕಾಗಿತ್ತು. ಬರವಣಿಗೆಯ ಕ್ರಮಗಳು ಅವರಿಗೆ ದಕ್ಕುವಂತಿರಲಿಲ್ಲ. ಆಗ ದಾಖಲು ಮಾಡಲು ನೆರವಾದ ಮಾಧ್ಯಮವೇ ಮಕ್ಕಳ ಕಾವ್ಯ. ಕಾರಣ ಮಕ್ಕಳ ಕಾವ್ಯವನ್ನು ಯಾರೂ ಅಂದು ಗಂಭೀರವಾಗಿ ಪರಿಗಣಿಸುತ್ತಿರಲಿಲ್ಲ. ಆದರೂ ಎಲ್ಲ ಸಂಗತಿಗಳನ್ನು ಮಕ್ಕಳ ಕಾವ್ಯದಲ್ಲಿ ಎಳೆ ಎಳೆಯಾಗಿ ಬಿಚ್ಚಿಡದೇ ಕೆಲ ಸೂಕ್ಷ್ಮಾತಿಸೂಕ್ಷ್ಮ ವಿಷಯಗಳನ್ನು ಮಾತ್ರ ಅಭಿವ್ಯಕ್ತಿಸಿದರು. ಹೀಗೆ ಗತಕಾಲದ ಸತ್ಯಗಳು ಬಾಯಿಂದ ಬಾಯಿಗೆ ಹರಿದು ಬರುವ ಮೂಲಕ ಇಂದಿಗೂ ನಮ್ಮ ನಡುವೆ ಜೀವಂತವಾಗಿರುವುದಕ್ಕೆ ಮಕ್ಕಳ ಕಾವ್ಯವು ಕಾರಣವಾಗಿದೆ.

'ಆನಿ ಬಂತಾನಿ, ಯಾವುರಾನಿ, ಬಿಜಾಪುರದಾನಿ ಇಲ್ಲಿಗ್ಯಾಕ ಬಂತು, 'ಹಾದಿ ತಪ್ಪಿ ಬಂತು' ಈ ಕಾವ್ಯದಲ್ಲಿ ಬಂದ 'ಬಿಜಾಪುರ' ಹಾಗೂ ಹಾದಿ ತಪ್ಪಿ ಬಂತು ಪದಗಳು ಸುಲ್ತಾನರು ನ್ಯಾಯಯುತ ಮಾರ್ಗದಲ್ಲಿ ನಡೆಯದೇ ಮೋಸದಿಂದ ಯುದ್ಧದಲ್ಲಿ ಜಯ ಪಡೆದು ವಿಜಯನಗರದ ಆಸ್ತಿ-ಪಾಸ್ತಿಯನ್ನು ಲೂಟಿ ಮಾಡಿದ್ದರ ಪ್ರತೀಕವಾಗಿವೆ. ಲೂಟಿ ಮಾಡಿದ ಬಂಗಾರದ ನಾಣ್ಯ, ಒಡವೆ, ವಸ್ತ್ರ ಇತ್ಯಾದಿ ಆನೆ-ಒಂಟೆಗಳ ಮೇಲೆ ಏರಿಕೊಂಡು ಹಳ್ಳಿಗಳ ಹಾದಿಯಾಗಿ ಹೋಗುವಾಗ, ಆ ಹೊತ್ತಿನ ಸಂದರ್ಭದಲ್ಲಿ ಹಳ್ಳಿಗಳ ರಸ್ತೆಗಳು ತೆಗ್ಗು-ದಿನ್ನೆಗಳಿಂದ ಕೂಡಿದ್ದರ ಪರಿಣಾಮವಾಗಿಯೋ ಏನೋ ಹಾದಿ-ಬೀದಿಗಳಲ್ಲಿ ಹಣ ಚೆಲ್ಲುತ್ತಾ ಹೋಯಿತು. ಸುಲ್ತಾನರು ಹಳ್ಳಿಗಳನ್ನು ದಾಟಿದ ಬಳಿಕ ಮನೆಯಿಂದ ಹೊರಬಂದ ಜನರು ಬಿದ್ದ ಹಣವನ್ನು ತೆಗೆದುಕೊಂಡು ಸೇರ ಕೊಬ್ರಿ ತಂದು ಮಕ್ಕಳಿಗೆ ಹಂಚಿದ್ದು ಇರಬಹುದೆಂಬುದು ಒಂದು ಸಂಗತಿಯಾದರೆ, ಸುಲ್ತಾನರ ಕಡೆಯವರು ಹಳ್ಳಿಗಳಿಗೆ ಬಂದು ಮಹಿಳೆಯರಿಗೆ, ಮಕ್ಕಳಿಗೆ ಕಿರುಕುಳ ಕೊಡುತ್ತಿದ್ದರು ಎಂಬ ಕಾರಣಕ್ಕೋ ಏನೋ ಅವರು ಬರುವ ವೇಳೆ ಹೆಂಡತಿ ಮಕ್ಕಳನ್ನು ಮರೆಮಾಚಿ ಬಂದ ಸುಲ್ತಾನರ ಕಡೆಯವರಿಗೆ ಕೊಬ್ರಿ-ಬೆಲ್ಲ, ಹಣ, ಇತ್ಯಾದಿ ತಮ್ಮ ಬಳಿ ಇದ್ದ ವಸ್ತುಗಳನ್ನು, ಆಹಾರವನ್ನು ನೀಡಿ ಸಂತೈಸುತ್ತಿದ್ದರು ಎಂಬ ಅಂಶಗಳು ಈ ಕಾವ್ಯದಿಂದ ಬೆಳಕಿಗೆ ಬರುತ್ತವೆ. ಸೇರ ಕೊಬ್ರಿ ತಂದು ಲಟ ಲಟ ಮುರುದು ಹುಡುಗರಿಗೆಲ್ಲ ಹಂಚಿ ಎಂಬ ಮಾತು ಮೇಲ್ನೋಟಕ್ಕೆ ಮಕ್ಕಳಿಗೆ ರಂಜನೆಯಾಗಿ ತೋರಿದರೂ ಅದರ ಹಿಂದಿನ ಕಟುಸತ್ಯಗಳು ಎಂತಹವರನ್ನು ಬೆಚ್ಚಿ ಬೀಳಿಸುತ್ತವೆ.

### ಅದಲ್ ಬದಲ್ ಕಂಚಿ ಬದಲ್

ಅದಲ ಬದಲ್ ಕಂಚಿ ಬದಲ್
ಕಂಚಿ ಕದಲ್
ಇವರ್ ಬಿಟ್ಟು ಇವರ್‍ಯಾರು

ಮಕ್ಕಳ ಕಾವ್ಯದಲ್ಲಿ ಇದು ಸಹ ಒಂದಾಗಿದ್ದು ಪ್ರಾಸದಿಂದ ತನ್ನ ಸಂಕ್ಷಿಪ್ತತೆಯಿಂದ ಮಕ್ಕಳ ಮನಸೆಳೆಯುತ್ತದೆ. ಇದರಾಚೆಗೆ ಇದರೊಳಗೆ ಅಡಕವಾದ ಒಳ ಸೂಕ್ಷ್ಮಗಳನ್ನು ನಾವಿಲ್ಲಿ ತಿಳಿಯಬಹುದು. ವ್ಯಕ್ತಿಯ ಬಾಹ್ಯದ ಹೆಸರನ್ನು ಬಿಟ್ಟು ಅವನ ನೈಜ ಅಂತರಂಗದ ಸ್ವರೂಪದ ವ್ಯಕ್ತಿತ್ವವನ್ನು ಆಧ್ಯಾತ್ಮದ ರೀತಿಯಲ್ಲಿ ಕಾಣುವ ದೃಷ್ಟಿ ಇಲ್ಲಿದೆ. ಮೂಲ ಏನು ಎಂಬುದನ್ನು ಗುರುತಿಸಿದೆ ಕೇವಲ ಭೌತಿಕ ಸ್ವರೂಪಕ್ಕೆ ಮಹತ್ವ ನೀಡುವುದನ್ನು ಇಲ್ಲಿ ವಿಡಂಬಿಸಲಾಗಿದೆ. 'ಕಂಚಿ' ಎಂದರೆ ಕಾಂಚಾಣ ಎಂದು ಹಣದ ವ್ಯಾಮೋಹದಲ್ಲಿ ಜೀವನದ ಅಮೂಲ್ಯ ಸಮಯವನ್ನು ನಾವು ಕಳೆಯುವುದನ್ನು ಇದು ಧ್ವನಿಸುತ್ತದೆ. ಹಿಂದೆ ಸಮಾಜದಲ್ಲಿ ವಸ್ತು-ವಿನಿಮಯ ಪದ್ಧತಿ ಅಸ್ತಿತ್ವದಲ್ಲಿದ್ದ ಆ ಸಂದರ್ಭದಲ್ಲಿ ಕವಿಗೆ ಹಣದ ಕಲ್ಪನೆ ಇದ್ದಿರದೇ ಇರಬಹುದು. ಆದರೆ ಈ ಅರ್ಥದ ವಲಯಗಳನ್ನು ಇದು ಧ್ವನಿಸುತ್ತದೆ. ಬೇಂದ್ರೆಯವರು 'ಕುರುಡು ಕಾಂಚಾಣ' ಪದ್ಯ ಬರೆಯುವಾಗ 'ಜಾಗತೀಕರಣ'ವಿರಲಿಲ್ಲ. ಆದರೆ ಇಂದು ಆ ಪದ್ಯವನ್ನು ಜಾಗತೀಕರಣದ ತಲ್ಲಣಗಳಿಗೆ ಅರ್ಥೈಸುವ ರೂಢಿಯಿರುವಂತೆ ಜನಪದ ಕವಿಯ ಸುಪ್ತ ಮನಸ್ಸು ಭವಿಷ್ಯತ್ತಿನ ಬದುಕಿನ ತಲ್ಲಣಗಳನ್ನು ಸೂಕ್ಷ್ಮವಾಗಿ ತಿಳಿಸಿದ್ದರ ಸಾಂಕೇತಿಕ ರೂಪಕವಾಗಿಯೂ ಸಹ ನಾವಿಲ್ಲಿ ಕಂಚಿ ಅದಲ್, ಕಂಚಿ ಬದಲ್, ಕಂಚಿ ಕದಲ್ ಎಂಬ ಸಾಲುಗಳನ್ನು ಅರ್ಥೈಸಬಹುದಾಗಿದೆ. ಇಲ್ಲಿ ಪ್ರಸ್ತಾಪವಾಗಿರುವ 'ಅದಲ್' ಎನ್ನುವುದು ಅದಲು ಎಂದು, 'ಬದಲ್' ಎಂಬುದು ಬದಲು ಎಂದು, 'ಕದಲ್' ಎಂದರೆ ಕದಲುವುದು ಎಂದು ಹಣದಿಂದಾಗುವ ಬದಲಾವಣೆ ಅಥವಾ ಸ್ಥಿತ್ಯಂತರಗಳನ್ನು ಸೂಕ್ಷ್ಮವಾಗಿ ಈ ಪದ್ಯದಲ್ಲಿ ಕಟ್ಟಿಕೊಡಲಾಗಿದೆ. ಹಣದಿಂದ ಇಂದು ಅಮಾಯಕರು ನೊಂದಿದ್ದಾರೆ, ಸತ್ಯ ಸುಳ್ಳಾಗಬಹುದು, ಸುಳ್ಳು ಸತ್ಯವಾಗಿ ಬಿಡಬಹುದು. ಈ ಹಿನ್ನೆಲೆಯಲ್ಲಿ ಹಣದ ಬಗೆಗಿನ ಈ ರಚನೆ ಸಾರ್ವಕಾಲಿಕ ರಚನೆಯೇನೋ ಎಂದು ತೋರುತ್ತದೆ.

### ಆರೇ ಡಂಬರು ಬಂದಾರ

ಆರೇ ಡಂಬರು ಬಂದಾರ<br>
ಬಾರಿ ಕಂಟ್ಯಾಗ ಇಳದಾರ<br>
ಮುತ್ತಿನ ಡೇರೆ ಹೊಡದಾರ

ಇದೊಂದು ಶಿಶುಪ್ರಾಸದ ಒಗಟಾಗಿದೆ. ಈ ಕಾವ್ಯದಲ್ಲಿ ಪ್ರಾಸ, ಕಲ್ಪನೆ, ವಿಷಯ ನಿರ್ದೇಶನದ ಸ್ಪಷ್ಟತೆ ಮತ್ತು ರೂಪಕಶಕ್ತಿ ಯಾವ ಉದ್ದಾಮ ಕವಿಗಿಂತಲೂ ಕಡಿಮೆಯಿಲ್ಲ. ಡೊಂಬರು ಮಾಡುವ ಚಮತ್ಕಾರ ಮತ್ತು ಮಾಯಾಜಾಲವನ್ನು ಈ ಜೇನು ಹುಳುಗಳು ಮಾಡುತ್ತವೆ. ಅದೇ ರೀತಿ ಆ ಜೇನು ಕಟ್ಟಿದ ಗೂಡಿಗೆ ಮುತ್ತಿನ ಡೇರೆಯನ್ನು ರೂಪಕವಾಗಿಸಿದ ಜಾಣ್ಮೆಗೆ ಎಂತವರೂ ತಲೆಬಾಗಬೇಕಿದೆ. ಮುಳ್ಳಿನ ಕಂಟಿಯನ್ನು ಮುತ್ತಿನ ಡೇರೆ ಮಾಡುವುದು ಅದ್ಭುತವೇ ಸರಿ.

ಇದಕ್ಕೆ ಅರ್ಥದ ಬಹುಮುಖಿ ಸಾಧ್ಯತೆಯು ಇದೆ. ಇಲ್ಲಿ ಆರೇ ಎಂದರೆ ಆರ್ಯರು ಎಂತಲೂ, ಭಾರಿ ಕಂಟ್ಯಾಗ ಎನ್ನುವುದು ಭಾರಿ ಕಂಟಿ ಹೇಗೆ ಒಂದರೊಳಗೊಂದು ಅಂಟಿಕೊಂಡಂತೆ ಕಂಟಿಯ ರಚನೆ ಇರುತ್ತದೋ ಹಾಗೆಯೇ ಭಾರತ ಎಂಬ ವಿವಿಧ ಸಂಸ್ಕೃತಿ, ವಿವಿಧ ಭಾಷೆಗಳ ದೇಶದೊಳಕ್ಕೆ ಆರ್ಯರು ಆಗಮಿಸಿದ್ದು, ಬಳಿಕ 'ಮುತ್ತಿನ ಡೇರೆ ಹೊಡದಾರ' ಎಂಬುದು ತಮ್ಮ ಅಸ್ತಿತ್ವದ ಅಧಿಕೃತತೆಯನ್ನು ಸೂಕ್ಷ್ಮವಾಗಿ ಧ್ವನಿಸುತ್ತದೆ. ಅಂದರೆ ಈ ಮಕ್ಕಳ ಕಾವ್ಯ ಆರ್ಯ-ದ್ರಾವಿಡದ ಸಂಘರ್ಷಗಳತ್ತವೂ ಚಲಿಸುತ್ತದೆ ಎಂಬುದು ಗಮನಾರ್ಹವಾಗಿದೆ.

### ಚೆಂದಪ್ಪ ಚೆಂದಪ್ಪ ಚಾರೀಕಾಯಿ

ಚೆಂದಪ್ಪ ಚೆಂದಪ್ಪ ಚಾರೀಕಾಯಿ
ಬಟ್ಟಲ ತುಂಬ ಬಾರೀಕಾಯಿ

ಮೂಲತಃ ಇದೊಂದು ಒಗಟಾಗಿದ್ದು ಚಂದ್ರನ ಅನುಪಮ ಸೌಂದರ್ಯವನ್ನು ತೆರೆದಿಟ್ಟು ಮಕ್ಕಳಿಗೆ ಪ್ರಾಸದ ಆನಂದವನ್ನು ಉಣಬಡಿಸುವ ಒಂದು ವಿಶಿಷ್ಟ ರಚನೆಯಾಗಿದೆ. ಈ ಕಾವ್ಯದ ಮೂಲರೂಪ ಚೆಂದಪ್ಪ ಚೆಂದಪ್ಪ ಚಾರುಕಾಯ ಬಟ್ಟಲ ತುಂಬ ಬರುವ ಕಾಯ ಎಂಬುದಾಗಿದೆ.

'ಚಾರುಕಾಯ' ಎಂದರೆ ಸುಂದರವಾದ ಕಾಯ ಉಳ್ಳವನು ಎಂದರ್ಥ. ಮಕ್ಕಳಿಗೆ ಇಂದಿಗೂ ಸಹ ಊಟ ಮಾಡಿಸುವುದು ತಾಯಂದಿರಿಗೆ ಒಂದು ಸವಾಲಿನ ಕೆಲಸವೇ ಆಗಿದೆ. ನಮ್ಮ ಜನಪದ ತಾಯಂದಿರು ಈ ಸವಾಲನ್ನು ಸ್ವೀಕರಿಸಿ ಇದಕ್ಕೆ ಪರಿಹಾರ ರೂಪವಾಗಿ ತಾಯಂದಿರು ಮನೆಯಿಂದ ಹೊರಬಂದು ಆಕಾಶದಲ್ಲಿ ಮಿನುಗುತ್ತಿದ್ದ ಚಂದಿರನನ್ನು ತೋರಿಸುತ್ತ ಮಕ್ಕಳಿಗೆ ಊಟ ಮಾಡಿಸುವುದು ಎಲ್ಲ ಜನಪದ ಪರಿಸರದಲ್ಲಿ ಇಂದಿಗೂ ಹಾಗೆಯೇ ಮುಂದುವರೆದುಕೊಂಡು ಬಂದಿದೆ. ಸುಂದರವಾದ ದೇಹವನ್ನು ಉಳ್ಳಂತಹ ಚಂದಿರನನ್ನು ನೋಡುತ್ತಲೇ ಮೈ ಮರೆಯುತ್ತಿದ್ದ ಮಕ್ಕಳು ಉಲ್ಲಸಿತರಾಗಿ ತಾಯಂದಿರ ಕೈ ತುತ್ತನ್ನು ಸವಿಯುತ್ತಿದ್ದರು. ತಾಯಂದಿರು ಮಕ್ಕಳಿಗೆ ಚಂದಿರನನ್ನು ಕೇವಲ ಬಾಯಿ ಮಾತಿನ ಮೂಲಕ ತೋರಿಸದೆ ಒಗಟಿನ ರೂಪದ ಈ ಪ್ರಾಸವನ್ನು ಹಾಡುವುದರ ಮೂಲಕ ಚಂದಿರನ ಕಡೆ ಮಕ್ಕಳ ಗಮನ ಸೆಳೆಯುತ್ತಿದ್ದರು. ಇನ್ನು 'ಬಟ್ಟಲು ತುಂಬ ಬರುವ ಕಾಯ' ಎಂದರೆ ಕಾರಣ ಒಂದು ಕೈಯಲ್ಲಿ ಮಕ್ಕಳನ್ನು ಎತ್ತಿಕೊಂಡು ಇನ್ನೊಂದು ಕೈಯಲ್ಲಿ ಊಟದ ತಟ್ಟೆ ಹಿಡಿದರೆ ಎರಡನ್ನು ಸಮತೋಲನದಿಂದ ಹಿಡಿದುಕೊಳ್ಳುವುದು ಜವಾಬ್ದಾರಿಯ ತಾಯಂದಿರಿಗೆ ಕೆಲಸವೇ ಆಗಿರುತ್ತದೆ. ಈ ಸಮಯದಲ್ಲಿ ಮಗು ಆಗಾಗ ಆಚೀಚೆ ವಾಲುತ್ತ, ಅಲುಗಾಡುತ್ತಿದ್ದರೆ ತಟ್ಟೆಯಲ್ಲಿನ ಆಹಾರ ಕೆಳಗೆ ಚೆಲ್ಲುವ ಸಾಧ್ಯತೆ ಹೆಚ್ಚಿರುತ್ತದೆ. ಆದರೆ ತಟ್ಟೆ ಬದಲು ಬಟ್ಟಲಿನಲ್ಲಿ ಆಹಾರ ಹಾಕಿದರೆ ಬಟ್ಟಲು ಸ್ವಲ್ಪ ಆಳವಾಗಿ ಕೂಡಿರುತ್ತದೆಯಾದ್ದರಿಂದ ಮಗು ಅಲುಗಾಡಿದರೆ,

ವಾಲಿದರೆ ಬಟ್ಟಲಿನಿಂದ ಅಷ್ಟಾಗಿ ಆಹಾರ ಕೆಳಗೆ ಚೆಲ್ಲದೆ ಬಟ್ಟಲಿನಲ್ಲಿಯೇ ಆಹಾರ ಸುರಕ್ಷಿತವಾಗಿರುತ್ತದೆ. ಈ ದೃಷ್ಟಿಯಿಂದ ಮಕ್ಕಳಿಗೆ ಉಣಬಡಿಸಲು ತಾಯಂದಿರು ಬಟ್ಟಲಿನ ಬಳಕೆಯನ್ನೇ ಮಾಡುವುದು ಯಥೇಚ್ಛವಾಗಿದೆ. ವಿಪರ್ಯಾಸವೆಂದರೆ ಚಂದಿರದ ಆಕೃತಿಯು ಬಟ್ಟಲಿನ ಆಕೃತಿಯು ಒಂದೇ ಆಗಿರುವುದರಿಂದ ಬಟ್ಟಲು ಸಹ ಚಂದಿರನ ಇನ್ನೊಂದು ರೂಪವಾಗಿದೆ. ಹಾಗೂ ಊಟ ಮುಗಿದ ಬಳಿಕ ಬಟ್ಟಲಿನಲ್ಲಿ ನೀರು ಹಾಕಿ ಆಕಾಶದೆಡೆಗೆ ಬಟ್ಟಲು ಹಿಡಿದರೆ ಆ ಬಟ್ಟಲಿನಲ್ಲಿಯೇ ಮೂಡುವ ಅಥವಾ ಬರುವ ಚಂದಿರನ ಕಾಯವನ್ನು ಬಟ್ಟಲು ತುಂಬ ಬರುವ ಕಾಯ ಎನ್ನಲಾಗಿದೆ. ಆದರೆ ಪ್ರಾದೇಶಿಕ ವ್ಯತ್ಯಾಸಗಳಿಂದ ಚೆಂದಪ್ಪ 'ಚೆಂದಪ್ಪ ಚಾರೀಕಾಯಿ ಬಟ್ಟಲ ತುಂಬ ಬಾರೀಕಾಯಿ' ಎಂದಾಗಿದೆ. ಆಕಾಶದಲ್ಲಿನ ಚಂದ್ರನಂತೆ ಬಟ್ಟಲಿನಲ್ಲಿರುವ ಬಾರೀಕಾಯಿಗಳು ದುಂಡಾಕಾರದಲ್ಲಿ ಇರುವುದರಿಂದ ಪ್ರತಿ ಬಾರೀಕಾಯಿಗಳು ಒಂದೊಂದು ಚಂದಿರನಂತೆ ಮಕ್ಕಳಿಗೆ ಗೋಚರಿಸಿದರೆ ಅಚ್ಚರಿಯೇನಿಲ್ಲ. ಇದು ಅರ್ಥದ ಒಂದು ಸಾಧ್ಯತೆಯಾದರೆ, ಇನ್ನೊಂದು ಸಾಧ್ಯತೆಯ ಕುರಿತು ಮಕ್ಕಳ ಸಾಹಿತ್ಯದಲ್ಲಿ ಕೃಷಿ ಮಾಡುತ್ತಿರುವ ಡಾ. ಚಂದ್ರೆಗೌಡ ಕುಲಕರ್ಣಿಯವರು ಹೀಗೆ ಹೇಳುತ್ತಾರೆ.

ಬುಡಮೇಲು ಮಾಡಿದ ಆಕಾಶದ ಬಟ್ಟಲಲ್ಲಿ ನಕ್ಷತ್ರಗಳೆಂಬ ಬಾರೀಕಾಯಿ ನೆಲಕ್ಕೆ ಬೀಳಲಾರದೆ ಅಂಟಿಕೊಂಡ ಸೋಜಿಗವನ್ನು ಮತ್ತು ಸದಾ ಮಿನುಗುತ್ತಿರುವ ಅವುಗಳ ಅದ್ಭುತತೆಯನ್ನು ಎರಡು ಸಾಲುಗಳಲ್ಲಿ ಕಟ್ಟಿಕೊಟ್ಟ ವಿಶಿಷ್ಟ ಶಿಶುಪ್ರಾಸದ ಒಗಟು ಇದಾಗಿದೆ. ನೆಲಕ್ಕೆ ಬೀಳದೇ ಇರುವುದು ಎನ್ನುವಲ್ಲಿ ಗುರುತ್ವಾಕರ್ಷಣೆಯ ವೈಜ್ಞಾನಿಕ ಸಂಗತಿ ಅಡಗಿರುವುದನ್ನು ಗಮನಿಸಬಹುದು. ಹೀಗೆ ಪ್ರಸ್ತುತ ಕಾವ್ಯ ದೊಡ್ಡವರಿಗೆ ಒಂದು ಬಗೆಯ ಅರ್ಥವನ್ನು ಮಕ್ಕಳಿಗೆ ಒಂದು ಬಗೆಯ ಅರ್ಥ, ಅರ್ಥಕ್ಕಿಂತಲೂ ಹೆಚ್ಚಾಗಿ ಮನೋರಂಜನೆಯನ್ನು ನೀಡುತ್ತದೆ. ಇದೇ ಮಕ್ಕಳ ಕಾವ್ಯಕ್ಕಿರುವ ಬಹುತ್ವದ ಶಕ್ತಿ.

> ಗೇರ್ ಗೇರ್ ಮಂಗಣ್ಣ
> ಕಡ್ಲೇಕಾಯಿ ನುಂಗಣ್ಣ
> ಅಲ್ಲಿಂದಿಲ್ಲಿಗೆ ಹಾರಣ್ಣ
> ಲಂಕಾಪಟ್ಟಣ ಸೇರಣ್ಣ
> ಸೀತೆಯನ್ನು ಹುಡ್ಕಣ್ಣಾ
> ಭೇಷ್ ಭೇಷ್ ಮಂಗಣ್ಣ

ಮಕ್ಕಳಿಗೆ ಪ್ರಿಯವಾದ ಪ್ರಾಣಿಗಳಲ್ಲಿ ಮಂಗವು ಒಂದು. ಇದು ತನ್ನ ವಿಶಿಷ್ಟ ದೈಹಿಕ ಚಹರೆಗಳಿಂದ, ಚೇಷ್ಟೆಗಳಿಂದ ಮಕ್ಕಳಿಗೆ ಇಂದಿಗೂ ಕುತೂಹಲದ ಆಸಕ್ತಿಯಿಂದ ವೀಕ್ಷಿಸಬಹುದಾದ ಪ್ರಾಣಿಯಾಗಿಯೇ ಉಳಿದಿದೆ. ನಮ್ಮ ಹಿರಿಯರು ಮಕ್ಕಳಿಗೆ ಯಾವುದೇ ಕಾವ್ಯವನ್ನು ಬಳುವಳಿಯಾಗಿ ಕೊಡುವಾಗಲೂ ಅಂತಹ ಕಾವ್ಯಗಳ ರಚನೆಯ ಸಂದರ್ಭದಲ್ಲಿ ಅವರು ಮಕ್ಕಳಿಗೆ ಪ್ರಿಯವಾದ ಸಂಗತಿ, ವಸ್ತು, ಪ್ರಾಣಿ ಇತ್ಯಾದಿಗಳ ಕುರಿತಾದ ಚಿತ್ರಣದ ಹೂರಣವನ್ನೇ ಕಾವ್ಯದೊಳಗೆ

ತುಂಬಿರುತ್ತಿದ್ದರು. ಇಲ್ಲಿಯು ಸಹ ಮಕ್ಕಳಿಗೆ ಪ್ರಿಯವಾದ ಮಂಗ ಹಾಗೂ ಇಡೀ ಪದ್ಯವನ್ನು ಆವರಿಸಿರುವ, ಕಿವಿಗಂಪನೆರೆಯುವ ಪ್ರಾಸದ ಗುಣಗಳಿಂದ ಮಕ್ಕಳು ಇದನ್ನು ಹೆಚ್ಚು ಗುನುಗುವ ಸಾಧ್ಯತೆಗಳಿವೆ. ಇದು ಒಂದು ಬಗೆಯಾದರೆ, ಇದರ ಇನ್ನೊಂದು ಸಾಧ್ಯತೆ ಎಂದರೆ ಈ ಕಾವ್ಯ ಐತಿಹಾಸಿಕ, ಪೌರಾಣಿಕ ಸಂಗತಿಗಳನ್ನು ಒಳಗೊಂಡಿದೆ. ಭಾರತ ದೇಶದ ಮಹಾಕಾವ್ಯಗಳಲ್ಲಿ ರಾಮಾಯಣದ ಸೀತಾಪಹರಣ ಸಂಗತಿಗಳನ್ನು ಎರಡೇ ಸಾಲುಗಳಲ್ಲಿ ಮಕ್ಕಳಿಗೆ ತಿಳಿಸುವ ಪ್ರಯತ್ನ ಇಲ್ಲಿದೆ. ಸೀತಾಪಹರಣದ ಸಂದರ್ಭದಲ್ಲಿ ಸೀತೆ ಲಕ್ಷಣ ರೇಖೆಯನ್ನು ದಾಟಿದ್ದಾಗಲಿ ಬಳಿಕ ಮಾಯಾಜಿಂಕೆಯ ಮಾರುವೇಷದಲ್ಲಿದ್ದ ರಾವಣ ಸೀತೆಯನ್ನು ಅಪಹರಿಸಿದ್ದು ಅಲ್ಲಿಂದ ಲಂಕೆಗೆ ಕರೆದೊಯ್ದದ್ದು, ರಾಮನ ಬಂಟ ಹನುಮಂತನು ಸೀತಾದೇವಿಯನ್ನು ಕರೆತರಲು ಮಾಡಿದ ಶೌರ್ಯ, ಸಾಹಸಗಳು, ತೋರಿದ ಜಾಣ್ಮೆ, ರಾವಣನ ಅಹಂಕಾರವನ್ನು ಸುಟ್ಟದ್ದು, ಪುನಃ ಸೀತಾ ರಾಮರನ್ನು ಒಂದುಗೂಡಿಸಿದ್ದು ಇವೆಲ್ಲವು ಕೇವಲ ಕಥಾ ಪ್ರಸಂಗಗಳಲ್ಲದೆ ಅದರಾಚೆಗೆ ಬದುಕು ಪಡೆಯುವ ಅನಿರಿಕ್ಷಿತ ತಿರುವುಗಳು ಹಾಗೂ ಮನುಷ್ಯ ಅವುಗಳನ್ನು ಅಂತಹ ಸಮಯದಲ್ಲಿ ಹೇಗೆ ಸಂಯಮದಿಂದ ಎದುರಿಸಬೇಕು ಹಾಗೂ ಒಳ್ಳೆಯತನವೇ ಕೊನೆಯವರೆಗೂ ಉಳಿಯುತ್ತದೆಂಬ ಸತ್ಯ ಹೀಗೆ ಅನೇಕ ಸೂಕ್ಷ್ಮ ಸಂಗತಿಗಳ ಮೂಲಕ ಮಕ್ಕಳಿಗೆ ಲೋಕಜ್ಞಾನ, ಇತಿಹಾಸ ಪ್ರಜ್ಞೆ ಮೌಲ್ಯಗಳ ಬಗೆಗಿನ ತಿಳುವಳಿಕೆ ಇತ್ಯಾದಿ ಅಂಶಗಳನ್ನು ತಿಳಿಸಲಾಗಿದೆ.

ಮಾಯಾಜಿಂಕೆಗೆ ಸೀತೆ ಮಾರುಹೋದದ್ದು ಮನಸಿನ ಚಂಚಲತೆಯನ್ನು, ಲಕ್ಷ್ಮಣ ರೇಖೆಯನ್ನು ದಾಟಿ ರಾವಣನ ಸೆರೆಯಾದದ್ದು, ಹಿರಿಯರು ಹಾಕಿದ ಗೆರೆಯನ್ನು ದಾಟಿದರೆ ಅದರಿಂದಾಗುವ ಅನಾಹುತವನ್ನು, ತನ್ನ ದೊರೆ ರಾಮನಿಗಾಗಿ ಹನುಮಂತ ಸೀತೆಯನ್ನು ಕರೆತರಲು ಪಣತೊಟ್ಟಿದ್ದು ಯಾವುದೇ ಒಂದು ಸಾಧನೆಗೆ ಬೇಕಾದ ದೃಢ ಮನಸ್ಸಿನ ಸಂಕಲ್ಪದ ಪ್ರತೀಕವನ್ನು ಹೀಗೆ ಒಂದೊಂದು ಪಾತ್ರಗಳು ನಮಗೆ ಒಂದೊಂದು ಅಂಶಗಳನ್ನು ತಿಳಿಸುತ್ತ ವರ್ತಮಾನದಲ್ಲಿ ಬದುಕುವ ರೀತಿ ಹೇಗಿರಬೇಕೆನ್ನುವುದಕ್ಕೆ ಭೂತಕಾಲದ ನೆರವನ್ನು ಪಡೆದಂತಾಗಿದೆ. ಅದಕ್ಕೆ ಇರಬೇಕು 'ಹಿಂದಣ ಹೆಜ್ಜೆಯನರಿಯದೆ ಮುಂದಡಿ ಇಡಲಾಗದು' ಎಂದು ಹೇಳಿರುವುದು. ಹೀಗೆ ಭೂತದ ನೆರಳಿನಲ್ಲಿ ವರ್ತಮಾನವನ್ನು ಕಟ್ಟಿಕೊಡುವ ಪ್ರಯತ್ನವನ್ನು ಇದರಿಂದ ಮಾಡಬಹುದು. ಹೀಗೆ ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಮಕ್ಕಳ ಕಾವ್ಯದ ನೆಲೆ, ಬೆಲೆ ನಾವೀಗ ತಿಳಿದುಕೊಂಡದ್ದಕ್ಕಿಂತಲೂ ಎತ್ತರಕ್ಕೆ ಏರುವ ಸಾಧ್ಯತೆಗಳಿವೆ ಎಂದು ಹೇಳಬಹುದು.

ಇದೇ ಬಗೆಯಲ್ಲಿ ಇನ್ನೊಂದು ಶಿಶುಪ್ರಾಸವನ್ನು ಇಲ್ಲಿ ನೋಡಬಹುದು.

ದಶರಥನ ಕಂದ
ರಾವಣನ ಕೊಂದ
ಸೀತೆಯನು ತಂದ

ಈ ಶಿಶುಪ್ರಾಸವು ಸಹ ಮೂರು ಸಾಲುಗಳಲ್ಲಿ ಸಹಜವಾಗಿಯೇ ಇಲ್ಲಿಯು ಒಂದು ಪೌರಾಣಿಕ ಹಿನ್ನೆಲೆ ಇದೆ. ಮಕ್ಕಳ ಜನಪದ ಕಾವ್ಯದ ಸಂಕ್ಷಿಪ್ತತೆ ಹಾಗೂ ಸಹಜತೆಗೆ ಇದಕ್ಕಿಂತ ಉತ್ತಮ ಉದಾಹರಣೆ ಬಹುಶಃ ಸಿಗಲಿಕ್ಕೆ ಇಲ್ಲ, ಬಾಯಿಂದ ಬಾಯಿಗೆ ಅದ್ಭುತ ವೇಗದಲ್ಲಿ ಪ್ರಸರಣಗೊಳ್ಳುವ ಗುಣವೇ ಈ ಶಿಶುಪ್ರಾಸದ ವಿಶೇಷತೆಯಾಗಿದೆ.

**ಅಕ್ಕ ತಂಗಿ ಕೂಡ್ಯಾರೇ**

ಅಕ್ಕ ತಂಗಿ ಕೂಡ್ಯಾರೇ
ಬಾರೇ ಹಣ್ಣಿಗೆ ಹೋಗ್ಯಾರೇ
ತೋಳಪ್ಪರಾಯ ಬಂದೇ ಬಂದ
ತಂಗಿಯನ್ನು ಅಗಿದು ತಿಂದ

ಮಕ್ಕಳಿಗೆ ಪ್ರಿಯವಾದ ಬಾರೇ ಹಣ್ಣಿನ ಸಂಗತಿ ಇಲ್ಲಿ ಪ್ರಸ್ತಾಪವಾಗಿದೆ. ಪ್ರಾಸದ ಗುಣದಿಂದಾಗಿ ಮಕ್ಕಳ ಸ್ಮೃತಿ ಪಟಲದಲ್ಲಿ ಬಹುಕಾಲ ನೆನಪಿನಲ್ಲಿ ಉಳಿಯುವ ಸಾಧ್ಯತೆಗಳಿವೆ. ಮೇಲ್ನೋಟಕ್ಕೆ ಹಣ್ಣಿಗೆ ಹೋಗುವುದು ಮತ್ತು ತೋಳ ಬಂದು ತಂಗಿಯನ್ನು ತಿನ್ನುವುದು ಕಾಡುಗಳ ಸಮೀಪವಿರುವ ಊರುಗಳ ಜನರ ಹಾಗೂ ಪ್ರಾಣಿಗಳ ನಡುವಿನ ಸಂಘರ್ಷವನ್ನೋ ಚಿತ್ರಿಸುವಂತೆ ಕಂಡರೂ ಇದಕ್ಕೆ ಇನ್ನೊಂದು ಅರ್ಥಸಾಧ್ಯತೆಯಿದೆ. ಹಿಂದಿನ ಕಾಲದಲ್ಲಿ ಪ್ರಭುತ್ವದ ದರ್ಪವನ್ನು ಎದುರಿಸುತ್ತಿದ್ದ ಜನಸಾಮಾನ್ಯರು ಮಹಿಳೆಯರು, ಮಕ್ಕಳು ಅಸಹಾಯಕವಾಗಿಯೇ ಬದುಕುತ್ತಿದ್ದರು. ಪ್ರಸ್ತುತ ಕಾವ್ಯವು ಹೆಣ್ಣು ಮಗುವಿನ ಮೇಲೆ ನಡೆದ ಅತ್ಯಾಚಾರದಂತಹ ಸೂಕ್ಷ್ಮ ಸಂಗತಿಗಳನ್ನು ಇದು ಒಳಗೊಂಡಿದೆ. ಹಣ್ಣಿನಾಸೆಗೆ ಹೋದ ಅಮಾಯಕ ಹೆಣ್ಣುಮಕ್ಕಳನ್ನು ತಮ್ಮ ಆಸೆ-ಆಮಿಷಗಳಿಗೆ ಬಲಿಪಶುವನ್ನಾಗಿಸಿದ ದುರಂತ ಕಥೆ ಇದಾಗಿದೆ. ಮಹಿಳೆಯರ ಮೇಲಿನ ಅತ್ಯಾಚಾರಗಳು ಇಂದು ನಿನ್ನೆಯದಲ್ಲ, ಇದಕ್ಕೆ ಶತಮಾನಗಳ ಇತಿಹಾಸ ಇದೆ ಎಂಬುದು ಇದರಿಂದ ತಿಳಿಯುತ್ತದೆ. ಅಂದರೆ ಶತಮಾನಗಳ ಇತಿಹಾಸಕ್ಕೆ ಈ ಘಟನೆಗಳು ಪುಷ್ಟಿ ನೀಡುತ್ತವೆ. ಇಲ್ಲಿ ತೋಳಪ್ಪರಾಯ ಎಂಬುದು ಲೈಂಗಿಕ ದೌರ್ಜನ್ಯ (ಅತ್ಯಾಚಾರ) ಎಸಗುವ ವ್ಯಕ್ತಿಗಳ ಸಾಂಕೇತಿಕ ರೂಪದಂತೆ ತೋರಿದೆ. ದೇವಸ್ಥಾನದಲ್ಲಿ ಪ್ರಸಾದ ಕೊಡಿಸುವುದಾಗಿ ಪುಸಲಾಯಿಸಿ ಬಾಲಕಿಯನ್ನು ಕರೆದೊಯ್ದು ಕಿರಾತಕನೊಬ್ಬ ಬಾಲಕಿ ಮೇಲೆ ಅತ್ಯಾಚಾರ ಎಸಗಿ ಮೃಗೀಯ ವರ್ತನೆ ತೋರಿದ ಪ್ರಸಂಗ ಈಚೆಗೆ ಬೆಂಗಳೂರಿನಲ್ಲಿ ನಡೆದದ್ದು ಮಾಧ್ಯಮಗಳಲ್ಲಿ ಬಿತ್ತರವಾಯಿತು. ನಿತ್ಯ ಅತ್ಯಾಚಾರ ಪ್ರಕರಣಗಳು ಸಾಕಷ್ಟು ಸಂಖ್ಯೆಯಲ್ಲಿ ಸುದ್ದಿ ಮಾಡಿದ್ದು ಇವೆ. ಇದಕ್ಕೆ ಕಡಿವಾಣ ಹಾಕುವ ಜರೂರು ತುರ್ತಿನಲ್ಲಿ ಆಗಬೇಕಿದೆ. ಮಕ್ಕಳ ಕಾವ್ಯ ಈ ಹಿಂದೆ ಪತ್ರಿಕೆ, ಟಿ.ವಿ. ಮಾಧ್ಯಮಗಳೇ ಇಲ್ಲದ ಕಾಲದಲ್ಲಿ ಇದೊಂದು ಸೂಕ್ಷ್ಮ ಸಂವೇದನೆಗಳ ಅಭಿವ್ಯಕ್ತಿಯ ಮಾಧ್ಯಮವಾಗಿ ಕೆಲಸ ಮಾಡಿದ್ದು ಅವಿಸ್ಮರಣೀಯವೇ ಸರಿ. ಪ್ರಸ್ತುತ ಕಾವ್ಯ ಒಂದು ನಿರ್ದಿಷ್ಟ ಪ್ರದೇಶದ ಅಭಿವ್ಯಕ್ತಿ ಮಾತ್ರ ಆಗಿರದೇ ಆ ಕಾಲದಲ್ಲಿ ನಡೆದಿರಬಹುದಾದ ಅನೇಕ ಘಟನೆಗಳ ಒಟ್ಟು ಮೊತ್ತವೇ ಆಗಿದೆ ಎಂದಷ್ಟೇ ಇಲ್ಲಿ ಹೇಳಬಹುದು.

## ಯತ್ತಿ ಯತ್ತಿ ಬಿದ್ದೆ

ಯತ್ತಿ ಯತ್ತಿ ಬಿದ್ದೆ
ಕಾಲ್ ಜಾರಿ ಬಿದ್ದೆ
ಅಲ್ಲೇನ ಬಿತ್ತು
ಹವಳ ಮುತ್ತು ಬಿತ್ತು
ಸಿಕ್ತೋ? ಏನ್ ಗಂಡನ್ ಕರಿಲೋ?
ಸಿಕ್ತು!

ವೈಚಾರಿಕತೆಯ ಈ ಆಧುನಿಕ ದಿನಮಾನಗಳಲ್ಲೂ ಭಾರತದ ಸಾಮಾಜಿಕ ಸಮಸ್ಯೆಗಳಲ್ಲಿ ಒಂದಾದ ಬಾಲ್ಯವಿವಾಹ ಪದ್ಧತಿಯ ನಿಷೇಧ ಕಾಯ್ದೆ ಜಾರಿಯಾದರೂ ಅದರ ಸಂಪೂರ್ಣ ಅನುಷ್ಠಾನ ಮಾತ್ರ ಇನ್ನೂ ಸಾಕಾರಗೊಂಡಿಲ್ಲ. ಈ ಹಿಂದೆ ಆಧುನಿಕಪೂರ್ವದ ದಿನಗಳಲ್ಲಿ ಹೆಣ್ಣುಮಕ್ಕಳು ೧೨ ವರ್ಷ ವಯೋಮಾನಕ್ಕೆ ಬಂದಾಗ ಅವರಿಗೆ ಮದುವೆ (ಬಾಲ್ಯವಿವಾಹ) ಮಾಡುವುದನ್ನು ಕಾಣಬಹುದಿತ್ತು. ಬಾಲ್ಯವಿವಾಹವಾದ ಯುವತಿಯ ಕೌಟುಂಬಿಕ ಚಿತ್ರಣ ಪ್ರಸ್ತುತ ಕಾವ್ಯದಲ್ಲಿದೆ. ತನ್ನ ಸೋದರತ್ತೆಯ ಜೊತೆಗೆ ಸಲುಗೆಯಿಂದ ಇದ್ದರೂ ಮುತ್ತು ಕಳೆದ ಕಾರಣಕ್ಕಾಗಿಯೇ ಅವಳಲ್ಲಿ ಅಂಜಿಕೆ ಶುರುವಾಗಿದೆ. ಅವಳ ಅಂಜಿಕೆಗೆ ಕೇವಲ ಮುತ್ತು ಕಳೆದಿರುವುದೊಂದೇ ಕಾರಣ ಅಲ್ಲದೆ ಅದರ ಹಿಂದೆ, ಪತಿಯ ಭಯವು ಇದೆ ಎಂಬುದು ಗಮಿಸಬಹುದಾದ ಸಂಗತಿ. 'ಸಿಕ್ತೋ? ಏನ್ ಗಂಡನ್ ಕರಿಲೋ?' ಎಂಬ ಪದ್ಯದ ಸಾಲು ಪುರುಷ ಪ್ರಧಾನ ವ್ಯವಸ್ಥೆಯ ಕೌಟುಂಬಿಕ ಚಿತ್ರಣವನ್ನು ನಮ್ಮ ಮುಂದೆ ತೆರೆದಿಡುತ್ತದೆ. ನಿರ್ಬಂಧಗಳಲ್ಲಿಯೇ ಬದುಕಬೇಕಾದ ಮಹಿಳೆಯರ ಅಸಹಾಯಕತೆಯನ್ನು ಇದು ಎತ್ತಿ ತೋರುತ್ತದೆ. ಈ ಹಿನ್ನೆಲೆಯಲ್ಲಿ ಮಹಿಳೆಯರ ಸ್ಥಾನಮಾನದ ವಿವೇಚನೆಯನ್ನು ಮಾಡಲು ಇದು ಅನುವು ಮಾಡಿಕೊಡುತ್ತದೆ. ಈ ಎಲ್ಲಾ ಅಂಶಗಳು ಮಕ್ಕಳ ಕಾವ್ಯದ ಒಳಗೆ ಇರಬಹುದಾದ ಸಾಮಾಜಿಕ ಒಳನೋಟಗಳನ್ನು ನಮ್ಮ ಮುಂದೆ ಸ್ಪಷ್ಟೀಕರಿಸಿದೆ. ಹಿರಿಯರ ಹಿನ್ನೆಲೆಯಲ್ಲಿ ಚರ್ಚಿಸಿದ ಈ ಎಲ್ಲ ವಿಚಾರಗಳನ್ನು ಬದಿಗಿಟ್ಟರೂ ಇದು ಸಹಜವಾಗಿಯೇ ತನ್ನ ಪ್ರಾಸದ ಗುಣದಿಂದಾಗಿ ಮಕ್ಕಳಿಗೆ ಇಷ್ಟವಾಗುತ್ತದೆ.

## ಚೆಂದಪ್ಪ ಚೆಂದಪ್ಪ ಚೆಲುವ

ಚೆಂದಪ್ಪ ಚೆಂದಪ್ಪ ಚೆಲುವ
ಚುಂಗು ಬುಟಗಂದ ಬರುವ
ಎಂಟೆತ್ತಿನ ಗಾಡಿ
ಗಾಡಿ ಮ್ಯಾಲೆ ನವಿಲು
ನವಿಲು ಪುಚ್ಚ ಕಿತ್ತಿ

ಚಿಗರಿ ಕೋಡಿಗಚ್ಚಿ

ಚಿಗರಿ ಚಿಗರಿ ಚಿಕ್ಕಣ್ಣ

ಹತ್ತಿ ಕಾಲು ಮುಕ್ಕಣ್ಣ.

ಸೂರ್ಯನ ರಥ ಸಪ್ತ ಚಕ್ರಗಳಿಂದ ಕೂಡಿದೆ ಎಂಬ ಕಲ್ಪನೆ ಜನಪದರದ್ದು. ಹಾಗೆಯೇ ಚಂದ್ರನಿಗೆ ಎಂಟು ಗಾಲಿಗಳಿಂದ ಕೂಡಿದ ರಥ ಇದೆಯೆಂದು ಇಲ್ಲಿ ತಿಳಿಸಲಾಗಿದೆ. ಚಂದ್ರನ ಮುಖದಲ್ಲಿ ಕಾಣಿಸುವ ಚಿಗರಿ, ನವಿಲುಗಳನ್ನು ರೂಪಕ್ಕಿಳಿಸಿದ ಅದ್ಭುತ ರಮ್ಯಕಲ್ಪನೆ ಇಲ್ಲಿದೆ.

**ಈಟೀ ಮಗ ಚೋಟಿ ಮಗ**

ಈಟೀ ಮಗ ಚೋಟಿ ಮಗ

ಸರ್ಕಾರಕ್ಕೋಗಿ ಸಹಿ ಮಾಡಿ ಬರ್ತಾನ.

ಇಲ್ಲಿ ಜನಪದ ತಾಯಿಯೊಬ್ಬಳು ತನ್ನ ಮಗನು ನೌಕರಿ ಸೇರಿದ ಪ್ರಸಂಗವನ್ನು ಈ ಎರಡು ಸಾಲುಗಳಲ್ಲಿ ಹಿಡಿದಿಟ್ಟಿದ್ದಾಳೆ. 'ಈ ಕವಿತೆ ಸರಕಾರಿ ನೌಕರಿಯ ಶಕೆ ಪ್ರಾರಂಭವಾದ ದಿನಗಳನ್ನು ಸೂಚಿಸುತ್ತದೆ. ಪ್ರಜಾಪ್ರಭುತ್ವ ವ್ಯವಸ್ಥೆ ಮತ್ತು ಸಂವಿಧಾನ ಅಸ್ತಿತ್ವಕ್ಕೆ ಬಂದ ಬಳಿಕ ಸರ್ಕಾರ ತನ್ನ ಯೋಜನೆಗಳನ್ನು ಊರ್ಜಿತಗೊಳಿಸಲು ಹಲವಾರು ಇಲಾಖೆಗಳನ್ನು ತೆರೆದು ಹಲವು ಉದ್ಯೋಗಗಳನ್ನು ಸೃಷ್ಟಿ ಮಾಡಿತು. ಭಾರತ ದೇಶದಲ್ಲಿ 'ಸಾರ್ವಜನಿಕ ಶಿಕ್ಷಣ'ದ ಕಲ್ಪನೆ ಬಂದದ್ದೇ ೧೯೩೫ರ ಸಂದರ್ಭದಲ್ಲಿ. ಆದ್ದರಿಂದ ವಿದ್ಯಾವಂತರ ಕೊರತೆ ಎದ್ದು ಕಾಣುತ್ತಿತ್ತು. ಇಂದಿನಂತೆ ಅಂದು ಸರ್ಕಾರಿ ನೌಕರ ಸೇರಲು ಅತಿ ಹೆಚ್ಚಿನ ಶಿಕ್ಷಣ (ಉನ್ನತ ಶಿಕ್ಷಣ)ದ ಅಗತ್ಯವು ಇರಲಿಲ್ಲ. ಇಂತಹ ಕಾಲಘಟ್ಟದಲ್ಲಿ ತನ್ನ ಮಗನೊಬ್ಬ ತಕ್ಕಮಟ್ಟಿಗಿನ ಶಿಕ್ಷಣ ಪೂರೈಸಿ ಸರಕಾರಿ ನೌಕರಿ ಸೇರಿದ್ದು, ಅವನು ಅಲ್ಲಿ ಸಹಿ ಮಾಡಿದ್ದನ್ನು ಜನಪದ ತಾಯಿಯು ತನ್ನ ಮಗನನ್ನು ಒಬ್ಬ ಅಧಿಕಾರಿಯೆಂಬಂತೆ ಭಾವಿಸಿಕೊಳ್ಳುವ ತಾಯಿ ಪ್ರೀತಿಯ ಸಂಭ್ರಮ ಇಲ್ಲಿ ವ್ಯಕ್ತವಾಗಿದೆ.

ಮೊದ ಮೊದಲು ಸರ್ಕಾರಿ ನೌಕರಿ ಎಂದರೆ ಜನರಲ್ಲಿ ಒಂದು ಬಗೆಯ ತಾತ್ಸಾರ ಭಾವನೆಯಿತ್ತು. ಅದಕ್ಕೆ ಅಷ್ಟಾಗಿ ಸಮಾಜದಲ್ಲಿ ಮನ್ನಣೆಯಿರಲಿಲ್ಲ. ಸರ್ಕಾರಿ ನೌಕರರನ್ನು ಕೀಳಾಗಿ ಕಾಣುವ ಮನೋಭಾವ ನಮ್ಮ ಸಮಾಜದಲ್ಲಿದ್ದು, ಸರ್ಕಾರಿ ನೌಕರರನ್ನು ಸರ್ಕಾರದ ಗುಲಾಮರೆಂದೇ ಭಾವಿಸಲಾಗುತ್ತಿತ್ತು. ಆದರೆ ಕ್ರಮೇಣ ಈ ಮನೋಧೋರಣೆಗಳು ಬದಲಾಗಿ ಜನರು 'ಸರ್ಕಾರಿ ನೌಕರಿ' ಎಂದರೆ ಅದೊಂದು ಗೌರವಪೂರ್ವಕ ಹುದ್ದೆ ಎಂತಲೂ, ಆರಾಮದಾಯಕ ಎಂತಲೂ ತಮ್ಮ ಕೃಷಿ ಚಟುವಟಿಕೆಗಳಿಗೆ ಹೋಲಿಕೆ ಮಾಡಿ ನೋಡುವ ಆಲೋಚನಾ ಕ್ರಮಗಳು ಬೆಳೆದು, ಕೃಷಿಯಲ್ಲಿನ ಅಕಾಲಿಕ ಮಳೆ, ಪ್ರವಾಹದಿಂದ ನಷ್ಟವಾದ ಬೆಳೆ, ರೋಗರುಜಿನಗಳಿಂದ ಬೆಳೆಹಾನಿ, ಕೂಲಿಕಾರರ ಸಮಸ್ಯೆ, ಬೆಳೆದ ಬೆಳೆಗಳಿಗೆ ಒಳ್ಳೆ ಬೆಲೆ ಸಿಗದೇ ಇರುವುದು ಈ ಬಗೆಯ ನೂರೆಂಟು ಸಂಗತಿಗಳಿಗಿಂತ ಸರ್ಕಾರಿ ನೌಕರಿಯೇ

ಉತ್ತಮವೆಂದು ಭಾವಿಸಿ ತಮ್ಮ ಮಕ್ಕಳನ್ನು ಹೆಚ್ಚು ಹೆಚ್ಚು ವಿದ್ಯಾವಂತರನ್ನಾಗಿ ಮಾಡಿ ಸರ್ಕಾರಿ ನೌಕರಿಗೆ ಕಳಿಸುವ ರೂಢಿ ಬಂದಿರಬೇಕೆನಿಸುತ್ತದೆ. 'ಆಡು ಮುಟ್ಟದ ಸೊಪ್ಪಿಲ್ಲ' ಎನ್ನುವಂತೆ ಮಕ್ಕಳ ಕಾವ್ಯ ಬದುಕಿನ ಎಲ್ಲ ಸಂಗತಿಗಳಿಗೂ ತನ್ನನ್ನು ತಾನು ತೆರೆದುಕೊಳ್ಳುತ್ತ ಬಂದಿತು. ಮಕ್ಕಳ ಕಾವ್ಯವು ಈ ಮೂಲಕ ನವ ನವೀನವಾಗುತ್ತ ತನ್ನ ನೆಲೆ-ಬೆಲೆಯನ್ನು ಕಂಡುಕೊಂಡಿದ್ದನ್ನು ಇದು ತಿಳಿಸಿಕೊಡುತ್ತದೆ. ಈ ಅಂಶಕ್ಕೆ ಪೂರಕವಾಗಿ ನಿದರ್ಶನವೆಂಬಂತೆ ನಾವಿಲ್ಲಿ ಇನ್ನೊಂದು ಪ್ರಾಸವನ್ನು ಉದಾಹರಿಸಬಹುದು.

ಬಿಳೆ ಹೊಲ ಕರೆ ಕಡ್ಲಿ
ಬಲ್ಲಂತ ಜಾಣ ಬಾಯ್ಯಾಗ ಹಕ್ಯಾಂತಾನ

ಈ ಮಕ್ಕಳ ಕಾವ್ಯದ ಒಗಟಿನ ಉತ್ತರ 'ಅಕ್ಷರ'. ಮಾನವನ ಬದುಕಿನೊಳಗೆ ಲಿಖಿತ ಸಂಪ್ರದಾಯ ಕಾಲಿಟ್ಟಾಗ ಮಕ್ಕಳ ಕಾವ್ಯದ ಒಗಟುಗಳು ಸ್ಪಂದಿಸಿದ ರೀತಿ ಇದಾಗಿದೆ. ಮಾನವನ ನಾಗರೀಕತೆಯ ಚಲನೆಯಲ್ಲಿ ಲಿಖಿತ ಸಂಪ್ರದಾಯದ ಉಗಮವು ಒಂದು ಮೈಲಿಗಲ್ಲು ಎಂದೇ ಹೇಳಬಹುದು. ಹೀಗೆ ನಾಗರೀಕತೆಯ ದಾರಿಯಲ್ಲಿ ಸಂಚಲನ ಸೃಷ್ಟಿಸಿದ ಸಂಗತಿಯನ್ನು ಅತ್ಯಂತ ಸೂಕ್ಷ್ಮವಾಗಿ ಕೇವಲ ಎರಡು ಸಾಲಿನಲ್ಲಿ ಹಿಡಿದಿಡುವ ಅಪಾರ ಬುದ್ಧಿವಂತಿಕೆ ನಮ್ಮ ಜನಪದ ಮಕ್ಕಳ ಕಾವ್ಯದ ಮನಸ್ಸುಗಳದ್ದು ಎಂಬುದಕ್ಕೆ ಇದು ಸಾಕ್ಷಿಯಾಗಿದೆ. ಇಲ್ಲಿ ಬಿಳಿ ಹೊಲ ಎಂದರೆ ಬಿಳಿ ಹಾಳೆ ಎಂದೂ, 'ಕರೆ ಕಡ್ಲಿ' ಎಂದರೆ ಬಿಳಿ ಹಾಳೆಯ ಮೇಲೆ ಮೂಡಿದ ಕಪ್ಪು ಅಕ್ಷರ ಎಂದೂ ತಿಳಿಯಬಹುದಾಗಿದೆ. ಮತ್ತು ಕೊನೆಯದಾಗಿ ಅಕ್ಷರ ಜ್ಞಾನದ ಸವಿಯನ್ನು ಎಲ್ಲರೂ ಸವಿಯಲು ಸಾಧ್ಯವಿಲ್ಲ, ಬಲ್ಲವರು ಎಂದರೆ ಅಕ್ಷರ ಕಲಿತವರೇ ಅದರ ಸವಿಯನ್ನು ಸವಿಯಬಲ್ಲರು ಎಂಬುದರ ಹಿನ್ನೆಲೆಯಲ್ಲಿ 'ಬಲ್ಲಂತ ಜಾಣ ಬಾಯ್ಯಾಗ ಹಕ್ಯಾಂತಾನ' ಎಂಬ ಸಾಲು ಮೂಡಿಬಂದಿದೆ.

ಹಿರಿಯರಿಗೆ ಗೀಗಿಪದ, ಲಾವಣಿ ಪದ, ಸವಾಲ್ ಜವಾಬ್, ರಿವಾಯಿತ್ ಪದ, ಭಜನಾ ಪದ, ಡೊಳ್ಳಿನ ಪದ ಹಾಗೂ ಮಾತಿನ ಒಗಟಿನ, ಬೆಡಗಿನ ರಚನೆಗಳಿರುವಂತೆಯೇ ಮಕ್ಕಳಿಗೆ ಅವರ ಜ್ಞಾನ ಮತ್ತು ಭಾವ ವಿಕಾಸಕ್ಕೆ ಕಲ್ಪನಾಶಕ್ತಿಯ ವಿಸ್ತರಣೆಗೆ ಒಗಟುಗಳು ಜನಪದರು ನಮ್ಮ ಮಕ್ಕಳಿಗೆ ನೀಡಿದ ವಿಶಿಷ್ಟ ಕೊಡುಗೆಗಳಾಗಿವೆ.

ಮಾಳಿಗೆ ಮೇಲೆ ಹಪ್ಪಳ
ಗಂಡ-ಹೆಂಡತಿ ಸಪ್ಪಳ

ಈ ಶಿಶುಪ್ರಾಸವು ಕೇವಲ ಎರಡೇ ಸಾಲಿನಿಂದ ಕೂಡಿರುವುದರಿಂದಾಗಿ ಮಕ್ಕಳಿಗೆ ಪ್ರಿಯವಾಗಬಲ್ಲುದು. ಕಾರಣ ಹೇಳುವುದನ್ನು ತುಂಬಾ ಚುಟುಕಾಗಿ ಹಾಗೂ ಪ್ರಾಸಬದ್ಧವಾಗಿ ಹೇಳಲಾಗಿದೆ. 'ಸಂಕ್ಷಿಪ್ತತೆ' ಎಂಬುದು ಶಿಶುಪ್ರಾಸಗಳ ಮುಖ್ಯ ಗುಣವೂ ಹೌದು. ಮಕ್ಕಳು ಸದಾ ಕುತೂಹಲಿಗಳಾಗಿರುವುದರಿಂದ ಯಾವುದೋ ಒಂದು ಸಂಗತಿ ಹೆಚ್ಚು ಕಾಲ ಮಕ್ಕಳ

ಮನಸ್ಸನ್ನು ಹಿಡಿದಿಡಲಾರದು. ಪಾದರಸದಂತೆ ಅವರ ಚಿತ್ತವು ಸದಾ ಆ ಕಡೆ ಈಕಡೆ ಹರಿದಾಡುತ್ತಿರುತ್ತದೆ. ಈ ಹಿನ್ನೆಲೆಯಲ್ಲಿ ಎರಡು ಸಾಲಿನ ಶಿಶುಪ್ರಾಸಗಳು ಹೆಚ್ಚು ಸೂಕ್ತವು ಎನಿಸಬಹುದು.

ಭಾರತ ಮೂಲತಃ ಕೃಷಿ ಪ್ರಧಾನ ರಾಷ್ಟ್ರ ಆಗಿದ್ದು, ಇದು ಅವಿಭಕ್ತ ಕುಟುಂಬಗಳ ಬೀಡಾಗಿತ್ತು. ಆದರೆ ಇಂದು ಅವಿಭಕ್ತ ಕುಟುಂಬಗಳ ಸಂಖ್ಯೆ ತೀರಾ ವಿರಳವಾಗಿದೆ. ವಿಭಕ್ತ ಕುಟುಂಬಗಳಿಂದಾಗಿ ಇಂದು ಮಕ್ಕಳಿಗೆ ಅವರ ನೆಂಟರ, ಅಜ್ಜ-ಅಜ್ಜಿಯರ ಸಂಪರ್ಕಗಳು ಕಡಿತಗೊಂಡು ಮಕ್ಕಳ ಸಂಬಂಧಗಳ ಪ್ರಪಂಚ ಇಂದು ತೀರಾ ಕಿರಿದಾಗಿದೆ. ಮೊದ ಮೊದಲು ಬೇಸಿಗೆ ರಜೆ ಬಂತೆಂದರೆ ಸಾಕು, ನಗರಗಳ ಮಕ್ಕಳ ಹಳ್ಳಿಯಲ್ಲಿರುವ ತಮ್ಮ ಅಜ್ಜ ಅಜ್ಜಿಯರ ಮನೆಗಳಲ್ಲಿ ಠಿಕಾಣಿ ಹೂಡುತ್ತಿದ್ದರು. ಆದರೆ ಬದಲಾದ ಜೀವನ ಶೈಲಿಗಳಿಂದಾಗಿ ಬೇಸಿಗೆ ರಜೆಯಲ್ಲಿ ಅಜ್ಜ-ಅಜ್ಜಿಯರ ಮನೆಗಳಿಗೆ ತೆರಳದೆ ಬೇಸಿಗೆ ಶಿಬಿರ(ಸಮ್ಮರ್ ಕ್ಯಾಂಪ್)ಗಳಲ್ಲಿ ಉಳಿಯಬೇಕಿರುವುದರಿಂದ ಅಜ್ಜ-ಅಜ್ಜಿ ನೆಂಟರು, ಹಳ್ಳಿಯ ಹೊಲಗದ್ದೆ ಇತ್ಯಾದಿ ಎಲ್ಲವೂ ಬರಿ ಕನಸಾಗಿಯೇ ಉಳಿದು ಸಂಬಂಧಗಳ ಮೌಲ್ಯಗಳನ್ನು ಅವರು ತಿಳಿಯಲಾರದ ಆತಂಕ ಇಂದಿನ ಮಕ್ಕಳ ಮುಂದಿದೆ. ಹೀಗೆ ಈ ಬಗೆಯ ವಿಭಕ್ತ ಕುಟುಂಬಗಳಿಂದ ಒಂದು ಕ್ಷಣ ದೂರ ನಿಂತು ಅವಿಭಕ್ತ ಕುಟುಂಬವೊಂದರಲ್ಲಿ ನಡೆದಿರಬಹುದಾದ ಕೌಟುಂಬಿಕ ಚಿತ್ರಣವೊಂದರ ಅಭಿವ್ಯಕ್ತಿಯನ್ನು ಈ ಶಿಶುಪ್ರಾಸ ನಮ್ಮೆದುರು ತೆರೆದಿಡುತ್ತದೆ. ಅವಿಭಕ್ತ ಕುಟುಂಬಗಳಿಗೂ ಕೆಲ ಇತಿ ಮಿತಿಗಳಿದ್ದರೂ ಸಹ ಮನೆಯೊಳಗಿನ ಮಕ್ಕಳು ಮಾತ್ರ ಮನೆಯ ಎಲ್ಲ ಸದಸ್ಯರ ಒಡನಾಟ ಹಾಗೂ ಭರಪೂರ ಸಂಬಂಧಗಳ ತೆಕ್ಕೆಯಲ್ಲಿ ಹೆಚ್ಚು ಸುಖಿಗಳಾಗಿದ್ದರೆಂದೇ ಹೇಳಬಹುದು. ಸಂಜೆಯಾದರೆ ಸಾಕು ಮಕ್ಕಳು ಹಿರಿಯರ ಹಾಡು, ಹರಟೆ, ಜನಪದ, ಒಗಟು-ಶಿಶುಪ್ರಾಸಗಳು ಸಂಭ್ರಮದಲ್ಲಿ ಮುಳುಗಿ ಬಿಡುತ್ತಿದ್ದರು. ಅವಿಭಕ್ತ ಕುಟುಂಬದಲ್ಲಿನ ಮಕ್ಕಳಿಗೆ ಅಲ್ಲಿ ಕಾಣಬಹುದಾದ ಆಕಸ್ಮಿಕ ಪ್ರಸಂಗಗಳನ್ನು ಅವರು ಹೇಗೆ ತಮ್ಮ ಮನೋರಂಜನೆಗೆ ಸರಕನ್ನಾಗಿಸಿಕೊಳ್ಳುತ್ತಿದ್ದರೆಂಬುದಕ್ಕೆ ಪ್ರಸ್ತುತ ಶಿಶುಪ್ರಾಸ ಸಾಕ್ಷಿಯಾಗಿದೆ. ಈ ಬಗೆಯ ಚಿನಕುರುಳಿಯ ಪ್ರಸಂಗಗಳ ಮಕ್ಕಳಿಗೆ ಮನೋರಂಜನೆಗೆ ಒದಗಿಸಿದರೆ ಹಿರಿಯುರಿಗೆ ಇಂತಹ ಸಂಗತಿಗಳ ಶಿಶುಕಾವ್ಯದ ವಸ್ತುಗಳಾಗಿಬಿಡುತ್ತಿದ್ದವು.

ಪ್ರಸ್ತುತ ಶಿಶುಕಾವ್ಯದೊಳಗಿನ ದಂಪತಿಗಳಿಬ್ಬರು ಯಾವುದೋ ಒಂದು ಕಾರಣದ ಬೆನ್ನು ಹತ್ತಿ ರಾತ್ರಿ ವೇಳೆ ಮಲಗಲು ಮಾಳಿಗೆಯನ್ನೇರಿದ್ದಾರೆ. ಇಂದಿಗೂ ಸಹ ಮನೆಯ ಮಾಳಿಗೆಯ ಮೇಲೆ ಸಂಡಿಗೆ-ಹಪ್ಪಳಗಳನ್ನು ಒಣಗಿ ಹಾಕುವ ರೂಢಿಗಳು ಇವೆ. ಹಗಲೆಲ್ಲ ಮಾಳಿಗೆ ಮೇಲೆ ಹಪ್ಪಳಗಳನ್ನು ಒಣಗಿ ಹಾಕಿದ್ದ ಸಂಗತಿ ತಿಳಿದ ಮಕ್ಕಳು ರಾತ್ರಿ ವೇಳೆ ಹಪ್ಪಳ ಕದಿಯಲು ಹೊಂಚು ಹಾಕಿ, ದಂಪತಿಗಳು ಮಲಗಿ ರಾತ್ರಿಯ ಜಗಳಕ್ಕೆ (ಸರಸಕ್ಕೆ) ಇಳಿದಿರಬಹುದಾದ ಹೊತ್ತಲೇ ಆಕಸ್ಮಿಕವಾಗಿ ಮಾಳಿಗೆಯೇರಿದಾಗ ಕಂಡ ಸ್ವಾರಸ್ಯಕರ ಪ್ರಸಂಗವೊಂದರ ಹೂರಣವೇ ಈ ಶಿಶುಪ್ರಾಸವಾಗಿದೆ.

ಇಲ್ಲಿ ಬಹಳ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ, ಅವಿಭಕ್ತ ಕುಟುಂಬಗಳು ಉಸ್ಮೃತಿಯ ಅಂಚಿನಲ್ಲಿರಬಹುದಾದ ವಿಭಕ್ತ ಕುಟುಂಗಳಿಗೆ ಆ ಹೊತ್ತಿನ ಅವಿಭಕ್ತ ಕುಟುಂಬಗಳ ನೆನಪನ್ನು ಮೆಲುಕುಹಾಕುವಂತಹ ಕಾರ್ಯ ಈ ಪ್ರಾಸ ಮಾಡುತ್ತದೆ. ಇಡೀ ಪ್ರಾಸ ಮಕ್ಕಳಿಗೆ ಮನೋರಂಜನೆಯಾಗಿ ತೋರಿದರೆ, ಹಿರಿಯರಿಗೆ ಇನ್ನೊಂದು ಅರ್ಥಸಾಧ್ಯತೆಯ ಪ್ರಪಂಚವನ್ನು ತೆರೆದಿಡುತ್ತದೆ.

ಈ ಹಿಂದೆ ತಿಳಿಸಿರುವಂತೆ ಹಿರಿಯರ ರಚನೆಯ ಮಕ್ಕಳ ಕಾವ್ಯವು ಹಲವು ಉದ್ದೇಶಗಳ ಈಡೇರಿಕೆಗಾಗಿ ರಚನೆಯಾಗಿದ್ದು ಅದು ಬಹುಮುಖಿ ಸಾಧ್ಯತೆಗಳತ್ತ ತನ್ನನ್ನು ತಾನು ತೆರೆದುಕೊಳ್ಳಲಾಗಿದ್ದು ಅಂತಹ ಇನ್ನೊಂದು ಸಾಧ್ಯತೆಯೂ ನಾವಿಲ್ಲಿ ನೋಡಬಹುದು. ಎ.ಟಿ. ಅಂಗಡಿ ಎಂಬ ಕವಿ ಶಿಕ್ಷಕರು ಮಕ್ಕಳಿಗೆ ಮಗ್ಗಿಯ ಕಲಿಕೆಯ ವಿಧಾನವನ್ನು ಸರಾಗಗೊಳಿಸಲು ಮಕ್ಕಳ ಕಾವ್ಯವನ್ನೇ ಮಾಧ್ಯಮವನ್ನಾಗಿ ಮಾಡಿಕೊಂಡಿದ್ದಾರೆ. ಇದೆ ಹಿರಿಯರ ಮಕ್ಕಳ ಕಾವ್ಯದ ಹಿರಿಮೆಯಾಗಿದೆ.

**ನಾವೆಲ್ಲರೂ ಒಂದೇ**

ಒಂದು ಒಂದ್ಲೆ ಒಂದು
ನಾವೆಲ್ಲರೂ ಒಂದು

ಒಂದು ಎರಡ್ಲೆ ಎರಡು
ಸ್ನೇಹ ಭಾವ ಹರಡು

ಒಂದು ಮೂರ್ಲೆ ಮೂರು
ಕುಡಿಯೋದೊಂದೇ ನೀರು

ಒಂದು ನಾಲ್ಕಲೆ ನಾಲ್ಕು
ಜಾತಿ ಭೇದ ನೂಕು

ಒಂದು ಐದ್ಲೆ ಐದು
ಭೇದ ಭಾವ ತೊರೆದು

ಒಂದು ಆರ್ಲೆ ಆರು
ದೇಶಭಕ್ತಿ ತೋರು

ಒಂದು ಏಳ್ಲೆ ಏಳು
ಮೌಢ್ಯದ ಬೇರು ಕೀಳು

ಒಂದು ಎಂಟ್ಲೆ ಎಂಟು
ಒಗ್ಗಟ್ಟಿನಲೇ ಬಲವುಂಟು

ಒಂದು ಒಂಭತ್ತೆ ಒಂಭತ್ತು
ಭಾರತಿಗಿದುವೇ ಸಂಪತ್ತು

ಒಂದು ಹತ್ತಲೆ ಹತ್ತು
ಶಾಂತಿ ಬೀಜವ ಬಿತ್ತು.[೧]

ಈ ಕಾವ್ಯದಲ್ಲಿ ಕವಿ ಮಕ್ಕಳಿಗೆ ಮಗ್ಗಿಯನ್ನು ಕಲಿಸುವ ಜೊತೆ ಜೊತೆಗೆ ದೇಶದ ಬಗೆಗಿನ ಅಭಿಮಾನವನ್ನು ತಿಳಿಸುವ ಕೆಲಸ ಮಾಡಿದ್ದಾರೆ. ಇವರ 'ಮಗ್ಗಿಯ ಮಾಮನ ಹಾಡುಗಳು' ಸಂಕಲನದಲ್ಲಿ ೧೦ರವರೆಗಿನ ಮಗ್ಗಿಯನ್ನು ಹೀಗೆ ಕಾವ್ಯಾತ್ಮಕವಾಗಿಯೇ ಪರಿಚಯಿಸಿದ್ದಾರೆ. ಮಕ್ಕಳ ಕಾವ್ಯವು ಪ್ರಕಾರದ ಅಭಿವ್ಯಕ್ತಿಯ ಹಿನ್ನೆಲೆಯಲ್ಲಿಯೂ ಗಮನ ಸೆಳೆಯುವಂತದ್ದಾಗಿದ್ದು ಕನ್ನಡ ಮಕ್ಕಳ ಕಾವ್ಯಕ್ಕೆ ತಮ್ಮದೆ ಕೊಡುಗೆ ನೀಡಿದ ಮಧುರಕಾನನ ಗೋಪಾಲಕೃಷ್ಣ ಭಟ್‌ರ ಕೃತಿಯೊಂದುನ್ನು ಇಲ್ಲಿ ಸ್ಮರಿಸಬಹುದು. ಮಕ್ಕಳ ರಾಮಾಯಣ ಎಂಬ ಅವರ ಕೃತಿಯ ಚಾತರಿಯಲ್ಲಿ ರಚಿತವಾದ ಮಹಾಕಾವ್ಯವಾಗಿದೆ. ಮಹಾಕಾವ್ಯ ಕಾವ್ಯ ಪ್ರಕಾರವನ್ನು ಮಕ್ಕಳ ಕಾವ್ಯ ಲೋಕಕ್ಕೂ ಪರಿಚಯಿಸಿದ ಕೀತಿ ಇವರಿಗೆ ಸಲ್ಲುತ್ತದೆ. ಈ ಕೃತಿಯಲ್ಲಿನ 'ಬಾಲಕಾಂಡ ದಶರಥನ ಕಥೆ'ಯ ಭಾಗದಲ್ಲಿ ಬರುವ ರಚನೆಗಳು ಇಲ್ಲಿ ಗಮನಿಸಬಹುದು.

ದಶರಥನಾಳಿದ ರಾಜ್ಯದ ಕಥೆಯೋ
ನಾಡದು ಮೆರೆಯಿತು ಸ್ವಗಸದು
ಭೂಮಿಯ ಸ್ವರ್ಗವೆ ಕೋಸಲವಾಯಿತು
ಭೂಪತಿ ದಶರಥಗಾರನದು॥

ಸ್ತ್ರೀಯರು ಪುರುಷರು ಧರ್ಮದಿ ನಡೆವರು
ನಿರ್ಮಲ ಮನವನೆ ಹೊಂದಿಹದು
ಕಳ್ಳರ ನೀಚರ ವಿರಹಿತ ನಗರವು
ಸುಖ ಸಂತೋಷದ ತವರೂರು॥[೨]

**೩.೨. ಮಕ್ಕಳು ರಚಿಸಿದ ಮಕ್ಕಳ ಕಾವ್ಯ**

ಕನ್ನಡ ಮಕ್ಕಳ ಕಾವ್ಯ ಲೋಕಕ್ಕೆ ಹಿರಿಯರು ಕಾಣಿಕೆ ನೀಡಿದಂತೆ ಮಕ್ಕಳು ಸಹ ತಮ್ಮ ವಿಭಿನ್ನ ಬರವಣಿಗೆಯಿಂದ ತಮ್ಮದೇ ಆದ ಕಾಣಿಕೆಯನ್ನು ನೀಡಿದ್ದಾರೆ. ವಿದ್ಯಾಸಾಗರ ಕುಕ್ಕುಂದಾ ಎಂಬ ಬಾಲಕ ೧೦ನೇ ತರಗತಿಯಲ್ಲಿ ಓದುತ್ತಿರುವಾಗಲೇ ಆಕಸ್ಮಿಕವಾಗಿ ಸಂಭವಿಸಿದ ಅಪಘಾತದಲ್ಲಿ ದುರ್ಮರಣಕ್ಕಿಡಾದ ಕವಿಯಾಗಿದ್ದು, 'ನನ್ನ ಕನಸು' ಎಂಬ ಸಂಕಲನವನ್ನು ಪ್ರಕಟಪಡಿಸಿದ್ದಾರೆ. ಸಂಕಲನದ ಕವಿತೆಯೊಂದು ಹೀಗಿದೆ;

**ಹಬ್ಬದ ದಿನ**

ಹಬ್ಬದ ದಿನವದು
ಬಂದಿಹುದು

ಎಲ್ಲೆಡೆ ಸಂತಸ
ತಂದಿಹುದು

ಹೊಸ ಹೊಸ ಬಟ್ಟೆಯ
ಸಡಗರವು
ಕುಣಿ ಕುಣಿದಾಡಿದೆ
ಮೈಮನವು

ಮನೆಯಲಿ ತರ ತರ
ತಿಂಡಿಗಳು
ಆತುರ ಪಡುತಿವೆ
ಮನಸುಗಳು

ತಿನ್ನುವ ತವಕವು
ನನಗೀಗ
ಬಾಯಿಗೆ ಬರುವುದು
ಯಾವಾಗ?[೩]

ಈ ಮಕ್ಕಳ ಕವಿತೆ ಅತ್ಯಂತ ಸರಳವಾದ ರಚನೆಯಿಂದ ಕೂಡಿದೆ. ಕವಿತೆಯ ತುಂಬಾ ಹಬ್ಬದ ಸಂಭ್ರಮವೇ ತುಂಬಿದೆ. ಕವಿತೆಯೊಳಗಿನ ಅಂತ್ಯಪ್ರಾಸವು ಕವಿತೆಗೆ ಮತ್ತೊಂದಿಷ್ಟು ಮೆರಗು ನೀಡಿದೆ. ಕವಿ ಬಾಲಕನಾದರೂ ಕವಿತೆಯಲ್ಲಿ ರಚನೆಯ ಪ್ರಬುದ್ಧತೆ ಎದ್ದು ತೋರುತ್ತದೆ. ಹಬ್ಬಗಳು ಭಾರತದ ಸಾಂಪ್ರದಾಯಿಕ ವ್ಯವಸ್ಥೆಯ ಒಂದು ಭಾಗವೇ ಆಗಿವೆ. ಇವು ಪ್ರತಿ ಮನೆಮನಗಳ ಸಡಗರಕ್ಕೆ ಕಾರಣವಾಗುವಂತವು. ಇಂತಹ ಪರಿಸರದಲ್ಲಿ ಬೆಳೆದ ಬಾಲಕ ವಿದ್ಯಾಸಾಗರನ ಮೇಲೆ ಅದು ಸಹಜವಾಗಿಯೇ ಪ್ರಭಾವ ಬೀರಿದೆ.

ಕಾಣುವ ಲೋಕದ ಕುರಿತು ಕಾವ್ಯ ಕಟ್ಟುವುದು ಕವಿಯ ಮನೋಧರ್ಮವಾಗಿದ್ದರೂ ಕಾಣದೇ ಇರುವ ಜಗತ್ತನ್ನು ಸಹ ಕಲ್ಪಿಸಿಕೊಂಡು ಸಹೃದಯಿಗಳ ಎದುರು ತೆರೆದಿಡುವುದು ಕವಿಗೆ ಸವಾಲಿನ ಸಂಗತಿಯೇ ಆಗಿರುತ್ತದೆ. ತನ್ನ ಕಲ್ಪನೆಯ ಮೂಲಕ ಕವಿ ಇಲ್ಲಿ ಚಂದ್ರಲೋಕಕ್ಕೆ ತೆರಳುವ ಸಾಹಸ ಮಾಡುತ್ತಾನೆ.

### ನನ್ನ ಕನಸು

ಗಗನ ಯಾನ
ಮಾಡಿ ನಾನು
ಎತ್ತರಕ್ಕೆ ಹೋಗುವೆ

ಮೇಲೆ ಚಂದ್ರ
ಲೋಕದಲ್ಲಿ ಚಂಗನೆಂದು ಜಿಗಿಯುವೆ

ಚಂದ್ರ ಲೋಕ
ಭವ್ಯ ಲೋಕ
ಎಲ್ಲ ಸುತ್ತಿ ಮೆರೆಯುವೆ

ಊಟ - ಆಟ
ವಿದ್ಯೆ - ನಿದ್ದೆ
ಎಲ್ಲವನ್ನು ಮರೆಯುವೆ

ನನ್ನ ಕನಸು
ನನಸಾಗುವ
ಕಾಲವೆಂದು ಬರುವುದು?

ನನ್ನ ಮನದ
ಬಯಕೆ ತಣಿಸಿ
ಹಿಗ್ಗನೆಂದು ತರುವುದು?೪

ಈ ಕವಿತೆಯಲ್ಲಿ ಮಗುವಿನ ಕಲ್ಪನಾಲೋಕ ಹೇಗಿರುತ್ತದೆ, ಮಕ್ಕಳು ಕಾಣುವ ಕನಸಿನ ಬಗೆ ಎಂಥದ್ದು ಎಂಬುದರ ಸಣ್ಣ ವಿವರವು ಸಿಕ್ಕಂತಾಗಿದೆ. ಚಿಕ್ಕವಯಸ್ಸಿನಲ್ಲಿಯೇ ಗಗನಯಾನದ, ಚಂದ್ರಯಾನದ ಕನಸು ಕಂಡಿರುವುದು ಮಗುವಿನ ಮಹತ್ವಕಾಂಕ್ಷೆಗೆ ಹಿಡಿದ ಕನ್ನಡಿಯಾಗಿದೆ. ಮಗುವಿನಲ್ಲಿ ಮಹತ್ವಕಾಂಕ್ಷೆ ಇದ್ದರೆ ಕಾರು ತೆಗೆದುಕೊಳ್ಳಬೇಕೆಂದರೆ ಅದು ಕೊನೆಗೆ ಸಾಧ್ಯವಾಗದಿದ್ದರೆ ದ್ವಿಚಕ್ರ ವಾಹನವನ್ನಾದರೂ ತೆಗೆದುಕೊಳ್ಳಬಲ್ಲದು. ದ್ವಿಚಕ್ರ ವಾಹನದಲ್ಲಿಯೇ ನನಗೆ ಸುಖವಿದೆಯೆಂದು ಭಾವಿಸಿ ತಟಸ್ಥವಾದರೆ ಮನುಷ್ಯನ ಉದ್ಧಾರ ಖಂಡಿತ ಸಾಧ್ಯವಿಲ್ಲ. ಹಾಗಾಗಿಯೇ ಮಹತ್ವಕಾಂಕ್ಷೆ ಮಾನವ ಬದಕಿನಲ್ಲಿ ಬಹಳ ಮುಖ್ಯವಾದ ಪಾತ್ರ ವಹಿಸುತ್ತದೆ. ಈ ಕವಿಯ ಮಹತ್ವಕಾಂಕ್ಷೆ ಮಕ್ಕಳಿಗೆಲ್ಲ ಮಾದರಿಯಾಗಬೇಕಿದೆ.

ಸಹಜವಾಗಿ ಮಕ್ಕಳು ತುಂಟತನ, ಮೋಜು-ಮಸ್ತಿ, ಕಲ್ಪನೆಗಳಲ್ಲಿ ಮುಳುಗಿರುತ್ತಾರಾದರೂ ವರ್ತಮಾನ ಘಟನೆಗಳಿಗೆ ಅವರು ಸ್ಪಂದಿಸುವ ರೀತಿ ಎಂಥದ್ದು ಎಂಬುದನ್ನು 'ಬೇಸಿಗೆ' ಕವಿತೆಯಿಂದ ತಿಳಿಯಬಹುದು.

**ಬೇಸಿಗೆ**

ಬೇಸಿಗೆ ರಜೆಯಲಿ
ಅಪ್ಪನ ಜತೆ ನಾ
ಹಳ್ಳಿಗೆ ಹೋಗುವೆನು

ಬೆವರನು ಸುರಿಸುವ
ರೈತರ ಜತೆಯಲಿ
ನಾನೂ ದುಡಿಯುವೆನು

ಮುಗಿಲನೆ ಮುಟ್ಟುವ
ಎತ್ತರ ದನಿಯಲಿ
ಹಾಡನು ಹೇಳುವೆನು

ಜಗದಲಿ ನಡೆದಿಹ
ಕೌತುಕ ವಿಷಯವ
ಅವರಿಗೆ ತಿಳಿಸುವೆನು

ತೋಟದಿ ಬೆಳೆದಿಹ
ಬಗೆ ಬಗೆ ಹಣ್ಣಿನ
ಸವಿಯನು ಸವಿಯುವೆನು

ಹಚ್ಚನೆ ಹಸುರಿನ
ಸುಂದರ ಸೃಷ್ಟಿಯ
ಸೊಬಗನು ಕಾಣುವೆನು"

ಈ ಕವಿತೆಯಲ್ಲಿ ಬರುವ 'ಬೆವರನು ಸುರಿಯುವ ರೈತರ ಜೊತೆಯಲ್ಲಿ ನಾನೂ ದುಡಿಯುವೆನು' ಎಂಬ ಸಾಲು ಮಗು ರೈತರ ಕೃಷಿ ಸಂಸ್ಕೃತಿಯನ್ನು ಗೌರವಿಸುವುದರ ಸಂಕೇತವಾಗಿವೆ. ಸಾಮಾನ್ಯವಾಗಿ ರೈತರು ಹೊಲಗದ್ದೆಗಳಲ್ಲಿ ಕೆಲಸಗಳನ್ನು ಮಾಡುವಾಗ ಜೊತೆಯಲ್ಲಿಯೇ ಹಾಡುಗಳನ್ನು ಹೇಳುವ ಪರಿಪಾಠವು ಉಂಟು. ಬಹುಶಃ ಅದನ್ನು ಸೂಕ್ಷ್ಮವಾಗಿ ಗ್ರಹಿಸಿದ ಮಗು ಅದರ ಯಥಾವತ್ತ್ ಭಾವವನ್ನು ತನ್ನ ಕವಿತೆಯಲ್ಲಿ ಚಿತ್ರಿಸಿದೆ.

ಮಗು ತನಗೆ ಪ್ರಿಯವಾಗುವ ಸಂಗತಿಗಳಲ್ಲಿ ಹೇಗೆ ಕಳೆದು ಹೋಗುತ್ತದೆಯೋ ಹಾಗೆಯೇ ತನಗೆ ಅಪ್ರಿಯವಾದುದರ ಕುರಿತು ಸದಾ ಎಚ್ಚರವಾಗಿಯೇ ಇರುತ್ತದೆ. ಅದನ್ನು ನಿರಂತರವಾಗಿ ತಿರಸ್ಕಾರದ ದೃಷ್ಟಿಯಿಂದಲೇ ನೋಡುತ್ತಿರುತ್ತದೆ. ಎಲ್ಲವನ್ನೂ, ಎಲ್ಲರನ್ನೂ ನಂಬಬಾರದು, ನಾವು ಕೆಲವು ಸನ್ನಿವೇಶಗಳಲ್ಲಿ ನಮ್ಮ ಜಾಣತನದ ಮೂಲಕ ಎಚ್ಚವಹಿಸಬೇಕು ಎಂಬ ಎಚ್ಚರದ ಪ್ರಜ್ಞೆಯೊಂದು 'ಪೆದ್ದ ಕೋಳಿಮರಿ' ಎಂಬ ಕವಿತೆಯಲ್ಲಿ ವ್ಯಕ್ತವಾಗಿದೆ.

### ಪೆದ್ದ ಕೋಳಿಮರಿ

ಒಮ್ಮೆ ಒಂದು ಕೋಳಿ ಮರಿಯು
ಅಡವಿಯಲ್ಲಿ ತಿರುಗುವಾಗ
ದಣಿದು ಬಂದು ಮರದ ಕೆಳಗೆ
ನಿಂತುಕೊಂಡಿತು
ಅಷ್ಟರಲ್ಲಿ ಗಾಳಿ ಬೀಸಿ
ಕೋಳಿ ಮರಿಯ ತಲೆಯ ಮೇಲೆ
ಮರದ ಎಲೆಯು ರಪ್ಪನೆಂದು
ಬಿದ್ದು ಬಿಟ್ಟಿತು

ಪೆದ್ದ ಕೋಳಿ ಅಂಜಿಕೊಂಡು
ಮುಗಿಲು ಹರಿದು ಬಿದ್ದಿತೆಂದು
ಅರಸನಲ್ಲಿ ಸುದ್ದಿಯನ್ನು
ತಿಳಿಸಲೋಡಿತು

ಓಡುವಾಗ ದಾರಿಯಲ್ಲಿ
ಠಕ್ಕ ನರಿಯು ಗಂಟುಬಿದ್ದು
"ಎಲ್ಲಿ ಹೊರಟೆ, ಯಾಕೆ ಓಟ?"
ಎಂದು ಕೇಳಿತು

ಮುಗಿಲು ತನ್ನ ತಲೆಯ ಮೇಲೆ
ಹರಿದು ಬಿದ್ದಿತೆಂಬ ವಿಷಯ
ಅರಸನಲ್ಲಿ ಬೇಗ ಹೇಳಿ
ಬಿಡುವೆನೆಂದಿತು

"ಅರಸನೆಲ್ಲಿ ಇರುವನೆಂದು
ಓಡಿ ಹೋಗುತಿರುವೆ ಪೆದ್ದೆ
ದಾರಿ ತೋರಿ ಕೊಡುವೆ" ಎಂದು
ನರಿಯು ಕರೆಯಿತು

ಠಕ್ಕ ನರಿಯ ಮಾತು ನಂಬಿ
ಹಿಂದೆ ಬಿದ್ದ ಪೆದ್ದ ಕೋಳಿ
ಮೋಸ ಹೋಗಿ ತನ್ನ ಜೀವ
ಕಳೆದುಕೊಂಡಿತು

ಎಚ್ಚರ ತಪ್ಪಿದರೆ ಆಗುವ ಅನಾಹುತಗಳೇನು ಎಂಬುದನ್ನು ನರಿ ಮತ್ತು ಕೋಳಿಮರಿಯನ್ನು ಸಂಕೇತವಾಗಿಟ್ಟುಕೊಂಡು ತುಂಬಾ ಚೆನ್ನಾಗಿ ಚಿತ್ರಿಸಿದ್ದಾರೆ.

ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲೂಕಿನ ಮುರುವ ಗ್ರಾಮದ ಮಾಣಿಲ ಅನುದಾನಿತ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ೫ನೇ ತರಗತಿ ಓದುತ್ತಿರುವ ಕುಮಾರಿ ಅಶ್ವಿತಾ ಅವರು ತಮ್ಮ ಚಿಕ್ಕ ವಯಸ್ಸಿನಲ್ಲಿಯೇ ಕಾವ್ಯ ಕೃಷಿಯ ಕಡೆಗೆ ಮನಸ್ಸು ಮಾಡಿರುವುದು ಹೆಮ್ಮೆಪಡಬೇಕಾದ ಸಂಗತಿಯೇ ಸರಿ. ಈ ನಿಮಿತ್ತ ಆಕೆ 'ಬಣ್ಣದ ಚಿಟ್ಟೆ' ಎಂಬ ಸ್ವರಚಿತ ಕವನ ಸಂಕಲನ ಹೊರಬರಲು ಕಾರಣವಾಗಿದ್ದಾಳೆ. ೨೭ ಕವಿತೆಗಳು ಈ ಸಂಕಲನದಲ್ಲಿದ್ದು, ದೈವಭಕ್ತಿಗೆ ಸಂಬಂಧಿಸಿದ ನಾಡು-ನುಡಿಯನ್ನು ಪ್ರೀತಿಸುವ, ಬಾಂಧವ್ಯದ ನೆಲೆಯ ಅಕ್ಕರೆಯ ಪದ್ಯಗಳು ಇಲ್ಲಿ ಸ್ಥಾನ ಪಡೆದಿವೆ.

## ತಂಗಿ

ನನ್ನ ಪುಟ್ಟ ತಂಗಿ ಚಂದ
ಮೆಲ್ಲ ಮೆಲ್ಲ ಬರುವಳು
ನನ್ನ ನೋಡಿ ಓಡಿ ಹೋಗಿ
ಚೆಂಡನೊಂದು ತರುವಳು

ಆಡಲಿಕ್ಕೆ ಬಾರೆ ಅಕ್ಕ
ಎಂದು ನನ್ನ ಕರೆವಳು
ನನ್ನ ಜತೆಗೆ ಆಡಿ ಹಾಡಿ
ಕೇಕೆ ಹಾಕಿ ನಗುವಳು

ಅಮ್ಮ ಅವಳ ಕರೆದ ವೇಳೆ
ಬೇಗ ಒಳಗೆ ನಡೆವಳು
ಒಳಗಿನಿಂದ ನನಗೆ ಕೂಡ
ತಿಂಡಿಯನ್ನು ತರುವಳು

ಮತ್ತೆ ನಾವು ಅಂಗಳಕ್ಕೆ
ಮರಳಿ ಓಡಿ ಬಂದೆವು
ಅಮ್ಮ ಕೊಟ್ಟ ತಿಂಡಿಯನ್ನು
ಹಂಚಿಕೊಂಡು ತಿಂದೆವು.[೭]

ಮಗು ತನಗೆ ಪರಿಚಿತವೆನಿಸಿದ ಕೌಟುಂಬಿಕ ಪರಿಸರದ ಕೆಲ ಸಂಗತಿಗಳನ್ನು ತನ್ನ ಕಾವ್ಯದ ವಸ್ತುವಿಷಯವನ್ನಾಗಿ ಸ್ವೀಕರಿಸಿದೆ.

ತನ್ನ ಬಳಕೆಯ ವಸ್ತುಗಳ ಮೇಲೂ ಮಗು ಹೇಗೆ ಪ್ರೀತಿಯನ್ನು ಹೊಂದಿರುತ್ತದೆ ಎಂಬುದಕ್ಕೆ ಕೊಡೆ ಪದ್ಯ ಸಾಕ್ಷಿಯಾಗಿದೆ.

## ಕೊಡೆ

ನನ್ನಯ ಬಣ್ಣ ಬಣ್ಣ ಕೊಡೆ
ಮಳೆಗೆ ಮಲ್ಲಿಗೆಯಂತೆ ಅರಳುವ ಕೊಡೆ
ಮಳೆ ನಿಂತಾಗ ಮೊಗ್ಗಿನಂತೆ ಮುದುಡುವ ಕೊಡೆ

ಚೀಲದಲ್ಲಿ ಅಡಗುವ ಕೊಡೆ
ನನ್ನ ಪ್ರೀತಿಯ ಬಣ್ಣದ ಕೊಡೆ[೮]

ಮಕ್ಕಳಿಗೆ ಪ್ರಕೃತಿ ನೀಡುವ ಖುಷಿ ಅನನ್ಯವಾದುದು. ಅಲ್ಲಿ ಮೂಡುವ ಕಾಮನಬಿಲ್ಲು, ಉದಯಿಸುವ ಸೂರ್ಯ, ಇಬ್ಬನಿ ಹನಿ, ಹರಿಯುವ ನದಿ ಮಕ್ಕಳ ಚೈತನ್ಯಕ್ಕೆ ಹೊಸದೊಂದು ಹುರುಪು ನೀಡುವಂತದ್ದು. ಅನನ್ಯ ಬಳಂತಿಮೊಗರು ಅವರ ಅಭಿವ್ಯಕ್ತಿಯನ್ನು ಇಲ್ಲಿ ಕಾಣಬಹುದು.

## ಪ್ರಕೃತಿ ಚಿತ್ರ

ಪ್ರಕೃತಿಯೆಂಬುದು ದೇವರ ಕೊಡುಗೆ
ಹಸಿರೇ ಇದರ ಚೆಲುವಿನ ತೊಡುಗೆ
ಸುಂದರ ದೃಶ್ಯವ ನೋಡುತ ಕುಣಿಯುವ
ಸಂಭ್ರಮ ನಮಗೆ ದೊರಕಿಹುದು
ತುಂತುರು ಹನಿಗಳು ಬಿಸಿಲೂ ಕೂಡಿದ

ಕಾಮನಬಿಲ್ಲು ಮೂಡಿಹುದು
ಏಳು ಬಣ್ಣಗಳು ಒಟ್ಟಿಗೆ ಸೇರುತ
ತಮ್ಮಯ ಐಕ್ಯವ ಸಾರುವವು
ಸೂರ್ಯನು ಮುಳುಗುವ ಸುಂದರ ದೃಶ್ಯವು
ನಮ್ಮಯ ಕಣ್ಮನ ಸೆಳೆಯುವುದು
ಹರಿಯುವ ನದಿಯ ಕಲಕಲನಾದವು
ಮನಸಿಗೆ ಸಂತಸ ನೀಡುವುದು.'

ತನ್ನ ಸುತ್ತಲೂ ತನಗಾಗುವ ಪ್ರಸಂಗದ ಅನುಭವವನ್ನೇ ಕವಿತೆಯಾಗಿಸುವ ನೈಪುಣ್ಯತೆ ೭ನೇ ತರಗತಿ ಓದುತ್ತಿರುವ ಅನನ್ಯ ಕವಯಿತ್ರಿಯವರದು.

## ಔತಣದ ಖಾರ

ಗೆಳತಿಯು ಕರೆದಳು ಔತಣಕೆ
ಹೋದೆನು ನಾನು ಹಾಸನಕೆ
ನಡೆದೆನು ಆಕೆಯ ನಿಲಯಕ್ಕೆ
ರಾಗಿ ಮುದ್ದೆಯ ಊಟಕ್ಕೆ

ತಿನ್ನಲು ಹೊಸಪರಿಯಾಗುತಲಿತ್ತು
ಬಾಯಲಿ ನೀರು ಸುರಿದಿತ್ತು
ಮುದ್ದೆಯ ತುಂಡನು ಸಾರಲಿ ಮುಳುಗಿಸಿ
ತಿನ್ನುವ ಪರಿಯಲಿ ಮೋಜಿತ್ತು

ಮುದ್ದೆಯ ಚಕಚಕ ಜಗಿದೆನು ಜೋರು
ಹೋಗದು ಒಳಗಡೆ ಮುದ್ದೆಯ ಚೂರು
ಆಗಲು ಕಿರಿಕಿರಿಯಿಂದಲಿ ಪಾರು
ಕುಡಿದೇ ಬಿಟ್ಟೆನು ಸೊಪ್ಪಿನ ಸಾರು

ಖಾರದಿ ಸುರಿಯಿತು ಕಣ್ಣಲಿ ನೀರು
ಬಾಯಲಿ ಅಂಟಿತು ಮುದ್ದೆಯ ಚೂರು

ಚೆಂಬಿನ ತುಂಬಾ ಕೊಟ್ಟರು ನೀರು
ಗಟಗಟ ಕುಡಿದೆನು ಉಳಿಸದೆ ಚೂರೂ

ತಡೆಯದೆ ನಾ ತಲೆ ತಿರುಗುವಿಕೆ
ಬೈ ಬೈ ಹೇಳಿದೆ ಹಾಸನಕೆ
ಹೋಗೆನು ಇಂತಹ ಊಟಕ್ಕೆ
ತಿನ್ನೆನು ಮುದ್ದೆಯ ಜನ್ಮಕ್ಕೆ[೧೦]

ಗೆಳತಿಯ ಆಹ್ವಾನಕ್ಕೆ ಮಣಿದು ಹಾಸನಕ್ಕೆ ನಡೆದಾಗ, ಗೆಳತಿ ಅಲ್ಲಿ ಊಟಕ್ಕೆ ಮುದ್ದೆ ಸಾರನ್ನು ಬಡಿಸಿದಾಗ ಮುದ್ದೆಯನ್ನು ಸಾರಲ್ಲಿ ಮುಳುಗು ಹಾಕುವ ಕ್ರಿಯೆಯಲ್ಲೂ ಮೋಜನ್ನು ಕಾಣುವ ಪುಟ್ಟ ಕವಯಿತ್ರಿಗೆ ಮುದ್ದೆ ಒಳಗಿಳಿಯದೇ ಇದ್ದಾಗ ಸಾರನ್ನು ಕುಡಿದು ಆಗ ಖಾರದಿಂದ ನರಳುತ್ತಾಳೆ. ಅಂದರೆ ಕವಿತೆಯ ವಸ್ತು ಇಂಥದ್ದೇ ಆಗಿರಬೇಕು ಎಂಬ ನಿಯಮ ಜಗದೊಳಗಿಲ್ಲ. ಅದು ಎಲ್ಲಿ ಯಾವ ಸಂದರ್ಭದಲ್ಲಿಯೂ ಏನನ್ನೂ ಬೇಕಾದರೂ ತಡಕಾಡಿ ತನ್ನ ಕವಿತೆಯ ವಸ್ತುವನ್ನಾಗಿ ಸ್ವೀಕರಿಸಿ ಬಿಡಬಹುದು ಎಂಬುದಕ್ಕೆ ಈ ಕವಿತೆ ಸಾಕ್ಷಿಯಾಗಿ ನಿಲ್ಲುತ್ತದೆ.

ಸಮಯಕ್ಕೆ ಬೆಲೆ ಕೊಡದೇ ಅಕ್ಷರ ಕಲಿಯುವ ಕುರಿತು ಅಸಡ್ಡೆ ತೋರಿದರೆ ಅದರ ಪರಿಣಾಮ ಏನಾಗಿರುತ್ತದೆ ಎಂಬುದನ್ನು ೫ನೇ ತರಗತಿಯಲ್ಲಿ ಓದುತ್ತಿರುವ ಪುಟ್ಟ ಕವಯಿತ್ರಿ ಶ್ರೀಚೈತ್ರ ಡಿ. ತನ್ನ ಅನುಭವದ ಗ್ರಹಿಕೆಯ ಹಿನ್ನೆಲೆಯಲ್ಲಿ ಕೇವಲ ನಾಲ್ಕು ಸಾಲುಗಳಲ್ಲಿ ಪ್ರಾಸಬದ್ಧವಾಗಿ ಹಿಡಿದಿಟ್ಟಿರುವುದು ಹೊಸ ತಲೆಮಾರಿನ ಮಕ್ಕಳು ಹೇಗೆ ಕಾವ್ಯದ ಜೊತೆಗೆ ಅನುಸಂಧಾನ ಮಾಡುತ್ತಾರೆ ಎಂಬುದನ್ನು ಸೂಚಿಸಿದೆ.

**ಲೇಟು-ಲೇಟು-ಲೇಟು**

ಲೇಟು ಲೇಟು ಲೇಟು
ಯಾವಾಗಲು ಲೇಟು
ಬರೆಯಲಿಲ್ಲ ಸ್ಲೇಟು
ಬಿತ್ತು ನನಗೆ ಏಟು[೧೧]

ಸಾಂಪ್ರದಾಯಿಕ ವಾತಾವರಣದಲ್ಲಿ ಬೆಳೆದ ಕವಯಿತ್ರಿ ತನ್ನ 'ಚೈತ್ರದ ಚಿಲಿಪಿಲಿ' ಸಂಕಲನದ ಪ್ರಾರಂಭದಲ್ಲಿಯೇ ಗಣಪತಿಯನ್ನು ಸ್ಮರಿಸುವ 'ಗಣಪ' ಎಂಬ ಕವಿತೆಯನ್ನು ರಚಿಸಿದ್ದಾಳೆ.

**ಗಣಪ**

ನಮ್ಮ ಮುದ್ದಿನ ಗಣಪ
ಆನೆ ತಲೆಯ ಗಣಪ
ಉದ್ದ ಸೊಂಡಿಲ ಗಣಪ

ಡೊಳ್ಳು ಹೊಟ್ಟೆಯ ಗಣಪ
ದೇವನವನು ಗಣಪ
ಶಿವ ಪಾರ್ವತಿ ಪುತ್ರ ಗಣಪ
ನಮ್ಮ ಪ್ರೀತಿಯ ಗಣಪ[೧೨]

ಗಣಪ ಮಗುವಿಗೆ ದೈವವಾಗಿದ್ದರೂ ಗಣಪನ ಆಕೃತಿ ಅವಳಲ್ಲಿ ಗಣಪನ ಕುರಿತಾದ ಕುತೂಹಲವನ್ನು ಇಮ್ಮಡಿಗೊಳಿಸಿದೆ. ಆ ಕುತೂಹಲವೇ ಕಾವ್ಯಕ್ಕೆ ಪ್ರೇರಣೆಯಾಗಿದೆ.

ಕನ್ನಡ ಮಕ್ಕಳ ಕಾವ್ಯದಲ್ಲಿ ಮಾಮ ಎಂಬ ಬಂಧುವಿಗೆ ವಿಶೇಷ ಸ್ಥಾನವಿದೆ. ಜನಪದ ಪರಂಪರೆಯಲ್ಲೂ ಮಾವನ ಕುರಿತಾದ ಹಾಡುಗಳಿವೆ. ಹೊಸ ತಲೆಮಾರಿನಲ್ಲಿಯೂ ಇದು ಹಾಗೆಯೇ ಮುಂದುವರಿದಿದೆ.

**ಮಾವ**

ಮಾವ ಕಾರಲಿ ಬಂದ
ಮನೆಯ ಎದುರುನಿಂದ
ಹೊಸ ಅಂಗಿ ತಂದ
ಆಯಿತು ನನಗಾನಂದ

ಬಿಡಿಸಿದೆ ಖುಷಿಯಿಂದ
ನೋಡಲೆಷ್ಟು ಚಂದ
ಅಂಗಿ ತೊಟ್ಟು ಕುಣಿದೆ ನಾನು
ಭಾರೀ ಸಂತಸದಿಂದ[೧೩]

ಇದು ೭ನೇ ತರಗತಿ ವಿದ್ಯಾರ್ಥಿನಿ ಸಹನ .ಡಿ ಅವರ ರಚನೆಯಾಗಿದ್ದು, ಅವರು 'ಗಾಳಿಪಟ' ಎಂಬ ಕವನ ಸಂಕಲನವನ್ನು ಪ್ರಕಟಿಸಿದ್ದಾರೆ.

ಸಾಕು ಪ್ರಾಣಿಗಳು ಮಕ್ಕಳಿಗೆ ಮನೆಯ ಸದಸ್ಯರಂತೆ ಕಂಡರೆ ಅಚ್ಚರಿಯಿಲ್ಲ. ಪ್ರಾಣಿಗಳ ಜೊತೆಗೆ ಇರುವ ಮಕ್ಕಳ ಭಾವನಾತ್ಮಕ ಸಂಬಂಧ ಅವಿನಾಭಾವವಾದುದು. ಹಸುವಿನ ಮೇಲಿನ ಪ್ರೀತಿಯೇ ಕವಿತೆಯೊಂದಕ್ಕೆ ಪ್ರೇರಣೆಯಾಗಿದೆ. ಈ ಕವಿತೆಯು ೪ನೇ ತರಗತಿ ವಿದ್ಯಾರ್ಥಿನಿ ಪುಣ್ಯಾದೇಲಂತಮಜಲು ಎಂಬ ಪುಟ್ಟ ಕವಯಿತ್ರಿಯ ಪುಟ್ಟ ರಚನೆಯಾಗಿದೆ. ಇಲ್ಲಿ ಪ್ರಾಸ ಹಾಗೂ ಗೇಯತೆಯ ಗುಣ ಆಕರ್ಷಕ ಶಕ್ತಿಯನ್ನು ಹೊಂದಿದೆ.

**ದನ**

ನಮ್ಮ ಮನೆಯ ಕಪ್ಪು ದನ
ಹಾಲು ತುಂಬ ಕೊಡುವ ದನ

ಹುಲ್ಲು ಹಿಂಡಿ
ತಿನುವ ದನ
ಎರಡು ಕೋಡು
ಇರುವ ದನ[೧೪]

ಒಟ್ಟಿನಲ್ಲಿ ಕನ್ನಡದಲ್ಲಿ ಮಕ್ಕಳ ಕಾವ್ಯ ಪರಿಕಲ್ಪನೆ ಮತ್ತು ಸ್ವರೂಪ ಎಂಬ ಈ ಅಧ್ಯಾಯವು ಮುಖ್ಯವಾಗಿ ಎರಡು ನೆಲೆಯಲ್ಲಿ ಕನ್ನಡ ಮಕ್ಕಳ ಕಾವ್ಯ ಪರಂಪರೆಯನ್ನು ಗ್ರಹಿಸುವ ಉದ್ದೇಶ ಹೊಂದಿದ್ದು ಈ ಅಧ್ಯಾಯದಿಂದ ನಮಗೆ ತಿಳಿದುಬರುವ ಸಂಗತಿಯೇನೆಂದರೆ ಹಿರಿಯರು ರಚಿಸಿದ ಮಕ್ಕಳ ಕಾವ್ಯ ಹೆಚ್ಚರದ ಕಣ್ಣಿನಿಂದ, ವಿಮರ್ಶೆಯ ಕಣ್ಣಿನಿಂದ ಗ್ರಹಿಸಿರುವುದಾದರೆ, ಮಕ್ಕಳ ರಚಿಸಿದ ಮಕ್ಕಳ ಕಾವ್ಯ ಸಮಾಜದ ಅಸಮಾನತೆ, ವ್ಯವಸ್ಥೆಯ ಲೋಪದೋಷಗಳ ಕಡೆ ತಮ್ಮ ದೃಷ್ಟಿ ಹರಿಸದೇ(ಅದಕ್ಕೆ ಅವರ ವಯೋಮಿತಿಯ ಕಾರಣವೂ ಇದೆ, ಇದು ತಪ್ಪು ಎಂದಲ್ಲ) ಎಲ್ಲವನ್ನೂ ಪ್ರೀತಿಯಿಂದಲೇ ನೋಡುವ ಗುಣ ಮಕ್ಕಳು ರಚಿಸಿದ ಮಕ್ಕಳ ಕಾವ್ಯದಲ್ಲಿ ಎದ್ದು ತೋರುತ್ತದೆ. ಉದಾಹರಣೆಗೆ ಮಕ್ಕಳ ಕವಯಿತ್ರಿಯ 'ನಮ್ಮ ದೇಶ' ಕವಿತೆಯಲ್ಲಿ 'ರಾಜಾಧಿರಾಜರು ಆಳಿದ ಪುಣ್ಯಭೂಮಿ ಭಾರತ'[೧೫] ಎಂಬ ಸಾಲು ಮಕ್ಕಳು ತಿಳುವಳಿಕೆಯ ಕೊರತೆಯಿಂದ ಎಲ್ಲವನ್ನೂ ಅಪ್ಪಿಕೊಳ್ಳುವ ಗುಣದಿಂದಲೇ ನೋಡುತ್ತಾರೆ ಎಂಬುದಕ್ಕೆ ಇದು ಸಾಕ್ಷಿಯಾಗಿದೆ. ಆದರೆ ಹಿರಿಯರು ರಚಿಸಿದ ಮಕ್ಕಳ ಕಾವ್ಯದಲ್ಲಿ ಈ ಸಾಲುಗಳು ಬರಲು ಸಾಧ್ಯವಿಲ್ಲ. ಕಾರಣ ಅರಸೊತ್ತಿಗೆಯ ಕ್ರೌರ್ಯವನ್ನು ಇತಿಹಾಸದಿಂದ ತಿಳಿದಿರುತ್ತಾರೆ. ಮಕ್ಕಳ ಕಾವ್ಯ ರಚಿಸುವ ಪುಟಾಣಿ ಕವಿಗಳಿಗೆ ಇತಿಹಾಸ ಎಂಬುದು ರಂಜನೆಯ ಕಥೆಯಾದರೆ ಹಿರಿಯರಿಗೆ ಅದು ಮರೆಯಲಾಗದ ಕಹಿ ಅನುಭವವೂ ಆಗಿರುವ ಸಾಧ್ಯತೆಗಳು ಇವೆ. ಈ ಬಗೆಯ ವ್ಯಾತ್ಯಾಸಗಳಿಗೆ ಪುಟಾಣಿ ಕವಿಗಳಿಗೂ ಮತ್ತು ಹಿರಿಯ ಕವಿಗಳಿಗೂ ನಡುವೆ ಇರಬಹುದಾದ ವಯೋಮಿತಿಯ ಅಂತರವು ಅದಕ್ಕೆ ಮುಖ್ಯ ಕಾರಣವಾಗಿರುತ್ತದೆ. ಕಾರಣ ಮಗು ಬೆಳೆದಂತೆಲ್ಲಾ ಮಗುವಿನ ಬುದ್ಧಿಯೂ ಬೆಳೆಯುತ್ತಾ, ಬಲಿಯುತ್ತಾ ಹೋಗುತ್ತದೆಂಬ ಸತ್ಯವನ್ನು ನಾವು ಕಡೆಗಣಿಸುವಂತಿಲ್ಲ(ಮಗು ಬೆಳೆದರೂ ಬುದ್ಧಿ ಬೆಳೆಯದ, ಪಕ್ವವಾಗದ ಕೆಲವು ಅಪವಾದಗಳೂ ಇದ್ದಿರಬಹುದು).

ಹಾಗಾಗಿ ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಹಿರಿಯರು ರಚಿಸಿದ ಮಕ್ಕಳ ಕಾವ್ಯ ಮತ್ತು ಮಕ್ಕಳ ರಚಿಸಿದ ಮಕ್ಕಳ ಕಾವ್ಯ ಪರಿಕಲ್ಪನೆಯಲ್ಲಿ ಏನೇ ಭಿನ್ನತೆಗಳಿದ್ದರೂ ಅಂತಿಮವಾಗಿ ಹಿರಿಯರಂತೆ ಕನ್ನಡದ ಮಕ್ಕಳು ಸಹ ಕಾವ್ಯವನ್ನು ಕಟ್ಟುವ ಕ್ರಿಯೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಪ್ರಕ್ರಿಯೆಯೇ ಒಳ್ಳೆಯ ಬೆಳವಣಿಗೆ ಎಂದು ಪರಿಭಾವಿಸಬೇಕಿದೆ.

**ಕೊನೆ ಟಿಪ್ಪಣಿಗಳು**

೧. ಮಗ್ಗಿ ಮಾಮನ ಹಾಡುಗಳು (ಲೇ), ಎ.ಟಿ. ಅಂಗಡಿ, ಪುಟ ೪.

೨. ಮಕ್ಕಳ ರಾಮಾಯಣ (ಲೇ) ವಿದ್ವಾನ್ ಮಧುರ ಕಾನನ ಗೋಪಾಲ ಕೃಷ್ಣಭಟ್, ಪುಟ ೧೮.

೩. ನನ್ನ ಕನಸು; ಲೇ: ವಿದ್ಯಾಸಾಗರ ಕುಕ್ಕುಂದಾ; ಪುಟ ೧೮.

೪. ಅದೇ; ಪುಟ ೧.

೫. ಅದೇ; ಪುಟ ೧೨.

೬. ಅದೇ; ಪುಟ ೧೮.

೭. ಬಣ್ಣದ ಚಿಟ್ಟೆ; ಲೇ: ಅಶ್ವಿತಾ ಎಸ್.; ಪುಟ ೯.

೮. ಅದೇ; ಪುಟ ೨೧.

೯. ಹಾಡುಹಕ್ಕಿ; ಲೇ: ಅನನ್ಯ ಬಳಂತಿಮೊಗರು; ಪುಟ ೬

೧೦. ಅದೇ; ಪುಟ ೭.

೧೧. ಚೈತ್ರದ ಚಿಲಿಪಿಲಿ; ಲೇ: ಶ್ರೀಚೈತ್ರ ಡಿ.; ಪುಟ ೮.

೧೨. ಅದೇ; ಪುಟ ೧.

೧೩. ಗಾಳಿಪಟ; ಲೇ: ಸಹನ ಡಿ.; ಪುಟ ೭.

೧೪. ಅರಳಿದ ತಾವರೆ; ಲೇ: ಪುಣ್ಯಾದೇಲಂತಮಜಲು; ಪುಟ ೮.

೧೫. ಬಣ್ಣದ ಚಿಟ್ಟೆ; ಲೇ: ಅಶ್ವಿತಾ ಎಸ್.; ಪುಟ ೧೨.

•••

ಅಧ್ಯಾಯ : ನಾಲ್ಕು

# ಮಕ್ಕಳ ಕಾವ್ಯದಲ್ಲಿ ಭಾಷೆ ಒಂದು ವಿಶ್ಲೇಷಣೆ

ಮನುಷ್ಯನ ಅಸ್ತಿತ್ವವನ್ನು ಉಳಿದೆಲ್ಲಾ ಪ್ರಾಣಿ ವರ್ಗಕ್ಕೆ ಭಿನ್ನವಾಗಿ ರೂಪಿಸಿರುವುದೇ ಮನುಷ್ಯನಲ್ಲಿರುವ ಅಪರಿಮಿತವಾದ ಈ ಭಾಷಿಕ ಸಾಮರ್ಥ್ಯ. ಸಾಮಾನ್ಯ ಸಾಹಿತ್ಯ ಪ್ರಕಾರಕ್ಕಿಂತ ಮಕ್ಕಳ ಸಾಹಿತ್ಯ ಇಂದು ಭಿನ್ನವಾಗಿರುವುದಕ್ಕೆ, ಪ್ರತ್ಯೇಕವಾಗಿ ತೋರುವುದಕ್ಕೆ ಬೇರೆ ಬೇರೆ ಅಂಶಗಳು ಕಾರಣವಾಗಿದ್ದರೂ ಅದರಲ್ಲಿ ಪ್ರಮುಖವಾದ ಕಾರಣ ಮಾತ್ರ ಮಕ್ಕಳ ಸಾಹಿತ್ಯಕ್ಕೆ ಅದರಲ್ಲೂ ಮಕ್ಕಳ ಕಾವ್ಯಕ್ಕೆ ಒದಗಿಬಂದಿರುವ ವಿಶಿಷ್ಟವಾದ ಭಾಷಾ ಬಳಕೆಯಿಂದಾಗಿಯೇ ಎಂಬುದು ಮಹತ್ವದ್ದಾಗಿದೆ. ಸಾಮಾನ್ಯವಾಗಿ ದೈನಂದಿನ ಜೀವನದಲ್ಲೂ ಹಿರಿಯರ ಭಾಷೆಗಿಂತ ಭಿನ್ನವಾಗಿಯೇ ಮಕ್ಕಳ ಭಾಷೆ ಬಳಕೆಯಾಗುವುದನ್ನು ಗಮನಿಸಬಹುದು. ಅದಕ್ಕೆ ಉದಾಹರಣೆಯಾಗಿ ಈ ಕೆಳಗಿನ ಅಂಶಗಳನ್ನು ನೋಡಬಹುದು.

| ಹಿರಿಯರ ಭಾಷೆ | ಮಕ್ಕಳ ಭಾಷೆ |
|---|---|
| ದೇವರು | ಜೇಜಿ |
| ಊಟ | ಮಮ್ಮು |
| ನಿದ್ದೆ ಮಾಡು | ಪಾಚು ಮಾಡು |
| ನೀರು | ಆಬು, ಬೂವ |
| ಗಾಯ | ಆಯಾ |
| ಮುತ್ತು | ಉಮ್ಮಾ, ಉಪ್ಪಾ |
| ಹೊಡೆ | ಅತ್ತಾ ಮಾಡು |
| ಹಾವು | ಪಾಮು |
| ಆಕಳು | ಅಂಬಾ |
| ನಾಯಿ | ಬೌ ಬೌ |

| | |
|---|---|
| ದೇವ್ವ | ಗೊಗ್ಗಾ |
| ಮೂತ್ರ ವಿಸರ್ಜನೆ | ಸೂಸು |
| ಮಲ ವಿಸರ್ಜನೆ | ಕಕ್ಕಾ |
| ಸ್ನಾನ ಮಾಡು | ಉಶ್ ಮಾಡು |
| ಕಾಫಿ, ಟೀ | ಉಗ್ಗಾ |
| ಚಪಾತಿ, ರೊಟ್ಟಿ | ಅಚ್ಚಿ |
| ಪ್ರಯಾಣಕ್ಕೆ ತೆರಳುವುದು | ಬುರ್ ಹೋಗಾನು |

ಹೀಗೆ ಮಕ್ಕಳೆಂದರೆ ಹಿರಿಯರಿಗಿಂತ ಭೌತಿಕವಾಗಿ, ಬೌದ್ಧಿಕವಾಗಿ, ಸಾಹಿತ್ಯವಾಗಿ, ಸಾಂಸ್ಕೃತಿಕವಾಗಿ ಭಿನ್ನವಾಗಿಯೇ ಇದ್ದಾರೆ. ಮಕ್ಕಳ ಕಾವ್ಯದ ರಚನೆಯಲ್ಲೂ ಸಹ ಭಾಷೆ ಪ್ರಧಾನ ಪಾತ್ರವಹಿಸುತ್ತದೆ. ಈ ಅಧ್ಯಾಯದಲ್ಲಿ ಕೆಲವು ಭಾಷಿಕ ಅಂಶಗಳ ಹಿನ್ನೆಲೆಯಲ್ಲಿ ಇದನ್ನು ಸ್ಪಷ್ಟೀಕರಿಸಬಹುದು.

**೧. ಅನುಕರಣಾ ಪದಗಳ ಬಳಕೆ**

ಭಾಷೆ ದೈವದತ್ತವಾದುದೆಂಬ ನಂಬಿಕೆ ೧೮ನೇ ಶತಮಾನದ ಪೂರ್ವದಲ್ಲಿ ನಮ್ಮಲ್ಲಿ ಅಸ್ತಿತ್ವದಲ್ಲಿತ್ತು. ಆದರೆ ೧೮ನೇ ಶತಮಾನದಲ್ಲಿ ಭಾಷಾವಿಜ್ಞಾನ ಕ್ಷೇತ್ರದಲ್ಲಾದ ಹೊಸ ಹೊಸ ಸಂಶೋಧನೆ, ಅಧ್ಯಯನಗಳಿಂದಾದ ಹೊಸ ಬೆಳವಣಿಗೆಯಿಂದ ಭಾಷೆ ದೈವದತ್ತವಾದುದಲ್ಲ, ಅದು ಅನುಕರಣೆಯಿಂದ ಒಡಮೂಡುವಂತದ್ದು ಎಂಬ ಸತ್ಯವನ್ನು ಜಗತ್ತಿಗೆ ಸಾರಲಾಯಿತು. ಮಕ್ಕಳ ಭಾಷಾ ಕಲಿಕೆಯು ಸಹ ಈ ಬಗೆಯ ಅನುಕರಣಾ ಸಾಮರ್ಥ್ಯದಿಂದಲೇ ಬರುವಂತಹದ್ದು. ಈ ಹಿನ್ನೆಲೆಯಲ್ಲಿ ಮಕ್ಕಳ ಕಾವ್ಯ ರಚನೆಯಲ್ಲಿ ಅನುಕರಣಾ ಪದಗಳು ಮಹತ್ವದ ಪಾತ್ರ ವಹಿಸುತ್ತವೆ.

**ಸಂಗೀತ ಸಭೆ**

ರಂಗನ ಮನೆಯ ಅಂಗಳದಲ್ಲಿ
ಸಂಗೀತದ ಸಭೆ ಕೇಳಿದಿರಾ!

ರಂಗನ ತಂಗಿಗೆ ಇರುವೆಯು ಕಚ್ಚಲು
ತೆಗೆದಳು ರಾಗಾ
'ವ್ಯಾಂ ವ್ಯಾಂ ವ್ಯಾಂ'

ಹಟ್ಟಿಯ ದನವು ಅಲ್ಲಿಗೆ ಬಂದು
ಹಾಡಿತು ಹಾಡು
'ಅಂಬಾ ಅಂಬಾ'

ಅಂಗಳ ನಾಯಿ ತಾನೂ ಬಂದು
ಪದವನು ಹೇಳಿತು
‘ಭೌ ಭೌ ಭೌ’

ಒಳಗಿನ ಬೆಕ್ಕು ಓಡುತ ಬಂದು
ತೆಗೆಯಿತು ರಾಗಾ
‘ವ್ಯಾಂ ವ್ಯಾಂ ವ್ಯಾಂ’

ಆಡುವ ಆಡು ನೋಡುತ ಬಂದು
ಹಾಡಿತು ಹಾಡು
‘ಬೇ ಬೇ ಬೇ’

ಅತ್ತಣ ಹುಂಜ ಇತ್ತಲೆ ಬಂದು
ಕತ್ತೆತ್ತೆಂದಿತು
‘ಕೊ ಕ್ಕೋ ಕ್ಕೋ’

ಮರದಲಿ ಕಾಗೆ ‘ಕಾಕಾ’ ಕೂಗಲು
ಹಕ್ಕಿಗಳೆಲ್ಲಾ
‘ಚಿಲೀ ಪಿಲೀ’

ನೋಡಲು ಕೇಳಲು ರಂಗನ ತಂಗಿಗೆ
ನಗುವೇ ಹೊಮ್ಮಿತು
“ಹ್ಹ ಹ್ಹ ಹ್ಹಾ!”[೧]

ಕವಿ ನವಗಿರಿನಂದರ ಈ ಕವಿತೆಯಲ್ಲಿ ಬರುವ ‘ವ್ಯಾಂ ವ್ಯಾಂ ವ್ಯಾಂ’ ‘ಅಂಬಾ ಅಂಬಾ’, ‘ಭೌ ಭೌ ಭೌ’, ‘ಬೇ ಬೇ ಬೇ’, ‘ಕೊ ಕ್ಕೋ ಕ್ಕೋ’, ‘ಚಿಲೀ ಪಿಲೀ’, “ಹ್ಹ ಹ್ಹ ಹ್ಹಾ’ ಅನುಕರಣಾ ಪದಗಳು ಮಕ್ಕಳಿಗೆ ಒಂದೊಂದು ಪ್ರಾಣಿಗೂ ಇರಬಹುದಾದ ಅಭಿವ್ಯಕ್ತಿಯ ಸಾಮರ್ಥ್ಯವನ್ನು ಪರಿಚಯಿಸುತ್ತವೆ ಹಾಗೂ ಆ ಪ್ರಾಣಿಗಳು ಕಂಡಾಗ ಮಕ್ಕಳು ಸಹ ಅನುಕರಣಾ ಶಬ್ದದಿಂದಲೇ ನಿರ್ದಿಷ್ಟ ಪ್ರಾಣಿಯೊಂದನ್ನು ಗುರುತಿಸುವ, ನೆನಪಿನಲ್ಲಿಟ್ಟುಕೊಳ್ಳುವ, ಕರೆಯುವ ಕೆಲಸವನ್ನು ಮಾಡುತ್ತವೆ. ಹಿರಿಯರು ಸಹ ಮಕ್ಕಳಿಗೆ ನಾಯಿಯನ್ನು ಪರಿಚಯಿಸುವಾಗ ನಾಯಿ ಎಂದು ಹೇಳದೇ ಬದಲಿಗೆ ‘ಭೌ ಭೌ’ ಬಂತು ಎಂದು ಹೇಳುವುದುಂಟು. ಮಕ್ಕಳ ಕಾವ್ಯದಲ್ಲೂ ಇದೇ ಸಂಗತಿ ಅಳವಟ್ಟಿದೆ. ಈ ಬಗೆಯ ಅನುಕರಣಾ ಶಬ್ದಗಳು ೫ ವರ್ಷದಿಂದ ೭ ವರ್ಷಗಳೊಳಗಿನ ಮಕ್ಕಳ ಭಾಷಾ ಕಲಿಕೆಗೆ ಹೆಚ್ಚು ಯೋಗ್ಯವಾಗಿರುತ್ತವೆ.

**೨. ಜೋಡು ನುಡಿಗಳ ಬಳಕೆ**

ಮಕ್ಕಳ ಕಾವ್ಯ ಭಾಷೆಯಲ್ಲಿ ಹೆಚ್ಚಾಗಿ ಅಲ್ಲದಿದ್ದರೂ ಅಲ್ಲಲ್ಲಿ ಜೋಡು ನುಡಿಗಳ ಪದ ಬಳಕೆಯನ್ನು ನಾವು ಗುರುತಿಸಬಹುದು. ಅದಕ್ಕೆ ಉದಾಹರಣೆಯಾಗಿ ಕೆಮ್ಮೂರು ದೊಡ್ಡಣ್ಣ ಶೆಟ್ಟಿಯವರ ಈ ಕವಿತೆ ಗಮನಿಸಬಹುದು.

### ಕೋಟು-ಗೀಟು

ಕೋಟು ಗೀಟು ಹಾಕಿಕೊಂಡು
ಹೇಟು ಬೂಟು ತೊಟ್ಟುಕೊಂಡು
ಬೂಟಿನಿಂದ ಹೊರಟ ತಮ್ಮ
ಡಬ್, ಡಬ್, ಡಬ್.

ಗೆಜ್ಜೆಗಿಜ್ಜೆ ಕಟ್ಟಿಕೊಂಡು
ಹೆಜ್ಜೆ ಹೆಜ್ಜೆ ಇಟ್ಟುಕೊಂಡು
ಅಜ್ಜಿ ಮನೆಗೆ ಹೋದ್ಳು ತಂಗಿ
ಜೈಂ, ಜೈಂ, ಜೈಂ.[೨]

ಹೀಗೆ ಇನ್ನೂ ಮುಂದುವರಿಯುವ ಈ ಕವಿತೆಯ ಶೀರ್ಷಿಕೆಯೇ ಜೋಡುನುಡಿಯಿಂದ ಕೂಡಿರುವಂತದ್ದಾಗಿದೆ. ಈ ಜೋಡುನುಡಿ ಹೆಸರೇ ಹೇಳುವಂತೆ ಜೋಡು ಎಂದರೆ ಎರಡು ನುಡಿಗಳಿಂದ ಕೂಡಿದ್ದು ಎಂದಾಗಿದ್ದು. ಇಲ್ಲಿ ಬಳಕೆಯಾಗುವ ಮೊದಲನೇ ಪದಕ್ಕೆ ಸ್ಪಷ್ಟವಾದ ಅರ್ಥವಿದ್ದರೆ ಅದರ ಹಿಂದೆಯೇ ಒಡಮೂಡುವ ಇನ್ನೊಂದು ನುಡಿಗೆ ಅರ್ಥ ಇರುವುದಿಲ್ಲ. ಒಂದು ಪದ ಇನ್ನೊಂದು ಪದಕ್ಕೆ ಪೂರಕವಾಗಿ ಬಂದಿರುವಂತದ್ದಾಗಿದೆ. ಈ ಬಗೆಯ ಜೋಡುನುಡಿಗಳಿಂದ ಕೂಡಿದ ಮಕ್ಕಳ ಕಾವ್ಯದ ರಚನೆಗಳು ಮಕ್ಕಳ ಕಲಿಕೆಯನ್ನು ಸರಳಗೊಳಿಸುತ್ತವೆ. ಇಲ್ಲಿ ಬಂದಿರುವ 'ಕೋಟು ಗೀಟು', 'ಗೆಜ್ಜೆ ಗಿಜ್ಜೆ' ಪದಗಳು ಜೋಡುನುಡಿಗಳಾಗಿವೆ.

### ೩. ಪ್ರಾಸಬದ್ಧ ಪದಗಳ ರಚನೆ

ಮಕ್ಕಳ ಕಾವ್ಯಕ್ಕಿರುವ ಬೇರೆ ಬೇರೆ ಹೆಸರುಗಳಲ್ಲಿ 'ಶಿಶುಪ್ರಾಸ'ವೂ ಒಂದು. ಈ ಅಂಶ ಮಕ್ಕಳ ಕಾವ್ಯವೆಂದರೆ ಶಿಶುಪ್ರಾಸವೆಂತಲೂ, ಶಿಶುಪ್ರಾಸವೆಂದರೆ ಮಕ್ಕಳಕಾವ್ಯ ಎನ್ನುವಷ್ಟರಮಟ್ಟಿಗೆ ಪ್ರಾಸಗಳು ಮಕ್ಕಳ ಕಾವ್ಯವನ್ನು ಆವರಿಸಿವೆ. ಪ್ರಾಸವನ್ನು ಹೊರತುಪಡಿಸಿ ಮಕ್ಕಳ ಕಾವ್ಯವನ್ನು ನೋಡಲು ಸಾಧ್ಯವೇ ಇಲ್ಲ ಎನ್ನುವಷ್ಟರಮಟ್ಟಿಗೆ ಮಕ್ಕಳ ಕಾವ್ಯದಲ್ಲಿ ಪ್ರಾಸ ಹಾಸುಹೊಕ್ಕಾಗಿದೆ. ಸಾಮಾನ್ಯವಾಗಿ ಅಂತ್ಯಪ್ರಾಸದ ರಚನೆಗಳನ್ನೇ ನಾವು ಹೆಚ್ಚಾಗಿ ಕಾಣಬಹುದು.

### ಇರುವೆ

ಎಲ್ಲಾ ಕಡೆಯಲಿ ಕಾಣುವ ಇರುವೆ
ಮೂಸುತ ತಿಂಡಿಯ ಹುಡುಕುವ ಇರುವೆ
ಬೆಲ್ಲವನೆಲ್ಲವ ಮೆಲ್ಲುವ ಇರುವೆ
ಎಲ್ಲಾ ಕಡೆಯಲಿ ನೀನಿರುವೆ.

ಕಣ್ಣುಗಳಿಲ್ಲದೆ ಕಾಣುವ ಇರುವೆ
ಸಾಹಸದಿಂದಲಿ ಜೀವಿಪ ಇರುವೆ
ಒಗ್ಗಟ್ಟಿನ ಗುಟ್ಟನು ನೀನರಿತಿರುವೆ

ಕಾಲಕಾಲದಿ ಗೇಯುವ ಇರುವೆ
ಗುಟ್ಟಿನ ತಿಂಡಿಯ ಕದಿಯುವ ಇರುವೆ
ಗೂಡಿಗೆ ತಿಂಡಿಯ ಸಾಗಿಪ ಇರುವೆ
ಎಲ್ಲಾ ಕಡೆಯಲಿ ನೀನಿರುವೆ.

ಕೆಂಪು ಬಣ್ಣದಾ ಮರದಾ ಇರುವೆ
ಕಪ್ಪು ಬಣ್ಣದಾ ಕಚ್ಚುವ ಇರುವೆ
ಕಂದು ಬಣ್ಣದಾ ಬೆಲ್ಲದ ಇರುವೆ
ಎಲ್ಲಾ ಕಡೆಯಲಿ ನೀನಿರುವೆ.

ತತ್ತಿಯ ಹೊತ್ತಿಹ ಗುಂಪಿರುವೆ
ಕಣ್ಣಿಗೆ ಕಾಣದ ಸಣ್ಣಿರುವೆ
ದೊಡ್ಡ ತಲೆಯ ಯಜಮಾನಿರುವೆ
ಎಲ್ಲಾ ಕಡೆಯಲಿ ನೀನಿರುವೆ.[೩]

ಇಲ್ಲಿ ಬರುವ ಇರುವೆ, ಸಣ್ಣಿರುವ, ಗುಂಪಿರುವೆ, ಯಜಮಾನಿರುವೆ, ನೀನಿರುವೆ ಎಂದು ಪ್ರಾಸಗಳು ಪದ್ಯದ ಸೊಬಗನ್ನು ಹೆಚ್ಚಿಸಿದೆ. ಪ್ರಾಸಬದ್ಧ ರಚನೆಗಳು ಮಕ್ಕಳನ್ನು ಇರುವೆಯ ಗುಂಗಿನಲ್ಲಿರುವಂತೆಯೇ ಪ್ರೇರೇಪಿಸುತ್ತವೆ. ಈ ಬಗೆಯ ರಚನೆಗಳು ಕಂಠಪಾಟ ಮಾಡಲು ಯೋಗ್ಯವಾಗಿದ್ದು ಮಕ್ಕಳ ಕಲಿಕೆಯ ತೀವ್ರತೆಯನ್ನು ಹೆಚ್ಚಿಸುತ್ತದೆ.

ಅಂತ್ಯ ಪ್ರಾಸಗಳಿರುವಂತೆ ಆದಿಪ್ರಾಸಗಳ ಬಳಕೆಯನ್ನು ಮಕ್ಕಳಕಾವ್ಯದಲ್ಲಿ ಕಾಣಬಹುದಾದರೂ ಸಂಖ್ಯೆಯಲ್ಲಿ ಅವು ತೀರ ವಿರಳವೆಂದೇ ಹೇಳಬಹುದು. ಜಯರಾಯಾಚಾರ್ಯ 'ನವಿಲು' ಕವಿತೆಯಲ್ಲಿ ಈ ಬಗೆಯ ಆದಿಪ್ರಾಸವನ್ನು ಗುರುತಿಸಬಹುದು.

**ನವಿಲು**

ಕೋಟೆಯ ರಾಯನ
ತೋಟಗಳಲ್ಲಿಯೆ
ಕೂಟವ ಕೂಡುತ
ಲೂಟಿ ಮಾಡುವೆನು[೪]

ಇಲ್ಲಿ ಬರುವ ಕೋಟೆ, ತೋಟ, ಕೂಟ ಇವು ಆದಿಪ್ರಾಸಕ್ಕೆ ಉದಾಹರಣೆಗಳಾಗಿವೆ.

**೪. ಸಂಬೋಧನಾ ರೂಪಗಳ ಬಳಕೆ**

ಮಗುವಿನ ಬೆಳವಣಿಗೆಯ ಭಾಷಾ ಕಲಿಕೆಯ ಪ್ರಾರಂಭದ ಹಂತದಲ್ಲಿ ಮಗು ಹೆಚ್ಚು ಅನುಕರಣಾ ಶಬ್ದಗಳ ಮೂಲಕ ನಿರ್ದಿಷ್ಟ ವಸ್ತು, ಪ್ರಾಣಿ, ಪಕ್ಷಿ, ಮಳೆ, ನೀರು, ಗಾಳಿಯಂತಹ ಪ್ರಾಕೃತಿಕ ವ್ಯಾಪಾರದ ಸಂಗತಿಗಳನ್ನು ಗುರುತಿಸಲು ಶುರುಮಾಡಿದರೆ, ಕ್ರಮೇಣ ಮಗುವಿನ

ಬೆಳವಣಿಗೆ ಹಾಗೂ ಅದರ ಕಲಿಕೆಯಲ್ಲಾದ ವಿಕಾಸದಿಂದಾಗಿ ಅದು ನಾಯಿಯನ್ನು ಈ ಹಿಂದಿನಂತೆ 'ಭೌ ಭೌ' ಎಂದು ಕರೆಯದೇ ನೇರವಾಗಿ 'ನಾಯಿಮರಿ' ಎಂದೇ ಸಂಭೋದಿಸಲು ಪ್ರಾರಂಭಿಸುತ್ತದೆ. ಸಂಬೋಧನಾ ರೂಪಗಳ ಬಳಕೆ ಮಕ್ಕಳು ನಿರ್ದಿಷ್ಟ ವಿಷಯ, ಪ್ರಾಣಿ, ಪಕ್ಷಿ ಸಂಗತಿಗಳನ್ನು ಆಪ್ತಗೊಳಿಸುವುದರ ಸಾಕಾರ ರೂಪದಂತಿವೆ.

### ನವಿಲು

ನವಿಲೇ ನವಲೇ ನಲಿದಾಡು ನವಿಲೀ
ಸುಳಿ ಸುಳಿ ನವಿಲೆ
ಮಳೆ ಬಂದರೆಲಿಹೆ
ಹಲಸಿನ ಮರದ
ಹೊಲದೊಳಗಿರುವೆ[೫]

ಸಿ.ಫ. ಕಟ್ಟೀಮನಿಯವರ 'ಬಣ್ಣದ ಹಕ್ಕಿ' ಕವಿತೆಯಲ್ಲಿನ;

### ಬಣ್ಣದ ಹಕ್ಕಿ

ಬಾರೆಲೆ ಹಕ್ಕಿ ಬಣ್ಣದ ಹಕ್ಕಿ
ಬಾರೆಲೆ ಹಕ್ಕಿ ಹಾರುವ ಹಕ್ಕಿ[೬]

ಎನ್ನುವಲ್ಲಿ ನೇರವಾಗಿ ಅನುಕರಣಾ ಶಬ್ದಗಳಾಚೆಗೆ ಪ್ರಾಣಿಯ ಹೆಸರನ್ನೇ ಸಂಬೋಧಿಸುವ ಸಂಬೋಧನಾ ರೂಪಗಳನ್ನು ನಾವು ಕಾಣಬಹುದು.

**೫. ಸಂಭಾಷಣಾ ಶೈಲಿಯ ಬಳಕೆ**

ಸಂಭಾಷಣಾ ಶೈಲಿ ಎನ್ನುವುದು ನೇರಾನೇರ ಮಾತಿಗಿಳಿಯುವುದರ ಸಾಂಕೇತಿಕ ರೂಪವಾಗಿವೆ. ಈ ಬಗೆಯ ರಚನೆಗಳನ್ನು ಮಕ್ಕಳಕಾವ್ಯದಲ್ಲಿ ಕಾಣಬಹುದು.

### ನಾಯಿಮರಿ

'ನಾಯಿಮರಿ! ನಾಯಿಮರಿ!
ತಿಂಡಿ ಬೇಕೆ?'

'ತಿಂಡಿ ಬೇಕು! ತೀರ್ಥ ಬೇಕು!
ಎಲ್ಲ ಬೇಕು!'

'ನಾಯಿಮರಿ! ನಿನಗೆ ತಿಂಡಿ
ಏಕೆ ಬೇಕು?'

'ತಿಂದು ಗಟ್ಟಿಯಾಗಿ ಮನೆಯ
ಕಾಯಬೇಕು?'

'ಲೊಳ್! ಲೊಳ್! ಭೌ! ಎಂದು
ಕೂಗಿಯಾಡುವೆ!'

'ಜಾಣ ಮರಿ! ತಾಳು! ಹೋಗಿ
ತಿಂಡಿ ತರುವೆನು'

'ತಾ! ನಿನ್ನ ಮನೆಯ ನಾನು
ಕಾಯುತಿರುವೆನು.'[೬]

ಈ ಪದ್ಯದಲ್ಲಿ ಮಗು ತನಗೆ ಪ್ರಿಯವಾದ ತನ್ನ ಸಾಕುಪ್ರಾಣಿಯಾದ ನಾಯಿಮರಿಯೊಂದಿಗೆ ನೇರವಾಗಿ ಮಾತಿಗಿಳಿದಿದೆ. ಸಂಭಾಷಣೆ ಶೈಲಿಯಲ್ಲಿ ಮಾತಿಗೆ ಪ್ರತಿ ಮಾತು ಇರುತ್ತದೆ. ಅದು ಈ ಕಾವ್ಯದಲ್ಲಿ ಅಡಕವಾಗಿದ್ದು, ಮಗುವಿನ ಮಾತಿಗೆ ಮರುತ್ತರವಾಗಿ ನಾಯಿಮರಿ ಸಂಭಾಷಿಸುವುದನ್ನು ಕಾಣಬಹುದು. ಸಂಭಾಷಣಾ ಶೈಲಿಯ ಕಾವ್ಯರಚನೆಗಳು ಮಕ್ಕಳು ಮತ್ತೊಂದು ಪ್ರಾಣಿ ಪಕ್ಷಿಯೊಂದಿಗೆ, ವಿಷಯದೊಂದಿಗೆ ಮಾತಿಗಿಳಿಯುವ ಅವಕಾಶ ಮಾಡಿಕೊಡುವುದಲ್ಲದೆ ಅನ್ಯರ ಮಾತುಗಳನ್ನು ಕೇಳಿಸಿಕೊಳ್ಳುವ ಗುಣವನ್ನು ಮಕ್ಕಳಲ್ಲಿ ಬೆಳೆಸಲು ಸಹಕಾರಿಯಾಗಿವೆಂದು ಹೇಳಬಹುದು.

**೬. ನಿರೂಪಣಾ ಶೈಲಿ**

ಮಕ್ಕಳ ಕವಿಯು ಸಾಮಾನ್ಯವಾಗಿ ಮಕ್ಕಳ ಆಸಕ್ತಿ ಕೆರಳಿಸಲು ಬೇರೆ ಬೇರೆ ಭಾಷಿಕ ಮಾರ್ಗಗಳನ್ನು ಕಂಡುಕೊಳ್ಳುವುದುಂಟು. ಅಂಥವುಗಳಲ್ಲಿ ನಿರೂಪಣಾ ಶೈಲಿಯ ರಚನೆಯೂ ಒಂದು. ಅದಕ್ಕೆ ಉದಾಹರಣೆಯಾಗಿ ಬಿ.ಎಂ. ಶರ್ಮಾ ಅವರ 'ಬಾವಿಯಲ್ಲಿ ಚಂದ್ರ' ಕವಿತೆ ನೋಡಬಹುದು.

**ಬಾವಿಯಲ್ಲಿ ಚಂದ್ರ**

ತಿಂಗಳು ಬೆಳಕಿನ ಇರುಳಿನಲಂದು
ಅಮ್ಮನು ಕೆಲಸದೊಳಿರುತಿರೆ ಕಂಡು
ಗೋಪಿಯು ಪುಟ್ಟುವು ಹೊರಗಡೆ ಬಂದು
ಬಾವಿಗೆ ಇಣಿಕಿದರು.

ಬಾವಿಲಿ ಚಂದ್ರನ ಬಿಂಬವ ಕಂಡು
ಚಂದ್ರನು ಬಾವಿಗೆ ಬಿದ್ದನು ಎಂದು
ಅಯ್ಯೋ! ಪಾಪವೆ! ಎನ್ನುತಲೊಂದು
ಕೊಕ್ಕೆಯ ಹುಡುಕಿದರು.

ಹಗ್ಗದ ಕೊಕ್ಕೆಯು ಕಲ್ಲಿಗೆ ಸಿಕ್ಕಿ
ಪುಟ್ಟುವು ಚಂದ್ರನು ಸಿಕ್ಕೇ ಸಿಕ್ಕ

ಎನ್ನುತ ತುಂಬಾ ಬಲದಿಂದೆಳೆಯೇ
ಹಗ್ಗವು ತುಂಡಾಯ್ತು.

ಎಳೆತದ ರಭಸಕೆ ಪುಟ್ಟುವು ಬಿದ್ದ
ಮೆಲ್ಲನೆ ಮನೆ ಕಡೆ ನೋಡುತಲೆದ್ದ
ತಂಗಿಗೆ ಆಗಸ ತೋರುತಲೆಂದ
ಗೋಪೀ ನೋಡಲ್ಲಿ.

ಚಂದ್ರನ ಮೇಲಕೆ ಏರಿಸಿ ಬಿಟ್ಟೆ
ನಮ್ಮಯ ದೇವರ ಬದುಕಿಸಿ ಕೊಟ್ಟೆ
ಅಮ್ಮಗೆ ಗೊತ್ತಾದರೆ ನಾ ಕೆಟ್ಟೆ
ಎಂದೋಡಿದ ಪುಟ್ಟು.[೮]

ಪ್ರಸಂಗವೊಂದನ್ನು ಮಕ್ಕಳಿಗೆ ಮನದಟ್ಟಾಗುವಂತೆ ಹೇಳಲು ನಿರೂಪಣಾ ಶೈಲಿಯ ಕಾವ್ಯರಚನೆಗಳು ರಾಜಮಾರ್ಗವಿದ್ದಂತೆ. ಅವು ನೇರವಾಗಿ ಮಕ್ಕಳ ಮನಸ್ಸನ್ನು ಪ್ರವೇಶಿಸಿಬಿಡುತ್ತವೆ. ಹಾಗೆಯೇ ಬಹುಕಾಲ ನೆನಪಿನಲ್ಲಿ ಉಳಿಯುತ್ತವೆ.

**೭. ಪ್ರಶ್ನಾರ್ಥಕ ರೂಪದ ಪದಗಳ ಬಳಕೆ**

ಮಕ್ಕಳಕಾವ್ಯದಲ್ಲಿ ಪ್ರಶ್ನಾರ್ಥಕ ರೂಪದ ಪದಗಳ ರಚನೆಗಳನ್ನು ಕಾಣಬಹುದು. ಪ್ರಶ್ನೆಗಳಿಲ್ಲದೇ ಹೋದರೆ ಸಂಶೋಧನೆಗಳೇ ನಡೆಯುತ್ತಿರಲಿಲ್ಲ. ಹೊಸ ಹೊಸ ಆವಿಷ್ಕಾರಗಳು ನಡೆಯುತ್ತಿರಲಿಲ್ಲ. ಪ್ರಶ್ನೆ ಉದ್ಭವಿಸಿದೆ ಎಂದರೆ ಅಲ್ಲಿ ವಿಚಾರಶೀಲತೆ ಜೀವಂತವಾಗಿದೆ ಎಂದೇ ಅರ್ಥ. ಸಾಮಾಜಿಕ ವ್ಯವಸ್ಥೆಯಲ್ಲಿ ಬಾಳಬೇಕಾದ ರಾಷ್ಟ್ರದ ಭಾವಿ ಪ್ರಜೆಗಳಾದ ಮಕ್ಕಳಲ್ಲಿ ಪ್ರಶ್ನಾರ್ಥಕ ಮನೋಭಾವನೆಯನ್ನು ಬೆಳಸುವ ಕಾರಣಕ್ಕಾಗಿಯೇ ಈ ಪ್ರಶ್ನಾರ್ಥಕ ರೂಪದ ರಚನೆಗಳನ್ನು ಕಟ್ಟಿರುವುದನ್ನು ಕನ್ನಡ ಮಕ್ಕಳಕಾವ್ಯದಲ್ಲಿ ಗುರುತಿಸಬಹುದು.

**ಅರ್ಧಚಂದ್ರ**

"ದೇವರ ಪೆಪ್ಪರಮೆಂಟೇನಮ್ಮ
ಗಗನದೊಳಲೆಯುವ ಚಂದಿರನು?
ಎಷ್ಟೇ ತಿಂದರು ಖರ್ಚೇ ಆಗದ
ಬೆಳೆಯುವ ಪೆಪ್ಪರಮೆಂಟಮ್ಮಾ!"

"ದಿನದಿನ ನೋಡುವೆ, ದಿನವೂ ಕರಗುತ
ಎರಡೇ ವಾರದೊಳಳಿಯುವುದು!
ಮತ್ತದು ದಿನ ದಿನ ಹೆಚ್ಚುತ ಬಂದು
ಎರಡೇ ವಾರದಿ ಬೆಳೆಯುವುದು!

ಅಕ್ಷಯವಾಗಿಹ ಪೆಪ್ಪರಮೆಂಟದು
ನನಗೂ ದೊರಕುವುದೇನಮ್ಮಾ?"
"ನೀನೂ ದೇವರ ಬಾಲಕನಾಗಲು
ನಿನಗೂ ಕೊಡುವನು ಕಂದಯ್ಯ!"

"ದೇವರ ಬಾಲಕನಾಗಲು ಒಲ್ಲೆ
ಆತನ ಮೀರಿಹೆ ನೀನಮ್ಮಾ!
ತಾಯಿಯನಗಲಿಸಿ ದೇವರ ಹಿಡಿಸುವ
ಪೆಪ್ಪರಮೆಂಟೂ ಬೇಡಮ್ಮಾ!"[೯]

ಈ ಪದ್ಯದಲ್ಲಿ ಬರುವ 'ದೇವರ ಪೆಪ್ಪರಮೆಂಟೇನಮ್ಮ ಗಗನದೊಳಲೆಯುವ ಚಂದಿರನು?' ಮತ್ತು 'ಅಕ್ಷಯವಾಗಿಹ ಪೆಪ್ಪರಮೆಂಟದು ನನಗೂ ದೊರಕುವುದೇನಮ್ಮಾ?' ಎಂಬುವು ಪ್ರಶ್ನಾರ್ಥಕ ರೂಪಗಳಾಗಿವೆ.

## ೮. ದ್ವಿರುಕ್ತಿ

ಪದವೊಂದನ್ನು ಎರಡು ಸಲ ಉಚ್ಚರಿಸುವ ಬಗೆ ದ್ವಿರುಕ್ತಿ ಎನಿಸುತ್ತದೆ. ಬಾ ಬಾ ಗಿಳಿಯೆ ಬಣ್ಣದ ಗಿಳಿಯೆ

### ಬಾ ಬಾ ಗಿಳಿಯೆ

ಬಾ ಬಾ ಗಿಳಿಯೆ ಬಣ್ಣದ ಗಿಳಿಯೆ
ಹಣ್ಣನು ಕೊಡುವೆನು ಬಾ ಬಾ,
ಹಸಿರು ಪಕ್ಕದ ಚಂದದ ಗಿಳಿಯೆ
ನನ್ನೊಡನಾಡಲು ಬಾ ಬಾ.

ಕೆಂಪು ಮೂಗಿನ ಮುದ್ದಿನ ಗಿಳಿಯೆ
ಹಾಡನು ಕಲಿಸುವೆ ಬಾ ಬಾ,
ಮರದಲಿ ಕುಳಿತು ನೋಡುವೆ ಏಕೆ
ಹಾರುತ ಹತ್ತಿರ ಬಾ ಬಾ.

ಠಕ್ಕಿನ ಕಾಮಿ ಮನೆಯೊಳಗಿಲ್ಲ
ಹೆದರುವೆ ಏಕೆ ಬಾ ಬಾ,
ಸೊಕ್ಕಿನ ಟಾಮಿ ಹತ್ತಿರವಿಲ್ಲ
ಕುಣಿಕುಣಿದಾಡುತ ಬಾ ಬಾ.

ಹಾಡುವುದನ್ನು ಕಲಿಸುವೆ ನಿನಗೆ
ಹಾರಲು ಕಲಿಸಲು ಬಾ ಬಾ,

ಹಣ್ಣನು ತಿಂದು, ಹಾಲನು ಕುಡಿದು
ಮುಗಿಲಿಗೆ ಹಾರುವ ಬಾ ಬಾ.[೧೦]

ಇಡೀ ಪದ್ಯದ ತುಂಬಾ ದ್ವಿರುಕ್ತಿಯೆ ಆವರಿಸಿದೆ. ಪದವೊಂದನ್ನು ಒತ್ತಿ ಹೇಳಲು ಬಳಸುವ ಭಾಷಿಕ ಮಾರ್ಗ ಇದಾಗಿದೆ.

**೯. ಪುನರಾವೃತ್ತಿ**

ಪದವೊಂದನ್ನು ಪುನಃ ಪುನಃ ಪ್ರವಾಹೋಪಾದಿಯಲ್ಲಿ ನುಗ್ಗಿ ಬಂದು ಕೇಳುವಾಗ ಒಂದು ಬಗೆಯ ನಾದವನ್ನು, ಲಯವನ್ನು ಸೃಷ್ಟಿಸುವ ಮಂತ್ರ ಮುಗ್ಧರನ್ನಾಗಿ ಮಾಡುವ ಕಾವ್ಯ ರಚನೆಗಳನ್ನು ಪುನರಾವೃತ್ತಿ ಅಂಶಗಳಲ್ಲಿ ಗುರುತಿಸಬಹುದು.

**ಹಾವಿನ ಹಾಡು**

ನಾಗರ ಹಾವೆ! ಹಾವೊಳು ಹೂವೆ
ಬಾಗಿಲ ಬಿಲದಲಿ ನಿನ್ನಯ ಠಾವೆ?
ಕೈಗಳ ಮುಗಿವೆ, ಹಾಲನ್ನೀವೆ
ಬಾ ಬಾ ಬಾ ಬಾ ಬಾ ಬಾ ಬಾ ಬಾ

ಹಳದಿಯ ಹೆಡೆಯನು ಬಿಚ್ಚೋ ಬೇಗಾ!
ಹೊಳಹಿನ ಹೊಂದಲೆ ತೂಗೋ, ನಾಗಾ!
ಕೊಳಲನ್ನೂದುವೆ ಲಾಲಿಸು ರಾಗಾ!
ನೀ ನೀ ನೀ ನೀ ನೀ ನೀ ನೀ ನೀ

ಎಲೆ ನಾಗಣ್ಣ, ಹೇಳೆಲೊ ನಿನ್ನಾ
ತಲೆಯಲಿ ರನ್ನವಿಹ ನಿಜವನ್ನಾ!
ಬಲುಬಡವಗೆ ಕೊಪ್ಪರಿಗೆಯ ಚಿನ್ನಾ
ತಾ ತಾ ತಾ ತಾ ತಾ ತಾ ತಾ ತಾ

ಬರಿಮೈ ತಣ್ಣಗೆ, ಮನದಲಿ ಬಿಸಿ ಹಗೆ,
ಎರಡೆಳೆ ನಾಲಗೆ ಇದ್ದರು ಸುಮ್ಮಗೆ.
ಎರುಗುವೆ ನಿನಗೆ, ಈಗಲೆ ಹೊರಗೆ
ಪೋ ಪೋ ಪೋ ಪೋ ಪೋ ಪೋ ಪೋ ಪೋ[೧೧]

ಪದ್ಯದಲ್ಲಿ ಬರುವ 'ಬಾ ಬಾ ಬಾ ಬಾ ಬಾ ಬಾ ಬಾ ಬಾ', 'ನೀ ನೀ ನೀ ನೀ ನೀ ನೀ ನೀ ನೀ', 'ತಾ ತಾ ತಾ ತಾ ತಾ ತಾ ತಾ ತಾ', 'ಪೋ ಪೋ ಪೋ ಪೋ ಪೋ ಪೋ ಪೋ ಪೋ' ಎಂಬ ಅಂಶಗಳು ಪುನರಾವೃತ್ತಿಗಳಾಗಿವೆ.

## ೧೦. ಸರಳ ಪದಗಳ ರಚನೆ

ಬಹುತೇಕ ಮಕ್ಕಳಕಾವ್ಯಗಳು ಸರಳವಾದ ರಚನೆಗಳಿಂದ ಕೂಡಿರುತ್ತವೆ. ಸರಳ ಪದಗಳ ಬಳಕೆ ಇಂತಹ ರಚನೆಗಳಲ್ಲಿ ಕಾಣಬಹುದು.

### ಬಾರೆ ಹೋಗುವ ಸಾಗುವಾ

ನಮ್ಮ ಊರಿನ
ಜಾತ್ರೆ ಈ ದಿನ,
ಬಾರೆ ಹೋಗುವ ಸಾಗುವ!

ಅಮ್ಮ ಬರುವಳು,
ಅಕ್ಕ ಬರುವಳು,
ಬಾರೆ ಹೋಗುವ ಸಾಗುವ!

ಅಪ್ಪ ಬರುವನು,
ಅಣ್ಣ ಬರುವನು,
ಬಾರೆ ಹೋಗುವ ಸಾಗುವ!

ತಮ್ಮ ಬರುವನು,
ತಂಗಿ ಬರುವಳು,
ಬಾರೆ ಹೋಗುವ, ಸಾಗುವ!

ಮಾವ ಬರುವನು,
ಬಾವ ಬರುವನು,
ಬಾರೆ ಹೋಗುವ ಸಾಗುವ!

ದುಡ್ಡು ಕೊಡುವರು,
ಲಡ್ಡು ಕೊಡುವರು,
ಬಾರೆ ಹೋಗುವ ಸಾಗುವ![೧೨]

ಈ ಪದ್ಯದಲ್ಲಿ ಬರುವ ಊರು, ಜಾತ್ರೆ, ಬಾರೆ, ಹೋಗುವ, ಸಾಗುವ, ಅಮ್ಮ, ಅಕ್ಕ, ಅಪ್ಪ, ಅಣ್ಣ, ತಮ್ಮ, ತಂಗಿ, ಮಾವ, ಬಾವ, ದುಡ್ಡು, ಲಡ್ಡು ಇವೆಲ್ಲವೂ ಸರಳ ಪದಗಳ ಸಂಕಲನವೇ ಅಡಗಿದೆ. ಈ ಬಗೆಯ ಸರಳ ಪದಗಳು ಮಗುವಿಗೆ ಕಾವ್ಯವನ್ನು ಸರಾಗವಾಗಿ ಜೀರ್ಣಿಸಿಕೊಳ್ಳಲು ಸಹಕಾರಿಯಾಗಿವೆ. ಇವು ೫ ರಿಂದ ೭ ವರ್ಷದ ಮಕ್ಕಳಿಗೆ ಹೆಚ್ಚು ಮುದನೀಡುತ್ತವೆ. ಹಾಗಾಗಿಯೇ ಮಕ್ಕಳಿಗೆ ಹೆಚ್ಚು ಪ್ರಿಯವಾಗುತ್ತದೆ.

**ಕೊನೆ ಟಿಪ್ಪಣಿಗಳು**

೧. ತಟ್ಟು ಚಪ್ಪಾಳೆ ಪುಟ್ಟ ಮಗು; ಸಂ: ಬೊಳುವಾರು ಮಹಮದ್ ಕುಂಞ್; ಪುಟ ೧೩೪.

೨. ಅದೇ; ಪುಟ ೮೮.

೩. ಅದೇ; ಪುಟ ೧೫೮.

೪. ಅದೇ; ಪುಟ ೧೨೧.

೫. ಅದೇ; ಪುಟ ೧೨೦.

೬. ಅದೇ; ಪುಟ ೧೧೪.

೭. ಅದೇ; ಪುಟ ೬೩.

೮. ಅದೇ; ಪುಟ ೧೬೪.

೯. ಅದೇ; ಪುಟ ೧೩೬.

೧೦. ಅದೇ; ಪುಟ ೧೧೮.

೧೧. ಅದೇ; ಪುಟ ೧೫೪.

೧೨. ಅದೇ; ಪುಟ ೮೬.

•••

## ಅಧ್ಯಾಯ : ಐದು

# ಮಕ್ಕಳ ಕಾವ್ಯದಲ್ಲಿ ಬಾಂಧವ್ಯದ ನೆಲೆಗಳು

**ಬಾ**ಂಧವ್ಯ, ಬಂಧುತ್ವದ ಪರಿಕಲ್ಪನೆ ಜೀವಜಗಕೆ ಹೊಸತೇನೂ ಅಲ್ಲ. ವಿಶೇಷವಾಗಿ ಮನುಕುಲದಲ್ಲಿ ಭಿನ್ನಾಭಿಪ್ರಾಯ, ಸಂಘರ್ಷಗಳಿಂದ ಸಾವು-ನೋವು ಸಂಭವಿಸಿದಾಗಲೂ ಶೇಕಡ ೭೦ರಷ್ಟು ಸಮಾಜ ವ್ಯವಸ್ಥಿತವಾಗಿದೆ ಎಂದರೆ ಅದಕ್ಕೆ ಮೂಲ ಕಾರಣ ಮಾನವ ಸಂಬಂಧ ಗಳೊಳಗೆ ಹೆಣೆದುಕೊಂಡಿರುವ ಈ ಬಂಧುತ್ವದ ಬೆಸುಗೆ. 'ಬಂಧುತ್ವ'ವು ಇಂದಿನ ಮಕ್ಕಳಿಗೆ ಹಿರಿಯರು ಕೊಡಬಹುದಾದ ಅಮೂಲ್ಯ ಬಳುವಳಿಗಳಲ್ಲಿ ಒಂದು. ನಮ್ಮ ಕೌಟುಂಬಿಕ ವ್ಯವಸ್ಥೆಯು ಶತಮಾನಗಳಿಂದಲೂ ತನ್ನ ಶಾಂತಿಯುತ ಸ್ವಸ್ಥ ಸುಂದರ ಬದುಕಿಗಾಗಿ ಈ ಬಾಂಧವ್ಯದ ಕಲ್ಪನೆಯನ್ನು ತನ್ನೊಡಲಲ್ಲಿ ಬೆಚ್ಚಗೆ ಕಾಪಿಟ್ಟುಕೊಂಡು ತನ್ನ ಮುಂದಿನ ಪೀಳಿಗೆಯ ವಾರಸುದಾರ ರಾದ ಮಕ್ಕಳಿಗೆ ಅನುಕರುಣೆ, ಕಾವ್ಯದ ಓದು, ಹಾಡುಗಾರಿಕೆಯ ಮೂಲಕ ಅದನ್ನು ತಲುಪಿಸುವ ಕಾರ್ಯ ಮಾಡುತ್ತ ಬಂದಿದೆ. ಈ ಬಗೆಯ ಬಾಂಧವ್ಯದ ನೆಲೆಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಅಧ್ಯಯನ ಮಾಡುವುದರ ಜೊತೆಯಲ್ಲಿಯೇ ಬಾಂಧವ್ಯದ ಹಲವು ಆಯಾಮಗಳನ್ನು, ಅವುಗಳ ಮಹತ್ವವನ್ನು ವಿಶ್ಲೇಷಿಸುವ ಕೆಲಸವನ್ನು ಇಲ್ಲಿ ಮಾಡಲಾಗುತ್ತದೆ.

ಮುಖ್ಯವಾಗಿ ಇಲ್ಲಿ ಬಾಂಧವ್ಯದ ನೆಲೆಗಳನ್ನು ಎರಡು ರೀತಿಯಲ್ಲಿ ವಿಭಾಗಿಸಿ ನೋಡಬಹುದು.

೧. ಕೌಟುಂಬಿಕ ನೆಲೆ

೨. ಆನ್ವಯಿಕ ನೆಲೆ

**೫.೧. ಕೌಟುಂಬಿಕ ನೆಲೆ**

ಕೂಡಿ ಬಾಳುವ ಕನಸಿನ ಸಾಕಾರ ರೂಪವಾಗಿ ಒಡಮೂಡಿದ್ದೇ ಈ ಕೌಟುಂಬಿಕ ಪರಿಕಲ್ಪನೆ. ಕುಟುಂಬದ ಕಲ್ಪನೆ ಮನುಷ್ಯನನ್ನು ವ್ಯವಸ್ಥಿತವಾಗಿ ಬದುಕಲು ಪ್ರೇರೇಪಿಸಿರುವುದುಂಟು. ಕುಟುಂಬ ಹಾಗೂ ಆ ಕುಟುಂಬವೊಂದರ ಜೊತೆಗೆ ಹೆಣೆದುಕೊಂಡಿರುವ ಬಾಂಧವ್ಯದ ಬೆಸುಗೆಗಳು ಮನುಷ್ಯನ ಏಕಾಂಗಿತನದ ಬೇಸರದ ಕ್ಷಣಗಳಿಗೆ ಅಂತ್ಯವನ್ನು ಹಾಡಿದ್ದರ ಸಾಂಕೇತಿಕ ರೂಪಗಳಾಗಿವೆ. ಭಾರತೀಯ ಕುಟುಂಬ ವ್ಯವಸ್ಥೆಯೊಳಗಿರುವ ಸಂಬಂಧಗಳ ಬಾಂಧವ್ಯದ

ಕಲ್ಪನೆ ತುಂಬಾ ವಿಶಾಲವಾದುದು. ಇಲ್ಲಿ ಅಪ್ಪ, ಚಿಕ್ಕಪ್ಪ, ದೊಡ್ಡಪ್ಪ, ಅವ್ವ, ಚಿಗವ್ವ, ದೊಡವ್ವ, ಅಣ್ಣ-ತಮ್ಮ, ಅಕ್ಕ-ತಂಗಿ, ಸೋದರತ್ತೆ, ಸೋದರ ಮಾವ, ಸೋದರಳಿಯ, ಸೋದರ ಸೊಸೆ, ಅತ್ತೆ-ಮಾವ, ಸೊಸೆ-ಅಳಿಯ, ನಾದಿನಿ, ಅಜ್ಜ-ಅಜ್ಜಿ, ಗಂಡ-ಹೆಂಡತಿ-ಮಕ್ಕಳು, ಮೊಮ್ಮಕ್ಕಳು ಹೀಗೆ ಬಂಧುತ್ವದ ಬಳ್ಳಿ ಬೆಳೆಯುತ್ತಲೇ ಹೋಗುತ್ತದೆ. ಆದರೆ ಪಾಶ್ಚಾತ್ಯ ದೇಶದೊಳಗೆ ಈ ಬಗೆಯ ವಿಶಾಲ ಪರಿಕಲ್ಪನೆ ಇರದೆ ಒಂದು ಮಿತಿಯೊಳಗೆ ರಚನೆಯಾದಂತವುಗಳಾಗಿವೆ. ಇಲ್ಲಿ ಒಂದೊಂದು ಸಂಬಂಧಗಳಿಗೂ ಒಂದೊಂದು ಪ್ರತ್ಯೇಕ ಬಂಧುವಾಚಕಗಳಿವೆ. ಅಂದರೆ ದ್ರಾವಿಡ ಭಾಷೆಗಳ ಸಂಬಂಧ ಸೂಚಕ ಪದಗಳಲ್ಲಿ ಸ್ಪಷ್ಟತೆಯಿದೆ. ಇದು ದ್ರಾವಿಡ ಭಾಷೆಗಳ ಲಕ್ಷಣಗಳ ಅಂಶಗಳಲ್ಲಿ ಒಂದಾಗಿದೆ. ಆದರೆ ಇಂಗ್ಲೀಷ್ ಭಾಷಾ ಸಂಬಂಧ ಸೂಚಕ ಪದಗಳಲ್ಲಿ ಸ್ಪಷ್ಟತೆಯಿಲ್ಲ. ಉದಾಹರಣೆಗೆ ಅಲ್ಲಿ ಸಾಮಾನ್ಯವಾಗಿ ಎಲ್ಲರಿಗೂ ಸಹಜವಾಗಿ ಅಂಕಲ್, ಆಂಟಿ ಪದ ಬಳಕೆಯಾಗುತ್ತದೆ. ಅಕ್ಕ-ತಂಗಿ, ಅಣ್ಣ-ತಮ್ಮ ಎಂದು ಹೇಳುವಲ್ಲಿ ಕನ್ನಡ ಭಾಷೆಯಲ್ಲಿ ಯಾವುದೇ ಗೊಂದಲವಿಲ್ಲ. ಆದರೆ ಇಂಗ್ಲೀಷಿನಲ್ಲಿ Brother, Sister ಎಂದು ಸಂಬೋಧಿಸುವಾಗ ಅಣ್ಣ ಅಥವಾ ತಮ್ಮ ಎಂತಲೂ, ಅಕ್ಕ ಅಥವಾ ತಂಗಿ ಎಂತಲೂ ಎರಡು ರೀತಿಯಲ್ಲಿ ತಿಳಿದುಕೊಳ್ಳ ಬಹುದಾದ ಬಹುಮುಖಿ ಸಾಧ್ಯತೆಗಳಿರುತ್ತವೆ. ಮತ್ತೆ Brother, Sister ಪದಗಳ ಅರ್ಥ ಖಚಿತತೆಗಾಗಿ Younger, Yelder ಎಂಬುದನ್ನು ಸೇರಿಸಿ ಹೇಳಬೇಕಾಗುತ್ತದೆ. ಹಾಗಾಗಿಯೇ ಭಾರತೀಯ ಕೌಟುಂಬಿಕ ವ್ಯವಸ್ಥೆಯ ಬಂಧುತ್ವದ ಪರಿಕಲ್ಪನೆ ತುಂಬಾ ಔಚಿತ್ಯಪೂರ್ಣವಾದುದು. ಕನ್ನಡ ಜಾನಪದ ಪರಂಪರೆಯಲ್ಲಿ ಬಂಧುತ್ವದ ಪರಿಕಲ್ಪನೆಗೆ ಸಂಬಂಧಿಸಿದ ಹಾಡೊಂದು ಮಕ್ಕಳ ಕಾವ್ಯಲೋಕದಲ್ಲಿ ತುಂಬಾ ಹಿಂದಿನಿಂದಲೂ ಪ್ರಸಿದ್ಧಿಯಲ್ಲಿರುವುದರ ಜೊತೆಗೆ ಇಂದಿಗೂ ನಮ್ಮ ಗ್ರಾಮೀಣ ಭಾಗದ ಕೌಟುಂಬಿಕ ಪರಿಸರದಲ್ಲಿ ಇನ್ನೂ ಚಾಲ್ತಿಯಲ್ಲಿದೆ.

ಕಾಗಿ ಕಾಗಿ ಕವ್ವ
ಯಾರ ಬಂದಾರವ್ವ
ಮಾವ ಬಂದಾನವ್ವ
ಏನ್ ತಂದಾನವ್ವ
ಹಂಡೆದಂಥ ಕುಂಡಿ ಬುಟಗಂದು ಹಂಗಾ ಬಂದಾನವ್ವ
ಮಾವಗೇನ ಊಟ
ಬೀಸಕಲ್ಲ ಗೂಟ

ಭಾರತೀಯ ಕೌಟುಂಬಿಕ ಪರಿಸರದಲ್ಲಿ 'ಸೋದರ ಮಾವ' ಎಂಬ ಬಂಧು ಮಕ್ಕಳಿಗೆ ಯಾವಾಗಲೂ ಹಾಸ್ಯಾಸ್ಪದ ವ್ಯಕ್ತಿಯಾಗಿ ತೋರಿದ್ದೇ ಹೆಚ್ಚು. ಆತನ ಜೊತೆಗೆ ಇರುವ ಅತಿಯಾದ ಸಲುಗೆ, ಪ್ರೀತಿಯ ಆಪ್ತತೆಯು ಇದಕ್ಕೆ ಕಾರಣವಿರಬಹುದು. ಆತ ಮನೆಗೆ ಬರುವನೆಂದರೆ ಮಕ್ಕಳಿಗೆ ಎಲ್ಲಿಲ್ಲದ ಸಡಗರ ಜೊತೆಗೆ ಸೋದರ ಮಾವ ತರಬಹುದಾದ ಹಣ್ಣು-ಹಂಪಲು ಇತ್ಯಾದಿ ತಿನಿಸುಗಳ ಬಗೆಗೆ ಸದಾ ಕುತೂಹಲವೊಂದು ಇದ್ದೇ ಇರುತ್ತದೆ.

ಆದರೆ ಆಕಸ್ಮಿಕವಾಗಿ ಒಮ್ಮೆ ಸೋದರ ಮಾವ ಮಕ್ಕಳಿಗೆ ಏನನ್ನು ತರದೆ ಬರಿಗೈಯಿಂದ ಮನೆಗೆ ಬಂದಾಗ ನಿರಾಶೆಗೊಂಡ ಮಕ್ಕಳು ತಮ್ಮೊಳಗೆ ಗುಂಪಿನಲ್ಲಿ ಮಾವನ ಕುರಿತ ಹಾಸ್ಯಾಸ್ಪದ ರೀತಿಯಲ್ಲಿ ಮಾತನಾಡಿಕೊಳ್ಳುವ, ಹಾಡಿಕೊಳ್ಳುವ ಪ್ರಸಂಗವೇ ಮಕ್ಕಳ ಕಾವ್ಯಕ್ಕೆ ವಸ್ತುವಾಗಿ ಒದಗಿ ಬಂದಿದೆ. ಈ ಕಾವ್ಯದಲ್ಲಿ ಬರುವ 'ಹಂಡೆದಂಥ ಕುಂಡಿ ಬುಟಗಂದು ಹಂಗಾ ಬಂದಾನವ್ವ' ಎಂಬುದು ಆ ಸಂದರ್ಭಕ್ಕೆ ಮಕ್ಕಳು ತೋರಿದ ಪ್ರತಿಕ್ರಿಯೆಯೊಳಗಿನ 'ವಿಡಂಬನೆ'ಯ ಸಾಂಕೇತಿಕ ರೂಪವಾಗಿದೆ. ಮತ್ತೆ ಏನನ್ನೂ ತರದೇ ಬರಿಗೈಯಿಂದ ಮನೆಗೆ ಬಂದ ಮಾವ ಊಟಕ್ಕೆ ಕೂಡದೆ ಇರುತ್ತಾನೆಯೇ? ಈ ಸಂಗತಿ ತಿಳಿದ ಮಕ್ಕಳು ತಮಗಾದ ಅಸಹನೆಗೆ ತುಸು ಮುನಿಸಿನ ಪ್ರೀತಿ ಬೆರೆತ ಪ್ರತೀಕಾರ ತೀರಿಸಿಕೊಳ್ಳುವ ರೀತಿಯಲ್ಲಿ ಮಕ್ಕಳು 'ಮಾವಗೇನ್ ಊಟ, ಬೀಸಕಲ್ಲ ಗೂಟ' ಎಂದು ಹಾಡಿರುವುದುಂಟು.

ತಾಯಿ ಮಕ್ಕಳ ಸಂಬಂಧ ಬಾಂಧವ್ಯದ ಅನನ್ಯತೆಯಲ್ಲೇ ತುಂಬಾ ಮಹತ್ವದ್ದು. ತಾಯಿ-ಮಕ್ಕಳ ನಡುವಿನ ಬಾಂಧವ್ಯದ ಹೆಗ್ಗುರುತುಗಳಾಗಿ ಜನಪದ ಜೋಗುಳ ಹಾಡುಗಳನ್ನು ಕನ್ನಡ ಮಕ್ಕಳ ಕಾವ್ಯದಲ್ಲಿ ಗಮನಿಸಬಹುದು.

**ಮಕ್ಕಳೇ ಚೆಂದ ಮನೆಗೆಲ್ಲ :**

**ತೊಟ್ಟಿಲ ಮಗು**

ತೂಗು ತೊಟ್ಟಿಲಿಗೊಂದು ಹಾಗು ಪಟ್ಟೆಯ ಹಾಸಿ
ಮಾಗಾಯಿ ಮಗುವ ಮಲಗಿಸಿ - ಅವರಮ್ಮ
ಜೋಗುಳ ಹಾಡತೊಡಗ್ಯಾಳು

ಜೋಗುಳ ಹಾಡಿದರೆ ಆಗಲೆ ಕೇಳ್ಯಾನು
ಹಾಲ ಹಂಬಲವ ಮರೆತಾನು - ಕಂದಯ್ಗೆ
ಜೋಗುಳದಾಗೆ ಅತಿಮುದ್ದು

ಯಾತ ಯಾತರ ಗಾಳಿ ಎಲೆಯ ತೋಟದ ಗಾಳಿ
ಸುತ್ತಲು ಗಾಳಿ ಸುಳಿಗಾಳಿ - ನನ್ನಯ್ಯ
ತೊಟ್ಟಿಲ ಗಾಳಿ ಮನೆ ತುಂಬ.[೧]

ಪದ್ಯದ ಮೂರನೇ ತ್ರಿಪದಿಯು ಮಗುವಿನ ಮತ್ತು ತಾಯಿ ನಡುವಿನ ಬಾಂಧವ್ಯದ ಗಾಢತೆಯನ್ನು ಎತ್ತಿತೋರಿಸುತ್ತದೆ. ಗಾಳಿ, ಬಿರುಗಾಳಿ, ಸುಂಟರಗಾಳಿ, ಕುಳಿರ್ಗಾಳಿಗಳು ಪರಿಸರಕ್ಕೆ ಹೊಸದೇನೂ ಅಲ್ಲ. ಆದರೆ ಜನಪದ ತಾಯಿ ಹೆಸರಿಸುವ 'ತೊಟ್ಟಿಲ ಗಾಳಿ'ಯು ಪ್ರೀತಿಯ ಅಗಾಧತೆಯನ್ನು ನಿರೂಪಿಸುತ್ತದೆ. ತಾಯಿಗೆ ನೈಸರ್ಗಿಕ ಪರಿಸರದಲ್ಲಿ ಬೀಸುವ ಗಾಳಿಗಿಂತಲೂ ಕೌಟುಂಬಿಕ ಪರಿಸರದಲ್ಲಿ ಮನೆಯ ಒಳಗೆ ಬೀಸುವ ತೊಟ್ಟಿಲ ಗಾಳಿಯೇ ತೃಪ್ತಿಯನ್ನು ನೀಡುತ್ತದೆನ್ನುವ ಆಂತರ್ಯಭಾವ ಈ ಪದ್ಯದ್ದಾಗಿದೆ.

ಎರಡನೇ ತ್ರಿಪದಿಯಲ್ಲಿ ಮಗುವಿನ ಮತ್ತು ತಾಯಿಯ ನಡುವಿನ ಬಾಂಧವ್ಯದ ಇನ್ನೊಂದು ಮಗ್ಗುಲನ್ನು ನಾವು ಅರಿಯಬಹುದು. ಜೋಗುಳ ಹಾಡುಗಳಿಗೂ ಮತ್ತು ಮಗುವಿಗೂ ಅವಿನಾಭಾವ ನಂಟು. ಜೋಗುಳ ಹಾಡುಗಳನ್ನು ಹೊರತುಪಡಿಸಿ ನಾವು ನಮ್ಮ ಬಾಲ್ಯದ ನೆನಪುಗಳ ದಿನಚರಿಯನ್ನು ಪರಿಪೂರ್ಣಗೊಳಿಸಲಾಗದು. ಬಹುಶಃ ಜೋಗುಳ ಹಾಡುಗಳನ್ನು ಕೇಳದೆ ಬೆಳೆದವರಿಲ್ಲವೇನೋ ಎನ್ನುವಷ್ಟರಮಟ್ಟಿಗೆ ಈ ಜೋಗುಳ ಹಾಡುಗಳು ವಿಶ್ವವ್ಯಾಪಿಯಾಗಿವೆ. ಜೋಗುಳ ಹಾಡು ಕೇಳುತ್ತಿದ್ದರೆ ಮಗು ತನ್ನ ಹಾಲ ಹಂಬಲ(ಹಸಿವು)ವನ್ನು ಮರೆಯುತ್ತದೆ ಎನ್ನುವುದಾದರೆ ಜೋಗುಳ ಹಾಡು ಅಥವಾ ಈ ಲಾಲಿ ಹಾಡುಗಳಿಗಿರುವ ಮಾಂತ್ರಿಕ ಶಕ್ತಿಯಾದರೂ ಎಂತದ್ದು ಎಂಬುದು ನಮ್ಮಲ್ಲಿ ಬೆರಗು ಹುಟ್ಟಿಸದಿರದು. ಹಾಗೆಯೇ ಈ ಹಾಡುಗಳನ್ನು ಮಗು ಪ್ರೀತಿಸುವ, ಅನುಭವಿಸುವ, ಆನಂದಿಸುವ ಪರಿ ಜೊತೆಯಲ್ಲೇ ಮಗು ಹೊಂದಿರುವ ಮಾನಸಿಕ ನಂಟಿನ ಸೆಲೆಯನ್ನು ನಾವಿಲ್ಲಿ ತಿಳಿಯಬಹುದು.

ಇನ್ನೊಂದು ಜೋಗುಳದಲ್ಲಿ ತಾಯಿಯೊಬ್ಬಳು ತನ್ನ 'ಮಗುವಿನ ಸೊಬಗು' ಕುರಿತು ಹೀಗೆ ಹೇಳುತ್ತಾಳೆ.

ನನ್ನಯ್ಯನಂಥೋರು ಹನ್ನೆರಡು ಮಕ್ಕಳು
ಹೊನ್ನೆಯ ಮರದ ನೆರಳಲಿ - ಆಡುವಾಗ
ಸನ್ಯಾಸಿ ಜಪವ ಮರೆತಾನು

ಹಾವಿನ ಹೆಡೆ ಚಂದ ಮಾವಿನ ಮಿಡಿ ಚೆಂದ
ಹಾರಾಡಿ ಬರುವ ಗಿಣಿ ಚೆಂದ - ಕಂದಯ್ಯ
ನೀ ಚೆಂದ ನಮ್ಮ ಮನೆಗೆಲ್ಲ[3]

ತನ್ನ ಮಗುವಿನ ಸೊಬಗು ಹಾಗೂ ಆಟದ ಪರಿ ನೋಡಿ ಸನ್ಯಾಸಿಯು ತನ್ನ ಜಪವನ್ನೇ ಮರೆಯುತ್ತಾನೆ ಎನ್ನುವಲ್ಲಿ ಮಗುವಿನ ಸೊಬಗಿನಲ್ಲಿರುವ ಚಿತ್ತಾಪಹರಣದ ಗುಣ ಸೂಜಿಗಲ್ಲಿನ ಸೆಳೆತದಂತೆ, ಆಕರ್ಷಕವಾದುದು ಸೂಚಿಸುವಲ್ಲಿಯೇ ಎಂಬುದನ್ನು ಈ ಪದ್ಯ ತಾಯಿ ಮತ್ತು ಮಗುವಿನ ನಡುವಿನ ಬಾಂಧವ್ಯದ ಹೆಗ್ಗಳಿಕೆಗೆ ಸಾಕ್ಷಿಯಾಗಿದೆ. ನಿಸರ್ಗದಲ್ಲಿರುವ ಸೊಬಗು ಅನನ್ಯವಾದುದು. ಅದು ಒಂದು ಬಗೆಯಲ್ಲಿ ಇಲ್ಲ. ಹಾವಿನ ಹೆಡೆಯ ಸೊಬಗಿಗಾಗಲಿ, ಮಾವಿನ ಮಿಡಿಯ ಸೊಬಗಿಗಾಗಲಿ, ಹಾರಾಡಿ ಬರುವ ಗಿಣಿಯ ಚೆಂದಕೆ ಸಾಟಿಯೇ ಇಲ್ಲದಿದ್ದರೂ ಅವುಗಳಂತೆ ತನ್ನ ಮನೆಯ ಪರಿಸರದಲ್ಲಿರುವ ಮಗುವಿನ ಸೊಬಗು ಕಮ್ಮಿಯಿರುವಂತದ್ದೇನಲ್ಲ, ತನ್ನ ಮಗುವಿನಲ್ಲಿಯು ಅಂದ-ಚೆಂದ ಮೈದುಂಬಿ ಹರಿದಿದೆ ಎಂಬ ಜನಪದ ಸ್ತ್ರೀಯ ಸೂಕ್ಷ್ಮ ಸಂವೇದನೆಗಳೇ ಕಾವ್ಯಕ್ಕೆ ಹೆಚ್ಚು ಮೆರುಗನ್ನು ನೀಡುವುದರ ಜೊತೆಯಲ್ಲಿಯೇ ಮಗು ಮತ್ತು ತಾಯಿಯ ನಡುವಿನ ಬಾಂಧವ್ಯದ ವೃದ್ಧಿಗೆ ಇವು ಕಾರಣವಾಗಿವೆ ಎಂಬುದು ಇಲ್ಲಿ ಗಮನಿಸಬೇಕಾದ ಸಂಗತಿ.

ಸಾಮಾನ್ಯವಾಗಿ ಮಗುವಿನ ಅಳು ಕುಟುಂಬದ ಸದಸ್ಯರಿಗೆ, ಅನ್ಯರಿಗೆ ಕಿರಿಕಿರಿ ಉಂಟು ಮಾಡುವಂತದ್ದಾಗಿದೆ. ಆದರೆ ಹೆತ್ತ ತಾಯಿಗೆ ಮಾತ್ರ ಮಗುವಿನ ಅಳು ಸಹ ಮುದ್ದು ತರುವ ಸಂಗತಿಯೇ ಆಗಿದೆ. ಮಕ್ಕಳ ಕಾವ್ಯದಲ್ಲಿ ಈ ಅಂಶ ಅಡಕವಾಗಿರುವುದನ್ನು ಗಮನಿಸಬಹುದು.

ಯಾಕಳುವೆ ಎಲೆ ರಂಗ ಬೇಕಾದ್ದು ನಿನಗಿದೆ
ನಾಕೆಮ್ಮೆ ಕರೆದ ನೊರೆ ಹಾಲು - ಸಕ್ಕರೆ
ನೀ ಕೇಳಿದಾಗ ಕೊಡುವೆನು

ಅಳುವ ಕಂದನ ತುಟಿ ಹವಳದ ಕುಡಿಯಂತೆ
ಕುಡಿಹುಬ್ಬು ಬೇವಿನೆಸಳಂತೆ - ಕಣ್ಣೋಟ
ಶಿವನ ಕೈಯಲಗು ಹೊಳೆದಂತೆ[೬]

ಮಗು ಅಳುವಾಗಲೂ ತಾಯಿ ತನ್ನ ಸಂಯಮ ಕಳೆದುಕೊಳ್ಳದೇ ಆಳುವ ಮಗುವಿನ ಮೇಲೆ ಕಾವ್ಯವನ್ನು ಕಟ್ಟುವ ಬಾಂಧವ್ಯದ ಈ ಪರಿಯನ್ನು ನಾವು ಮಕ್ಕಳ ಕಾವ್ಯದಲ್ಲಲ್ಲದೇ ಮತ್ತೆಲ್ಲಿ ಕಾಣಲು ಸಾಧ್ಯ?

ಕುಟುಂಬದಲ್ಲಿ ತಂದೆ-ತಾಯಿಯರ ಸಂಬಂಧದಷ್ಟೇ ಪ್ರಾಮುಖ್ಯತೆಯನ್ನು ಪಡೆದ, ಮಕ್ಕಳಿಗೆ ಹೆಚ್ಚು ಮುದ ನೀಡುವ ಬಾಂಧವ್ಯದ ಮತ್ತೊಂದು ಕೊಂಡಿಯೆಂದರೆ ಈ ಅಜ್ಜ-ಅಜ್ಜಿಯರ ನಂಟಿನದು. ಅಜ್ಜ-ಅಜ್ಜಿ ಕುರಿತಾದ ಅಭಿವ್ಯಕ್ತಿಯನ್ನು ಕನ್ನಡ ಮಕ್ಕಳ ಕಾವ್ಯದಲ್ಲಿ ಕಾಣಬಹುದು.

**ತುಂಟ ಅಜ್ಜಿ**

ಅಜ್ಜ ತಿಂತಾನ
ಯಾವಾಗ್ಲೂ ಸೇಂಗಾ ಬೆಲ್ಲ!
ಯಾಕಂದ್ರ
ಅವನಿಗದಾವು ಎಲ್ಲ ಹಲ್ಲ!

ಅಜ್ಜಿ ನುಂಗ್ತಾಳ
ಬರಿ ರಸಗುಲ್ಲಾ
ಯಾಕಂದ್ರ
ಅವಳ್ಗಿಲ್ಲ ಒಂದೂ ಹಲ್ಲ![೭]

- ಜಯವಂತ ಕಾಡದೇವರ

ಬಹುತೇಕ ಮಕ್ಕಳು ಇಂದು ವಿಭಕ್ತ ಕುಟುಂಬಗಳಲ್ಲಿ ಬೆಳೆಯುತ್ತಿವೆ. ಇದರಿಂದ ಮಕ್ಕಳ ಸಂಬಂಧಗಳ ವ್ಯಾಪ್ತಿ ಸೀಮಿತವಾಗುತ್ತಿದೆ. ಒಂದು ಮಗುವಿಗೆ ನಾವು ಅಪ್ಪ ಆಗಬಹುದು ಅಥವಾ ಅಮ್ಮ ಆಗಬಹುದು. ಅಂದರೆ ಸಂಬಂಧದ ಯಾವುದಾದರೂ ಒಂದು ಸ್ಥಾನವನ್ನು

ತುಂಬಬಹುದೇ ವಿನಾಃ ಅಜ್ಜ-ಅಜ್ಜಿ, ಅಣ್ಣ-ತಂಗಿ, ಚಿಕ್ಕಪ್ಪ-ಚಿಕ್ಕಮ್ಮ, ದೊಡ್ಡಪ್ಪ-ದೊಡ್ಡಮ್ಮ, ಅತ್ತೆ-ಮಾವ ಹೀಗೆ ಬಾಂಧವ್ಯದ ಎಲ್ಲ ಸ್ಥಾನಗಳನ್ನು ನಾವೇ ತುಂಬಲಿಕ್ಕೆ ಸಾಧ್ಯವಿಲ್ಲ. ಈ ಹಿನ್ನೆಲೆಯಲ್ಲಿ ಹೇಳುವುದಾದರೆ ಮಗುವಿನ ಬಾಂಧವ್ಯದ ನೆಲೆಯ ಹರವು ತುಂಬಾ ವಿಶಾಲ ವಾದುದು. ವಿಭಕ್ತ ಕುಟುಂಬಗಳಿಂದಾಗಿ ಅಜ್ಜ-ಅಜ್ಜಿ ಮೊಮ್ಮಕ್ಕಳ ನಡುವೆ ಅಂತರ ಉಂಟಾಗಿದೆ. ಅಜ್ಜ-ಅಜ್ಜಿ ಇಲ್ಲದಿರುವ ಮನೆಗಳ ಕಥೆ ಒಂದು ಬಗೆಯಾದರೆ, ಅಜ್ಜ-ಅಜ್ಜಿ ಇರುವ ಮನೆಗಳ ಕಥೆ ಇನ್ನೊಂದು ಬಗೆಯದು. ಆಧುನಿಕ ಜೀವನ ಶೈಲಿಗೆ Update ಆಗಿರುವ ಅಜ್ಜಿ ಕಥೆಗಳಿಂದ ದೂರವೇ ಉಳಿದು ಕೇವಲ ಧಾರವಾಹಿಗಳಿಗೆ ಸೀಮಿತ ಆಗಿದ್ದರೆ, ಇನ್ನು ಅಜ್ಜಂದಿರು ಸಂಜೆಯ ಪಾರ್ಕ್‌ಗಳಲ್ಲಿ ಒಂಟಿತನದಿಂದ ಬಳಲುವ ಅಸಹಾಯಕತೆಗೆ ಈಡಾಗಿರುತ್ತಾರೆ. ಮಕ್ಕಳ ಟಿ.ವಿ. ಛಾನಲ್‌ಗಳ ಕಾರ್ಟೂನ್‌ಗಳಲ್ಲಿ, ಕಂಪ್ಯೂಟರ್ ವಿಡಿಯೋ ಗೇಮ್‌ಗಳಲ್ಲಿ, ಸೆಲ್‌ಫೋನ್‌ಗಳಲ್ಲಿ ಮಕ್ಕಳಿಗೆಂದೇ ಮೀಸಲಾದ ಕೆಲ ಆ್ಯಪ್ಸ್‌ಗಳಲ್ಲಿ ಕಾಲ ಕಳೆಯುತ್ತ ಮನೆಯೊಳಗಿದ್ದು ಮನೆಯವರಂತಾಗದೇ ಕೋಣೆಯ ಕೂಸುಗಳಾಗಿ ಬೆಳೆಯುತ್ತಿರುವಾಗ 'ಅಜ್ಜನ ಕೋಲಿದು ನನ್ನಯ ಕುದುರೆ' ಎಂದು ಹಾಡುವ ಪ್ರಮೇಯವೇ ಬರುವುದಿಲ್ಲ. ಇನ್ನು ಕೆಲ ಮನೆಗಳಲ್ಲಿ ಅಜ್ಜ-ಅಜ್ಜಿಯರೆಂದರೆ ಮಕ್ಕಳನ್ನು ಮನೆಯನ್ನು ನೋಡಿಕೊಳ್ಳುವ ಸೆಕ್ಯುರಿಟಿಗಾರ್ಡ್‌ಗಳಿದ್ದಂತೆ. ಇದು ವಿಷಾದನೀಯವೇ ಸರಿ. ಅಜ್ಜ-ಅಜ್ಜಿಯರು ಗೋಡೆಯ ಮೇಲಿನ ಭಾವಚಿತ್ರವಾಗುವ ಮುನ್ನವೇ ಮಕ್ಕಳ ಬದುಕಿಗೆ ಅನುಭವದ ಕಣಜಗಳಾಗಬೇಕಿದೆ. ಸಂಬಂಧಗಳಿಂದ ದೂರ ನಿಂತು ಬೆಳೆದ ವ್ಯಕ್ತಿಗೆ ಭ್ರಮನಿರಸನ ಉಂಟಾಗಬಹುದು. ಈ ಹಿನ್ನೆಲೆಯಲ್ಲಿ ಅಜ್ಜ-ಅಜ್ಜಿಯರ ಸಂಬಂಧಗಳ ಮೌಲ್ಯವನ್ನು ತಿಳಿಸುವ ಅಜ್ಜ-ಅಜ್ಜಿಯರನ್ನು ಕುರಿತಾದ ಮಕ್ಕಳ ಪದ್ಯಗಳು ಅವರ ಅಜ್ಜಿ-ತಾತರನ್ನು ನೆನಪಿಗೆ ತಂದರೆ ಅಲ್ಲಿಯೇ ಮಕ್ಕಳ ಕಾವ್ಯದ ಸಾರ್ಥಕತೆ ಅಡಗಿದೆ ಎನಿಸುತ್ತದೆ.

## ಬೇಸಿಗೆ ರಜೆಯಲಿ

ಬೇಸಿಗೆ ರಜೆಯು ಬಂದಿತೆಂದರೆ
ಹೋಗುವೆ ಅಜ್ಜನ ಮನೆಗೆ
ಅಜ್ಜ ಅಜ್ಜಿಯರು ಅಕ್ಕರೆಯಿಂದಲಿ
ಸ್ವಾಗತ ಕೋರುವರೆನಗೆ

ಬೆಳಗಿನ ಜಾವವೆ ಅಜ್ಜನ ಸಂಗಡ
ಹೋಗುವೆ ತೋಟದ ಬಳಿಗೆ
ಬಗೆ ಬಗೆ ಹೂಗಿಡ ಮರಗಳು ಇರುವವು
ಹಸುರಿನ ತೋಟದ ಒಳಗೆ

ತೋಟದ ಬದುವಲಿ ಜಿಗಿಜಿಗಿದಾಡುತ
ನಡೆಯುವ ಗದ್ದೆಯ ಬದಿಗೆ

ಗಾಳಿಗೆ ಕಿಲಿಕಿಲ ನಗುವವು ಭತ್ತದ
ತೆನೆಗಳು ಪೈರಿನ ತುದಿಗೆ

ತೋಟದ ಮಾವು ಹಲಸು, ತೆಂಗುಗಳು
ಹರುಷವ ತರುವವು ಎನಗೆ
ಹಣ್ಣನು ತಿಂದು ನೀರನು ಕುಡಿದು
ಮರಳುವೆ ನಲಿಯುತ ಮನೆಗೆ

ಅಜ್ಜಿಯು ಸಿಹಿ ಸಿಹಿ ತಿಂಡಿಯ ಕೊಡುವಳು
ಮಮತೆಯಲೆನ್ನಯ ಕೈಗೆ
ಕೂಡಲೆ ಖುಷಿಯಲಿ ಗಬಗಬ ತಿನ್ನುವೆ
ಬಿಡುವೆ ನೀಡದೆ ಬಾಯ್ಗೆ

ಸಂಜೆಗೆ ಆಟಿಗೆ ರಾಶಿಯ ನಡುವೆ
ಆಡುವೆ ಅಜ್ಜನ ಜೊತೆಗೆ
ಮಲಗುವ ಮೊದಲು ಮಾರು ಹೋಗುವೆ
ಅಜ್ಜಿಯು ಹೇಳುವ ಕಥೆಗೆ[೫]

ಉದ್ಯೋಗ ಅರಸಿ ನಗರಗಳಿಗೆ ವಲಸೆ ಹೋದ ತಂದೆ-ತಾಯಿಗಳ ಮಕ್ಕಳು ಬೇಸಿಗೆ ರಜೆಯಲ್ಲಿ ಮಾತ್ರ ಅಜ್ಜನ ಊರಿಗೆ ತೆರಳಿ ಅಜ್ಜ-ಅಜ್ಜಿಯನ್ನು ಕಾಣುವ ಪ್ರಸಂಗಗಳು ನಮ್ಮ ಕಣ್ಣ ಮುಂದಿವೆ. ಹಳ್ಳಿಯಲ್ಲಿನ ಅಜ್ಜನ ತೋಟ, ತೋಟದ ಬಾವಿಯಲ್ಲಿನ ಈಜು ಕಲಿಯುವುದು ಈ ಬಗೆಯ ಸಂಗತಿಗಳು ಸಮಾಜ ಪರಿಸರಗಳೆಂಬ ಶಾಲೆಯ ಅನೌಪಚಾರಿಕ ಶಿಕ್ಷಣದ ಭಾಗವಾಗಿ ಮಕ್ಕಳ ಪಠ್ಯೇತರ ಚಟುವಟಿಕೆಗಳನ್ನು ಚುರುಕಾಗಿಸುತ್ತದೆ. ತೋಟದಲ್ಲಿನ ಮಾವು, ಹಲಸು ವಿಧ ವಿಧ ಹಣ್ಣುಗಳನ್ನು ಸವಿಯುವುದು, ಜಾಜಿ ಮಲ್ಲಿಗೆ, ಸಂಪಿಗೆ, ಕನಕಾಂಬರಿ, ಚೆಂಡು ಹೂವು ಹೀಗೆ ತರತರ ಹೂಗಳ ನೋಟ ಹೀಗೆ ಅಜ್ಜನ ಊರಿನ ಹತ್ತು ಹಲವು ಅನುಭವಗಳು ನಗರಗಳಲ್ಲಿ ಬೆಳೆದಿದ್ದ ಮಕ್ಕಳಿಗೆ ಹೊಸದೊಂದು ಲೋಕದ ದರ್ಶನ ಮಾಡಿಸುತ್ತವೆ. ಪ್ರಸ್ತುತ ಪದ್ಯದಲ್ಲಿನ ಕೊನೆಯ ಸಾಲುಗಳು ವರ್ಷವಿಡಿ ಔಪಚಾರಿಕ ಶಿಕ್ಷಣದಿಂದ ಬೇಸತ್ತ ಮಕ್ಕಳಿಗೆ ಬೇಸಿಗೆಯ ರಜೆಯ ಕ್ಷಣಗಳು ಸುಂದರ ಬಾಲ್ಯವನ್ನು ತಂದು ಕೊಡುವ ಇಂಗಿತದ ಅಭಿವ್ಯಕ್ತಿ ಇಲ್ಲಿದೆ. ಈ ಬಗೆಯ ಅಭಿವ್ಯಕ್ತಿಯನ್ನು ಮಕ್ಕಳ ಕಾವ್ಯ ಒಳಗೊಳ್ಳುವ ಮೂಲಕ ಮಕ್ಕಳಿಗೆ ಮತ್ತೆ ಅಜ್ಜ-ಅಜ್ಜಿಯರ ನೆನಪುಗಳನ್ನು ಮರುಕಳಿಸುವುದರ ಜೊತೆಗೆ ಬಾಂಧವ್ಯದ ಬಳ್ಳಿ ಸದಾ ಹಸಿರಾಗಿರಲು ನೀರೆರೆಯುವ ಕೆಲಸವನ್ನೇ ಮಾಡಲಾಗುತ್ತಿದೆ.

### ೫.೨. ಆನ್ವಯಿಕ ನೆಲೆ

ಕೌಟುಂಬಿಕ ನೆಲೆಯ ಬಂಧುತ್ವದ ಪರಿಕಲ್ಪನೆ ಒಂದು ಸೀಮಿತ ಚೌಕಟ್ಟಿಗೆ ಒಳಪಟ್ಟರೆ, ಆನ್ವಯಿಕ ನೆಲೆಯ ಬಂಧುತ್ವದ ಪರಿಕಲ್ಪನೆ ಒಂದು ವಿಶಾಲಾರ್ಥದ ಬಹುಮುಖಿ ನೆಲೆಯ

ದೃಷ್ಟಿಕೋನಗಳನ್ನು ತನ್ನೊಳಗೆ ಹುದುಗಿಸಿಟ್ಟುಕೊಂಡಿದೆ. ಕೌಟುಂಬಿಕ ನೆಲೆಯಲ್ಲಿ ಅಜ್ಜ-ಅಜ್ಜಿ, ಅಕ್ಕ-ತಂಗಿ, ಚಿಕ್ಕಪ್ಪ-ಚಿಕ್ಕಮ್ಮ, ದೊಡ್ಡಪ್ಪ-ದೊಡ್ಡಮ್ಮ, ಅತ್ತೆ-ಮಾವ, ತಂದೆ-ತಾಯಿ ಹೀಗೆ ರಕ್ತ ಸಂಬಂಧಗಳು ಹಾಗೂ ನೆಂಟಸ್ತಿಕೆಯ ಸಂಬಂಧಗಳು ಒಳಪಡುತ್ತವೆ. ಆದರೆ ಆನ್ವಯಿಕ ನೆಲೆಯಲ್ಲಿ ತನ್ನ ರಕ್ತ ಸಂಬಂಧ ಹಾಗೂ ನೆಂಟಸ್ತಿಕೆಯ ಸಂಬಂಧಗಳಾಚೆಗೆ ತನಗೆ ಪ್ರಿಯವಾಗುವ ವಸ್ತು, ವಿಷಯ, ಸಂಗತಿಗಳು, ಪರಿಸರವನ್ನು ಬಾಂಧವ್ಯದ ನೆಲೆಯಲ್ಲಿ ಭಾವಿಸುವ, ಸಂಬಂಧಗಳನ್ನು ಕಲ್ಪಿಸುವ, ಅನ್ವಯಿಸಿಕೊಳ್ಳುವ ನೆಲೆಯೇ ಈ ಆನ್ವಯಿಕ ನೆಲೆಯಾಗಿದೆ. ಅಮೃತೇಶ ತಂಡರವರ 'ಕಂದನ ದೇಶಭಕ್ತಿ' ಎಂಬ ಕವಿತೆ ಆನ್ವಯಿಕ ನೆಲೆಯ ಬಾಂಧವ್ಯದ ಪರಿಕಲ್ಪನೆಗಳಲ್ಲೊಂದಾಗಿದೆ.

**ಕಂದನ ದೇಶಭಕ್ತಿ**

ಅಪ್ಪಾ..... ನನಗೂ ಕೋವಿಯ ಕೊಡಿಸು
ಸೈನಿಕನಾಗುವೆನು
ಒಪ್ಪಿಗೆ ನೀಡಿ ಆಶೀರ್ವದಿಸು
ಸೇನೆಗೆ ಸೇರುವೆನು!

ಚಳಿ, ಮಳೆ, ಗಾಳಿಗೆ ವಿಚಲಿತನಾಗದೆ
ಕಾವಲು ಕಾಯುವೆನು
ಪ್ರಾಣಕ್ಕಿಂತಲೂ ಮಿಗಿಲಾಗಿರುವ
ನನ್ನೀ ದೇಶವನು

ಪುಟ್ಟ ವಿಮಾನವ ಥಟ್ಟನೆ ಏರಿ
ನೆಟ್ಟಗೆ ಹಾರುವೆನು
ಒಟ್ಟಿಗೆ ಬಂದರೂ ಹಿಮ್ಮೆಟ್ಟಿಸುವೆ
ವೈರಿಯ ಪಡೆಯನ್ನು

ಗಡಿಯಲ್ಲಿ ನುಸುಳುವ ಉಗ್ರರನ್ನೆಲ್ಲ
ನಿಗ್ರಹ ಮಾಡುವೆನು
ಗುಂಡಿನ ಚಕಮಕಿ ನಡೆದರೆ ಸೂಕ್ತ
ಉತ್ತರ ನೀಡುವೆನು

ಅಮ್ಮಾ ನೋಡೆ ತೋರುವೆ ನಿನಗೆ
ನನ್ನೀ ಶೌರ್ಯವನು
ನೆಮ್ಮದಿ ಕದಡುವ ವೈರಿಗೆ ತಕ್ಕ
ಪಾಠವ ಕಲಿಸುವೆನು

ಬಾಲಕನಾದರೂ ಬಲದಲಿ ಮೇಲು
ಸಿಂಹದ ಮರಿ ನಾನು

ಭಾರತ ಮಾತೆಯ ಸುಪುತ್ರನೆಂದು
ಕರೆವರು ನನ್ನನ್ನು'

ನಮ್ಮತನವನ್ನೇ ಕಳೆದುಕೊಳ್ಳುತ್ತಿರುವ ಈ ಖಾಲಿ ವರ್ತಮಾನದಲ್ಲಿ ಮತ್ತೆ ಮಕ್ಕಳೊಳಗೆ 'ದೇಶ ನನ್ನದು' ಎಂಬ ಬಾಂಧವ್ಯದ ಕಲ್ಪನೆಯನ್ನು ಮೂಡಿಸುವ ಕೆಲಸವನ್ನು ಮಕ್ಕಳ ಕಾವ್ಯ ಮಾಡಿದೆ. ಇಂದು ಎಲ್ಲಾ ಪೋಷಕರು ತಮ್ಮ ಮಕ್ಕಳನ್ನು ಇಂಜಿನಿಯರನ್ನಾಗಿಯೋ, ಡಾಕ್ಟರಗಳನ್ನಾಗಿಯೋ, ಒಟ್ಟಿನಲ್ಲಿ ಕನಿಷ್ಟ ಐದಂಕಿ ವೇತನದ ಉದ್ಯೋಗಿಯನ್ನಾಗಿ ಮಾಡುವ ಧಾವಂತದಲ್ಲಿದ್ದಾರೆಯೇ ಹೊರತು ನನ್ನ ಮಗ ಒಬ್ಬ ರೈತನಾಗಲಿ, ನನ್ನ ಮಗ ಸೈನಿಕನಾಗಲಿ, ನನ್ನ ಮಗ ಸೇವಕನಾಗಲಿ ಎಂಬ ಆಶಯ ಇಂದು ಬಹುಜನರಿಂದ ದೂರವೇ ಉಳಿದಿದೆ. ಹಣದ ಹಿಂದೆ ಓಡುವ ಜೀವನಕ್ರಮದ ತವಕದಲ್ಲಿರುವ ನಾವು ಮೌಲ್ಯಗಳನ್ನು ಬಹಳ ಹಿಂದಕ್ಕೆ ತಳ್ಳುವ, ಮೂಲೆಗುಂಪು ಮಾಡುವ ಮೂಲಕ ಸಮಾಜವನ್ನು ಮತ್ತೆ ಅಸ್ಥಿರತೆಯ ಕಡೆಗೆ ತಳ್ಳುವ ಪ್ರಯತ್ನ ಮಾಡಲಾಗುತ್ತಿದೆ. ಇದು ದೇಶದ ಬೆಳವಣಿಗೆಯ ದೃಷ್ಟಿಯಿಂದ ತುಂಬಾ ಅಪಾಯಕಾರಿಯಾದುದು. ಈ ಬಗೆಯ ಎಲ್ಲ ಅಹಿತಕರ ಬೆಳವಣಿಗೆಯಿಂದ ಮುಕ್ತಗೊಳಿಸುವ ಸುಲಭ ಮಾರ್ಗಗಳಲ್ಲೇ ಮಕ್ಕಳ ಕಾವ್ಯದ ಪಾತ್ರ ಅಗಾಧವಾದುದಾಗಿದೆ. ರಾಷ್ಟ್ರ ಪ್ರೇಮದ ಬಾಂಧವ್ಯದ ಕಲ್ಪನೆಗಳನ್ನು ಮತ್ತೆ ಮೊಳಕೆಯೊಡೆಯಿಸುವ ಕಾರ್ಯವನ್ನು ಈ ಮಕ್ಕಳ ಕಾವ್ಯ ಮಾಡುತ್ತದೆ. ಇದು ಈ ಹೊತ್ತಿನ ಬಹಳ ದೊಡ್ಡ ತುರ್ತು ಹೌದು.

ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರ ಕವಿತೆಯೊಂದು ಗುರು-ಶಿಷ್ಯರ ಬಾಂಧವ್ಯದ ಪರಿಯನ್ನು ಹೀಗೆ ತೆರೆದು ತೋರಿಸುತ್ತದೆ.

**ಭಾಳ ಒಳ್ಳೋರ್ ನಮ್ ಮಿಸ್ಸು**

ಭಾಳ ಒಳ್ಳೋರ್ ನಮ್ ಮಿಸ್ಸು
ಏನ್ ಹೇಳಿದ್ರೂ ಎಸ್ಸೆಸು,
ನಗ್ತಾ ನಗ್ತಾ ಮಾತಾಡ್ತಾರೆ
ಸ್ಕೂಲಿಗೆಲ್ಲ ಫೇಮಸ್ಸು

ಜಾಣಮರಿ ಅಂತಾರೆ
ಜಾಕ್ಲೇಟಿದ್ರೆ ಕೊಡ್ತಾರೆ,
ಬೆನ್ನು ತಟ್ಟಿ ಕೆನ್ನೆ ಸವರಿ
ಬೆಣ್ಣೆ ಕಂದ ಅಂತಾರೆ!

ಆಟಕ ಬಾ ಅಂತಾರೆ
ಆಟದ ಸಾಮಾನ ಕೊಡ್ತಾರೆ
ಗೊತ್ತಿಲ್ದಂಗೆ ಆಟದ್ ಜೊತೆ
ಪಾಠಾನೂ ಕಲಿಸ್ತಾರೆ!

ನಮ್ಜೊತೇನೇ ಆಡ್ತಾರೆ
ಕೈ ಕೈ ಹಿಡಿದು ಹಾಡ್ತಾರೆ,
ಕೋತಿ ಕರಡಿ ಕಥೆ ಹೇಳಿ
ಸಿಕ್ಕಾಪಟ್ಟೇ ನಗಿಸ್ತಾರೆ

ಮಗುವೊಂದರ ಬೆಳವಣಿಗೆಯಲ್ಲಿ ಕೌಟುಂಬಿಕ ಹಾಗೂ ಸಾಮಾಜಿಕ ಪರಿಸರಗಳು ಎಷ್ಟು ಮುಖ್ಯವೋ ಶೈಕ್ಷಣಿಕ ವಾತಾವರಣವೂ ಸಹ ಅಷ್ಟೇ ಮುಖ್ಯವಾಗಿರುತ್ತದೆ. ಮಗು ಮನೆಯಲ್ಲಿ ಎಷ್ಟು ಹೊತ್ತು ತನ್ನ ತಂದೆ-ತಾಯಿಗಳ ಜೊತೆ, ಕುಟುಂಬದ ಸದಸ್ಯರ ಜೊತೆ ಕಾಲ ಕಳೆಯುತ್ತದೆಯೋ ಅಷ್ಟೇ ಹೊತ್ತು ಶಾಲೆಯ ಪರಿಸರದಲ್ಲಿನ ತನ್ನ ಗುರುಗಳು ಹಾಗೂ ಸ್ನೇಹಿತರ ಜೊತೆ ಕಳೆಯುತ್ತದೆ. ಮಗುವಿನ ಬೌದ್ಧಿಕ ಬೆಳವಣಿಗೆಯಲ್ಲಿ ಗುರುಗಳು ಪ್ರಮುಖ ಪಾತ್ರ ವಹಿಸುತ್ತಾರೆ. ಈ ಹಿನ್ನೆಲೆಯಲ್ಲಿ ಗುರು-ಶಿಷ್ಯರ ಸಂಬಂಧಗಳು ಹೆಚ್ಚು ಅನ್ಯೋನ್ಯತೆಯಿಂದ ಕೂಡಿರಬೇಕಾಗುತ್ತದೆ. ಕಾರಣ 'ಕಲಿಕೆ' ಎಂಬುದು ಮಗುವಿನ ಸ್ವತಂತ್ರ ಪ್ರಕ್ರಿಯೆಯಲ್ಲ, ಬದಲಿಗೆ ಅದು ಶಾಲಾ ವಾತಾವರಣದಲ್ಲಿ ವಸ್ತು, ವಿಷಯ, ಸಂಗತಿ, ಸಂದರ್ಭಗಳನ್ನು ಹಾಗೂ ಕೌಟುಂಬಿಕ ಪರಿಸರದಲ್ಲಿ ತನ್ನ ಮನೆಯ ಸದಸ್ಯರನ್ನು ಅವಲಂಬಿಸಿರುತ್ತದೆ. ಕಲಿಕೆಯ ಈ ಅವಲಂಬನೆಯಿಂದಾಗಿ ಸಹಜವಾಗಿಯೇ ಮಗು ಹೆಚ್ಚು ಹೊತ್ತು ಗುರುವಿನ ಜೊತೆಯಲ್ಲಿಯೇ ಇರಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಗುರು-ಶಿಷ್ಯರ ಸಂಬಂಧಗಳು ಪ್ರೀತಿಯಿಂದ ಕೂಡಿದ್ದರೆ ಕಲಿಕೆಯ ಹಾದಿಯು ಸುಗಮವಾಗುತ್ತದೆ. ಭಟ್ಟರ ಈ ಕವಿತೆಯು ಈ ಚಿತ್ರಣವನ್ನೇ ನೀಡಿದೆ. ಈ ಬಗೆಯ ಕವಿತೆಗಳು ಗುರುಗಳ ಬಗೆಗಿನ ಅಭಿಮಾನವನ್ನು, ಪ್ರೀತಿಯನ್ನು ನವಿರುಗೊಳಿಸುವ ಸಾಧ್ಯತೆಗಳೇ ಹೆಚ್ಚು. ಮಕ್ಕಳ ಕಾವ್ಯದ ಸಾರ್ಥಕತೆ ಅಡಗಿರುವುದು ಸಹ ಈ ಅಂಶಗಳಲ್ಲೇ ಎಂಬುದನ್ನು ನಾವು ಗಮನಿಸಬೇಕಾಗುತ್ತದೆ.

ಗುರುಗಳು ಮಕ್ಕಳನ್ನು ಮೋಹಿಸುವ, ವಿದ್ಯಾರ್ಥಿ ತನ್ನ ಗುರುಗಳ ಮೇಲೆ ಹಲ್ಲೆ ನಡೆಸುವ ದುರಂತ ಕಾಲಘಟ್ಟದ ನಡುವೆಯು ಗುರುಗಳ ಬಗೆಗೆ ಗೌರವವನ್ನು ಉಳಿಸಿ ಬೆಳೆಸುವಲ್ಲಿ ಮಕ್ಕಳ ಕಾವ್ಯದ ಶಕ್ತಿ ಅಪರಿಮಿತವಾದುದಾಗಿದೆ ಎಂದು ಹೇಳಬಹುದು.

ಮನುಷ್ಯನ ಸಂಬಂಧಗಳು ಈ ಹೊತ್ತು ವಾಣಿಜ್ಯೀಕರಣದ ಸ್ವರೂಪವನ್ನು ಪಡೆದಿವೆ. ಒಂದು ಬಗೆಯ ಲೆಕ್ಕಾಚಾರವೂ ಈ ಸಂಬಂಧಗಳ ಬೆಸುಗೆಯ ಹಿಂದೆ ಅಡಗಿದೆ. ಆದರೆ ಮಕ್ಕಳು ತನಗೆ ಇಷ್ಟವಾಗುವ ಎಲ್ಲ ವಸ್ತು, ವಿಷಯ, ವ್ಯಕ್ತಿಗಳನ್ನು ಅಂತರದಿಂದ ನೋಡದೇ ಬದಲಿಗೆ ತನ್ನ ಬಾಂಧವ್ಯದ ಪರಿಧಿಯೊಳಗೆ ಸುತ್ತಿಕೊಳ್ಳುವ, ನೆಂಟಿನ ಬಣ್ಣವನ್ನು ಹಚ್ಚುವ ಕೆಲಸವನ್ನು ಮಾಡುತ್ತವೆ. ಪ್ರೀತಿಯನ್ನು ಹೊರತುಪಡಿಸಿ ಇದು ಎಲ್ಲ ಬಗೆಯ ಫಲಾಪೇಕ್ಷೆಗಳನ್ನು ಮೀರಿದ್ದಾಗಿದೆ. ಇಂಥ ಒಂದು ಚಿತ್ರಣ ಡಾ. ಎಲ್.ಜಿ. ಮೀರಾರವರ 'ಬಲೂನು ಹಾಡು' ಎಂಬ ಕವಿತೆಯೊಂದರಲ್ಲಿದೆ.

## ಬಲೂನೂ ಹಾಡು

ಕೆಂಪು ಬಲೂನು ಹಸಿರು ಬಲೂನು ಹ್ಯಾಗಿದ್ರೂನೂ ಇಷ್ಟಾನೇ
ದಿನಕೊಂದ ಸಾರಿ ಬಲೂನು ಮಾಮ ಬರದೆ ಹೋದ್ರೆ ಕಷ್ಟಾನೇ

ನೀಲಿ ಬಲೂನು ಹಳದಿ ಬಲೂನು ಹ್ಯಾಗಿದ್ರೂನೂ ಇಷ್ಟಾನೇ
ದಿನಕೊಂದ್ಸಾರಿ ಬಲೂನು ಮಾಮ ಬರದೆ ಹೋದ್ರೆ ಕಷ್ಟಾನೇ

ದಪ್ಪ ಬಲೂನು ಪುಟ್ಟ ಬಲೂನು ಹ್ಯಾಗಿದ್ರೂನೂ ಇಷ್ಟಾನೇ
ದಿನಕೊಂದ್ಸಾರಿ ಬಲೂನು ಮಾಮ ಬರದೆ ಹೋದ್ರೆ ಕಷ್ಟಾನೇ

ಹಾರೋ ಬಲೂನು ಜಾರೊ ಬಲೂನು ಹ್ಯಾಗಿದ್ರೂನೂ ಇಷ್ಟಾನೇ
ದಿನಕೊಂದ್ಸಾರಿ ಬಲೂನು ಮಾಮ ಬರದೆ ಹೋದ್ರೆ ಕಷ್ಟಾನೇ

ದೂರದಲ್ಲೆಲ್ಲೋ ಬಲೂನು ಮಾಮ ಕೂಗಲು ತಕ್ಷಣ ಓಡುವೆವು
ಬಲೂನು ಕೊಡಿಸು ಬಲೂನು ಕೊಡಿಸು ಎನ್ನುತ ಅಮ್ಮನ ಕಾಡುವೆವು

ಆಗಲಿ ಎಂದು ಅಮ್ಮ ಬಲೂನು ಕೊಡಿಸಲು ಕುಣಿಕುಣಿದಾಡುವೆವು
ಅಮ್ಮನ ಕೆನ್ನೆಗೆ ಮುತ್ತನು ಕೊಟ್ಟು ಆಡಲು ಹೊರಗೆ ಓಡುವೆವು

ಬಲೂನು ದಾರವ ಹಿಡಿದೇ ನಾವು ಚಂದ್ರನ ಲೋಕಕೆ ಹಾರುವೆವು
ಕಾಮನಬಿಲ್ಲಿನ ಕೊಂಬೆಯ ಜೀಕಿ ಉಯ್ಯಾಲೆಯಾಟ ಆಡುವೆವು

ಹಾಗೆ ನೋಡಿದರೆ ಇಲ್ಲಿ ಬರುವ ಬಲೂನು ಮಾರುವ ವ್ಯಕ್ತಿಗೂ ಮತ್ತು ಮಗುವಿಗೂ ನಡುವೆ ಇರುವುದು ಕೊಡುಕೊಳ್ಳುವಿಕೆಯ ಸಂಬಂಧವಾದರೂ ಮಗು ಮಾತ್ರ ಈ ಕೊಡು-ಕೊಳ್ಳುವಿಕೆಯಾಚೆಗೆ ನಿಂತು ಬಲೂನು ಮಾರುವ ವ್ಯಕ್ತಿಯನ್ನು 'ಮಾಮ' ಎಂದು ಸಂಬೋಧಿಸುವ ಮೂಲಕ ಬಾಂಧವ್ಯದ ನೆಂಟನ್ನು ಬೆಸೆಯ ಹೊರಡುತ್ತದೆ. ಈ ಬಗೆಯ ಬೆಸುಗೆ ಹಾಗೆ ಸುಖಾಸುಮ್ಮನೆ ಮೂಡುವಂತದ್ದಲ್ಲ. ಅಗಾಧ ಮಾನವೀಯ ಅಂತಃಕರಣದ ಜೀವಪರ ಕಾಳಜಿಯ ಉದಾತ್ತ ಚಿಂತನೆಯ ಫಲದಿಂದ ಮೂಡುವಂತದ್ದಾಗಿದ್ದು ಸಾಮಾಜಿಕ ಸಹಬಾಳ್ವೆಗೆ ನಾಂದಿ ಹಾಡುವಂತದ್ದಾಗಿದೆ. ಹಣ ಮತ್ತು ವಸ್ತು, ಗ್ರಾಹಕ ಮತ್ತು ವ್ಯಾಪಾರಿ ಎಂಬ ವಾಣಿಜ್ಯದ ಪರಿಕಲ್ಪನೆಗಳ ಆಚೆಗೆ ಏಕಕಾಲಕ್ಕೆ ತನಗೆ ಪ್ರಿಯವಾದ ವಸ್ತು(ಬಲೂನು) ಹಾಗೂ ವ್ಯಕ್ತಿ (ಬಲೂನು ಮಾರುವವರ)ಯ ನಡುವೆ ಬಾಂಧವ್ಯದ ಸೆಲೆಯನ್ನು ಉಕ್ಕಿಸುವ ಮಕ್ಕಳ ಕಾವ್ಯದ ಬಾಂಧವ್ಯದ ಪರಿಯೇ ಅನನ್ಯವಾದುದು. ಈ ಕಾರಣಕ್ಕಾಗಿಯೇ ಮಕ್ಕಳ ಕಾವ್ಯವು ಸಾರ್ವಕಾಲಿಕ ಜಗತ್ತಿನ ಸತ್ಯವಾಗಿ, ಪ್ರಸ್ತುತತೆಯಾಗಿ ಮತ್ತೆ ಮತ್ತೆ ನಮ್ಮನ್ನು ಕಾಡುತ್ತ, ನಮ್ಮೊಳಗನ್ನು ಎಚ್ಚರಿಸುವ ಕೆಲಸ ಮಾಡುತ್ತದೆನ್ನುವುದು. ಈ ಬಗೆಯ ಬಾಂಧವ್ಯದ ಪರಿಕಲ್ಪನೆಯಲ್ಲಿ ಎಲ್ಲಾ ಮಕ್ಕಳು ಬೆಳೆದರೆ ಸಮಾಜ ಸ್ವಾಸ್ಥ್ಯವಾಗಿರುವುದರಲ್ಲಿ ತಿಲ ಮಾತ್ರದ ಸಂಶಯವು ಮೂಡಲಾರದು.

ದೊಡ್ಡಣ್ಣ ಗದ್ದನಕೇರಿಯವರ ಮಕ್ಕಳ ಕಾವ್ಯವೊಂದು ಬಾಂಧವ್ಯದ ಇನ್ನೊಂದು ಸ್ವರೂಪವನ್ನು ನಮ್ಮೆದುರು ತೆರೆದಿಡುತ್ತದೆ.

**ಕನ್ನಡಮ್ಮನ ಮಕ್ಕಳು**

ಕನ್ನಡ ತಾಯಿಯ ಮಕ್ಕಳು ನಾವು
ಪ್ರೀತಿಯ ಗಂಧವ ಸೂಸುವೆವು
ಸಮರಸದಿಂದಲಿ ಮನಗಳ ಬೆಸೆಯುತ
ನಾಡಿನ ಸಿರಿಯನು ಬೆಳಗುವೆವು

ನಾನೀ ಎಂಬುವ ಬೇಧವ ಮರೆಯುತ
ಮಾತೆಯ ವೈಭವ ಮೆರೆಸುವೆವು
ಕನ್ನಡವೇ ನಮ್ಮುಸಿರೆಂದೆನುತಲಿ
ತಾಯಿಯ ಮಡಿಲಲಿ ಸುಖಿಸುವೆವು

ಮುದದಿಂದಲಿ ಕನ್ನಡವನು ನುಡಿಯುತ
ಹೆಮ್ಮೆಯ ಭಾವದಿ ಬೀಗುವೆವು
ಕನ್ನಡತನದಲಿ ಮನವನು ಅರಳಿಸಿ
ಐಕ್ಯತೆ ಡಂಗುರ ಸಾರುವೆವು

ಇಳೆಯಲಿ ಎಲ್ಲೆಡೆ ಕನ್ನಡ ದೀಪವ
ಸಂತತ ಹರುಷದಿ ಬೆಳಗುವೆವು
ಕನ್ನಡ ನಾಡಿನ ಗತ ವೈಭವವನು
ಜಗದುದ್ದಗಲದಿ ಪಾಡುವೆವು

ನಾಡು-ನುಡಿಯನ್ನು ಪ್ರೀತಿಸುವುದು, ಪೋಷಿಸುವುದು ಪ್ರತಿಯೊಬ್ಬ ನಾಗರಿಕನ ಹೊಣೆಯಾಗಿದೆ. ಬಹುಶಃ ನಾವು ಈ ಹೊತ್ತು ಈ ಬಗೆಯ ಸಾಮಾಜಿಕ-ಸಾಂಸ್ಕೃತಿಕ ಜವಾಬ್ದಾರಿಗಳಿಂದ ನುಣುಚಿಕೊಳ್ಳುವ ಪ್ರಯತ್ನ ಮಾಡುತ್ತ 'ನಾನು-ನನ್ನ ಸಮಾಜ' ಎನ್ನಬೇಕಾಗಿದ್ದ ನಾವುಗಳು 'ನಾನು ನನ್ನ ಕುಟುಂಬ' ಎಂಬ ಸಂಕುಚಿತ ದೃಷ್ಟಿ ಧೋರಣೆಗಳಲ್ಲೇ ಬದುಕುತ್ತ ಸಾಮಾಜಿಕ ಹಿತಾಸಕ್ತಿಯ ಮೌಲ್ಯಗಳನ್ನು ಮೂಲೋತ್ಪಾಟನೆ ಮಾಡುವ ಕೆಲಸಕ್ಕೆ ಕೈ ಹಾಕಿರುವಂತೆ ತೋರುತ್ತದೆ. ಈ ಬಗೆಯ ಸ್ಥಗಿತ ಚಿಂತನೆಗಳಿಂದ ನಾಡು-ನುಡಿ ಎರಡೂ ಬೆಳೆಯಲಾರವು. ಹಾಗಾಗಿ ನಮ್ಮ ನಾಳೆಯ ಬೆಳಕಿನ ಸಾಕಾರ ರೂಪಗಳಾದ ಮಕ್ಕಳಲ್ಲಿ ನಾಡು-ನುಡಿಯ ಪ್ರಜ್ಞೆಯನ್ನು ಮೂರ್ತಗೊಳಿಸುವಲ್ಲಿ, ಜಾಗೃತಗೊಳಿಸುವಲ್ಲಿ ಮಕ್ಕಳ ಕಾವ್ಯದ್ದು ಸಿಂಹಪಾಲು. ಪ್ರಸ್ತುತ ಕಾವ್ಯದಲ್ಲಿ ನಾಡನ್ನು ಕೇವಲ ನಾಡೆಂದು ಭಾವಿಸದೇ, ನುಡಿಯನ್ನು ಕೇವಲ ನುಡಿಯೆಂದು ಭಾವಿಸದೇ ಅದನ್ನು "ಮಾತೃಶ್ರೀ" ನೆಲೆಯಲ್ಲಿ ನೋಡುತ್ತ ತಾಯ್ನೆಲ, ತಾಯ್ನುಡಿಗಳೆಂಬ ವಿಶಾಲ ಬಾಂಧವ್ಯದ

ಬೆಳಕಿನಲ್ಲಿ ಪ್ರೀತಿಸುವ ಗುಣ ತುಂಬಾ ಔಚಿತ್ಯಪೂರ್ಣವಾದುದಾಗಿದೆ. ಹೆತ್ತ ತಾಯಿಯೊಂದೇ ನಮ್ಮ ತಾಯಿಯಲ್ಲ, ಅದರಾಚೆಗೆ ನಾವು ಬದುಕಲು ಅನ್ನ ನೀಡಿದ, ನಾವು ವಾಸಿಸಲು ಸ್ಥಳಾವಕಾಶ ನೀಡಿದ ಈ ನೆಲವು ಸಹ ನಮ್ಮ ಹೆತ್ತ ತಾಯಿ ಸಮಾನವಾದುದೆಂಬ ಮಕ್ಕಳ ಕಾವ್ಯದ ಪರಿಕಲ್ಪನೆ ಬಾಂಧವ್ಯದ ಹಿರಿಮೆಯನ್ನು ಎತ್ತಿ ತೋರಿಸುತ್ತದೆ.

ಕನ್ನಡ ಪ್ರೇಮ, ಕನ್ನಡ ಪ್ರಜ್ಞೆಗಳು ಕೇವಲ ಕನ್ನಡ ರಾಜ್ಯೋತ್ಸವದಂತಹ ಉತ್ಸವದ ಆಚರಣೆಯ ಒಂದು ಭಾಗವಾಗದೆ ಅದರಾಚೆಗೆ ಅದು ನಾವು ಉಸಿರಾಡುವ ಗಾಳಿಯಾಗಬೇಕಿದೆ. ಈ ಮೂಲಕ ಕನ್ನಡತನವೆಂಬುದು ಒಟ್ಟು ಕನ್ನಡಿಗರ ಐಕ್ಯತೆಯ ಸಂಕೇತವಾಗಬೇಕೆನ್ನುವ ಕಾವ್ಯದ ಸಂದೇಶವೂ ಅಪೂರ್ವವಾದುದಾಗಿದೆ. ಚಿಕ್ಕಂದಿನಿಂದಲೇ ಮಕ್ಕಳಿಗೆ ನಾಡು-ನುಡಿಯ ಬಗೆಗಿನ ಅರಿವನ್ನು ಮೂಡಿಸಿದರೆ ಮುಂದೆ ಎಂದಾದರೊಂದು ದಿನ ಅದು ಫಲ ಕೊಟ್ಟರೂ ಕೊಡಬಹುದು. ಈ ಅರಿವನ್ನು ಬಾಂಧವ್ಯದ ಪರಿಕಲ್ಪನೆಯಲ್ಲಿ ನೀಡಿದರಂತೂ ಅದು ಮತ್ತಷ್ಟು ಅರ್ಥಪೂರ್ಣ ಎನಿಸುತ್ತದೆ. ಈ ಬಗೆಯ ಎಲ್ಲ ಸಂಗತಿಗಳನ್ನು ಈ ಮಕ್ಕಳ ಕಾವ್ಯ ತನ್ನೊಳಗೆ ಅಡಕಗೊಳಿಸಿಕೊಂಡಿದೆ ಎನ್ನುವುದರಲ್ಲೇ ಇದರ ಮಹತ್ವವು ಇರುವುದು.

ನನ್ನದೆಂಬ ಭಾವವೇ ಬಾಂಧವ್ಯದ ಮೂಲಧಾತು. ಪ್ರೀತಿಯೇ ಈ ಬಗೆಯ ಬಾಂಧವ್ಯದ ಜೀವಾಳವಾಗಿರುತ್ತದೆ. ಕುವೆಂಪುರವರ 'ನನ್ನ ಮನೆ' ಎಂಬ ಮಕ್ಕಳ ಕವಿತೆಯೊಂದು ಬಾಂಧವ್ಯದ ಹೊಸದೊಂದು ಮಗ್ಗುಲನ್ನು ಮಕ್ಕಳಿಗೆ ಪರಿಚಯಿಸುತ್ತದೆ.

**ನನ್ನ ಮನೆ**

ಮನೇ ಮನೇ ಮುದ್ದು ಮನೇ
ಮನೇ ಮನೇ ನನ್ನ ಮನೇ!

ನನ್ನ ತಾಯಿಯೊಲಿದ ಮನೆ,
ನನ್ನ ತಂದೆ ಬಳೆದ ಮನೆಃ
ನನ್ನ ಗೆಳೆಯರೊಡನೆ ಕೂಡಿ
ಮುದ್ದು ಮಾತುಗಳನು ಆಡಿ
ಮಕ್ಕಳಾಟಗಳನು ಹೂಡಿ
ನಾನು ನಲಿದ ನನ್ನ ಮನೆ!

ನನ್ನ ಗಿರಿಜೆಯಿದ್ದ ಮನೆ,
ನನ್ನ ವಾಸುವಿದ್ದ ಮನೆಃ
ಮನೆಯ ಮುತ್ತಿ ಬರಲು ಚಳಿ
ಆಳು ಮಂಜ ಒಲೆಯ ಬಳಿ
ನಮ್ಮನೆಲ್ಲ ಕತೆಗಳಲಿ
ಕರಗಿಸಿದ್ದ ನನ್ನ ಮನೆ!

ತಾಯಿ ಮುತ್ತು ಕೊಟ್ಟ ಮನೆ,
ತಂದೆ ಎತ್ತಿಕೊಂಡ ಮನೆಃ
ಮನೆಗೆ ಬಂದ ನೆಂಟರೆಲ್ಲ
ಕೂಗಿ ಕರೆದು ಕೊಬರಿ ಬೆಲ್ಲ-
ಗಳನು ಕೊಟ್ಟು, ಸವಿಯ ಸೊಲ್ಲ-
ನಾಡುತ್ತಿದ್ದ ನನ್ನ ಮನೆ!

ನಾನು ನುಡಿಯ ಕಲಿತ ಮನೆ,
ನಾನು ನಡಿಗೆಯರಿತ ಮನೆಃ
ಹಕ್ಕಿ ಬಳಗ ಸುತ್ತ ಕೂಡಿ
ಬೈಗು ಬೆಳಗು ಹಾಡಿ ಹಾಡಿ
ಮಲೆಯ ನಾಡ ಸಗ್ಗ ಮಾಡಿ
ನಲಿಸುತ್ತಿದ್ದ ನನ್ನ ಮನೆ!

ನಾನು ಬಿದ್ದು ಎದ್ದ ಮನೆ,
ಮೊದಲು ಬೆಳಕ ಕಂಡ ಮನೆಃ
ತಿಪ್ಪ ತಿಪ್ಪ ಹೆಜ್ಜೆಯಿಟ್ಟು
ಬಿಸಿಲ ಕೋಲ ಹಿಡಿದು ಬಿಟ್ಟು
ತಂಗಿ ತಮ್ಮರೊಡನೆ ಹಿಟ್ಟು
ತಿಂದು ಬೆಳೆದ ನನ್ನ ಮನೆ![೧೦]

ಮನೆಯೆಂದರೆ ಕೇವಲ ಒಂದು ಕಟ್ಟಡವೆಂಬ ನಿರ್ಜೀವ ಕಲ್ಪನೆಗಳಾಚೆಗೆ ವ್ಯಕ್ತಿಯೊಬ್ಬನ ಬದುಕಿನ ಪಯಣದ ಸಹಚರನೆಂಬಂತೆ ಮನೆಯನ್ನು ಪರಿಭಾವಿಸುವುದಾದರೆ ನಮ್ಮ ಮಕ್ಕಳಿಗೆ ಮೊದಲು ಈ ಬಗೆಯ ಮಕ್ಕಳ ಪದ್ಯಗಳನ್ನು ಕೇಳಿಸಬೇಕಾಗಿದೆ. ಕೌಟುಂಬಿಕ ಪರಿಸರದೊಳಗಿನ ಒಟ್ಟು ಬಂಧುತ್ವದ ಮೂರ್ತರೂಪದಂತೆ ಮನೆಯನ್ನು ಇಲ್ಲಿ ಚಿತ್ರಿಸಲಾಗಿದೆ. ಮನೆಯೆಂಬ ಬಂಧು ನಮ್ಮಿಂದ ಪಡೆದಿದ್ದಕ್ಕಿಂತಲೂ ಅದರಿಂದ ನಾವು ಪಡೆದದ್ದೇ ಹೆಚ್ಚೆಂಬ ಧನ್ಯತಾ ಭಾವ ಇಡೀ ಪದ್ಯವನ್ನು ಆವರಿಸಿದೆ.

ಮಗುವೊಂದು ಸಮಾಜವನ್ನು, ನಿಸರ್ಗವನ್ನು ಸಂಧಿಸುವ ಮುನ್ನ, ಇವುಗಳ ಬಂಧುತ್ವದ ಬೆಸುಗೆಯೊಳಗೆ ಬಂಧಿಯಾಗುವ ಮುನ್ನ ಮುಖಾಮುಖಿಯಾಗುವ ಮಗುವಿನ ಮೊದಲ ಪ್ರಪಂಚ, ಮೊದಲ ಬಂಧು ಎಂದರೆ ಅದು ಈ ಮನೆಯೇ ಆಗಿರುತ್ತದೆ. ಮನೆ ಎಂಬುದು ನಮಗೆ ನಾವೇ ಮಾಡಿಕೊಂಡ ಭದ್ರವಾದ ಒಂದು ನೆಲೆ. ಇದನ್ನು ಕೇವಲ ನೈಸರ್ಗಿಕ ವಿಪತ್ತುಗಳಿಂದ ಪಾರಾಗುವ ರಕ್ಷಣೆಯ ನೆಲೆ ಎಂದು ಪರಿಭಾವಿಸದೇ ಅದರಾಚೆ ಮನೆ ನಮಗೆ ಕೊಟ್ಟ ಉಡುಗೊರೆಗಳಾದರೂ ಏನು ಎಂಬುದನ್ನು ನಾವಿಂದು ಆತ್ಮಾವಲೋಕನ ಮಾಡಿಕೊಳ್ಳುವತ್ತ ಇಡೀ ಪದ್ಯ ನಮ್ಮನ್ನು ಕರೆದೊಯ್ಯುತ್ತದೆ.

'ಮನೆಯೇ ಮೊದಲ ಪಾಠ ಶಾಲೆ' ಎಂಬ ಮಾತು ಸುಖಾಸುಮ್ಮನೆ ಹುಟ್ಟಿದ್ದಲ್ಲ. ಮನೆ ನಮಗೆ ಪ್ರೀತಿ, ಸ್ನೇಹ, ಶಿಕ್ಷಣ, ಸಾಹಿತ್ಯ, ಸಂಸ್ಕೃತಿ, ಸಮಾಜ, ಬಂಧುತ್ವದ ಕಲ್ಪನೆಗಳನ್ನು ಪರಿಚಯಿಸಿದ ಆತ್ಮಸಂಗಾತಿಯಂತೆ ತೋರುವಲ್ಲಿಯೇ ಇದರ ಘನತೆ, ಗೌರವಗಳು ಅಡಗಿರುವುದು. ಈ ಹಿನ್ನೆಲೆಯಲ್ಲಿಯೇ ಮನೆಯನ್ನು ನಾವು ನಮ್ಮ ಆತ್ಮ ಬಂಧುವಿನಂತೆ ಕಾಣಬೇಕಾಗಿದೆ. ಕುವೆಂಪುರವರಿಗೆ ಈ ಪ್ರಜ್ಞೆ ಇರುವ ಕಾರಣಕ್ಕಾಗಿಯೇ 'ನನ್ನ ಮನೆ' ಎಂದು ಹೆಮ್ಮೆಯಿಂದ ಬೀಗಿದ್ದಾರೆ.

ದಿನಕರ ದೇಸಾಯಿಯವರು ಕನ್ನಡ ಮಕ್ಕಳ ಕಾವ್ಯದ ಮತ್ತೊಂದು ಪ್ರತಿಭೆ. ಅವರ 'ಗಡಿಯಾರ' ಎಂಬ ಶೀರ್ಷಿಕೆ ಹೊತ್ತ ಕವಿತೆಯ ವಸ್ತು ಗಡಿಯಾರವೇ ಆದರೂ ಕವಿ ಆ 'ಗಡಿಯಾರ'ವನ್ನು ಕೇವಲ ಮನೆಯೊಳಗಿನ ಒಂದು ಯಂತ್ರದ ವಸ್ತುವೆಂದು ಭಾವಿಸದೆ ಬಂಧುತ್ವದ ನೆಲೆಯೊಳಗೆ ನೋಡುವ ದೃಷ್ಟಿಕೋನಗಳು ಪದ್ಯಕ್ಕೆ ಹೆಚ್ಚು ಮೆರಗು ನೀಡಿವೆ.

**ಗಡಿಯಾರ**

ಗಂಟೆಯ ನೆಂಟನೆ ಓ ಗಡಿಯಾರ,
ಬೆಳ್ಳಿಯ ಬಣ್ಣದ ಗೋಲಾಕಾರ
ವೇಳೆಯ ತಿಳಿಯಲು ನೀನಾಧಾರ
**ಟಿಕ್ ಟಿಕ್ ಗೆಳೆಯಾ, ಟಿಕ್ ಟಿಕ್ ಟಿಕ್**
..........................................
..........................................
**ಟಿಕ್ ಟಿಕ್** ಎನ್ನುತ ಹೇಳುವೆಯೇನು?
ನಿನ್ನೀ ಮಾತಿನ ಒಳಗುಟ್ಟೇನು?
ಕಾಲವು ನಿಲ್ಲದು ಎನ್ನುವೆಯೇನು?
**ಟಿಕ್ ಟಿಕ್ ಗೆಳೆಯಾ, ಟಿಕ್ ಟಿಕ್ ಟಿಕ್**[೧೧]

ಪದ್ಯದಲ್ಲಿ ಬರುವ 'ಗಂಟೆಯ ನೆಂಟನೆ' ಎಂಬುದು ಎರಡು ಬಗೆಯ ಬಂಧುತ್ವದ ಕಲ್ಪನೆಯನ್ನು ತೆರೆದು ತೋರಿಸುತ್ತದೆ. ಗಡಿಯಾರದ ನೆಂಟು ಸಮಯದ ಜೊತೆಗಿದೆ ಎಂಬುದು ಹಾಗೂ ಮುಂದುವರೆದು ಗಡಿಯಾರವನ್ನು 'ಟಿಕ್ ಟಿಕ್ ಗೆಳೆಯಾ, ಟಿಕ್ ಟಿಕ್ ಟಿಕ್' ಎಂಬ ಸಾಲು ಗಡಿಯಾರದ ಜೊತೆ ಮಗು ಹೊಂದಿರುವ ಗೆಳೆತನ ಬಾಂಧವ್ಯದ ಅನಾವರಣದಂತಿದೆ. ನಿರ್ಜೀವ ಯಂತ್ರದ ವಸ್ತುವಿನೊಳಗೂ ಒಂದು ಭಾವನಾತ್ಮಕ ನೆಂಟಸ್ತಿಕೆಯ ಶೋಧಕ್ಕೆ ಕೈಹಾಕುವ, ಜೀವ ತುಂಬುವ ಪ್ರಯತ್ನ ಹೇಗೆ ಮಾಡುತ್ತದೆ ಎಂಬುದು ಇಲ್ಲಿ ಗಮನಿಸಬೇಕಾದ ಸಂಗತಿಯಾಗಿದೆ.

ಟಿ.ಎಸ್. ನಾಗರಾಜ ಶೆಟ್ಟಿಯವರ 'ರಾಷ್ಟ್ರಪಿತ' ಎಂಬ ಕವಿತೆಯಲ್ಲಿಯು ನಾವು ಆನ್ವಯಿಕ ನೆಲೆಯ ಬಾಂಧವ್ಯದ ಹೆಜ್ಜೆಗಳನ್ನು ಗುರುತಿಸಬಹುದು. ಆ ಕವಿತೆ ಹೀಗಿದೆ.

**ರಾಷ್ಟ್ರಪಿತ**

ಗಾಂಧಿ ತಾತ ರಾಷ್ಟ್ರಪಿತ
ಭಾರತಕ್ಕೆ ಜೀವದಾತ
ನಗೆಯ ಅಸ್ತ್ರ ಬೀರೆ ನೇತ
ಬಿಳಿಯ ದೊರೆ ತಾನು ಸೋತ !

ಜನರ ಕಷ್ಟ ಕಂಡುಕೊಂಡು
ಅಂಗಿ ಕೂಡ ಕಳಚಿದ
ಬಡವರಲ್ಲಿ ಸೇರಿಕೊಂಡು
ಸರಳ ಬದುಕು ನಡೆಸಿದ

ಮಿತ್ರನಿರಲಿ ಶತ್ರುವಿರಲಿ
ಹಿಂಸೆಯೆಂಬ ಮಾತೆ ಇಲ್ಲ
ಪುಟ್ಟ ಮಗು ಕಂಡರವಗೆ
ಬಾಯಿ ತುಂಬ ಬೆಲ್ಲ!

ಸತತ ನಗುತ ಎಲ್ಲರೊಂದೆ
ಎನುತ ಬದುಕಿದ
ನಗೆಯ ಬಲಿಯ ಬೀಸಿ ಬೀಸಿ
ಆಂಗ್ಲರನ್ನು ಜಯಿಸಿದ ![೧೨]

ಗಾಂಧೀಜಿ ಎಂದರೆ ಅವರನ್ನು ಮಹಾತ್ಮ ಎಂಬ ವಿಶೇಷಣದಿಂದಲೋ, ಸ್ವಾತಂತ್ರ್ಯ ಹೋರಾಟಗಾರ ಎಂಬ ಪದಗಳ ಗೌರವದ ಹಿನ್ನೆಲೆಯಲ್ಲಿ ಹಿರಿಯರ ಲೋಕ ಗಾಂಧೀಜಿಯವರನ್ನು ಸ್ಮರಿಸಿದರೆ, ಕಿರಿಯ ಲೋಕದಲ್ಲಿ ಮಾತ್ರ ಗಾಂಧೀಜಿ ಸ್ವಾತಂತ್ರ ಪ್ರೇಮಿ, ದೇಶಭಕ್ತ, ಮಹಾತ್ಮ ಎಂಬೆಲ್ಲ ವಿಶೇಷಣಗಳಾಚೆಗೆ ಗಾಂಧೀಜಿಯವರನ್ನು ಸಾಮಾಜಿಕ ನೆಲೆಯ ದೃಷ್ಟಿಯಲ್ಲಿ ಒಂದು ಅಂತರದಿಂದ ನೋಡುವುದಕ್ಕೆ ಬದಲಾಗಿ, ಗಾಂಧೀಜಿಯನ್ನು ಮಕ್ಕಳು ವೈಯಕ್ತಿಕ ನೆಲೆಯಲ್ಲಿ ಪರಿಭಾವಿಸಿ 'ತಾತ' ಎಂದು ಸಂಬೋಧಿಸುವುದು ಬಾಂಧವ್ಯದ ಪ್ರೀತಿಯ ಸಂಕೇತವಾಗಿದೆ. ಮಕ್ಕಳ ಕಾವ್ಯದ ಹಿರಿಮೆ ಇರುವುದು ಈ ಬಗೆಯ ಸೂಕ್ಷ್ಮ ಸಂಗತಿಗಳಲ್ಲೇ ಎಂಬುದನ್ನು ಅರಿಯಬೇಕಾಗಿದೆ.

'ಮಂಗಣ್ಣ' ಎಂಬ ಶೀರ್ಷಿಕೆಯ ಕವಿತೆಯೊಂದು ಹೀಗಿದೆ.

ಥಕಟ್ಟೆ ಥಕಟ್ಟೆ ಮಂಗಣ್ಣ
ಪುಟಾಣಿ ಮಕ್ಕಳ ನಗಿಸಣ್ಣ

ಲಾಗ ಹಾಕೆಲೊ ಮಂಗಣ್ಣ
ಕಣ್ಣಿಗೆ ಹಬ್ಬವ ಮಾಡಣ್ಣ ॥

ಚಡ್ಡಿಯ ತೊಟ್ಟಿಹ ಮಂಗಣ್ಣ
ಹನುಮನ ಸಂತತಿ ನೀನಣ್ಣ
ಚಂಗನೆ ಜಿಗಿಯೊ ಹನುಮಣ್ಣ
ಕೆಂಪನೆ ಮುಸುಡಿಯ ಮಂಗಣ್ಣ ॥[೭]

ಮಕ್ಕಳಿಗೂ ಪ್ರಾಣಿಗಳಿಗೂ ನಡುವೆ ಒಂದು ಭಾವನಾತ್ಮಕ ನಂಟು ಸದಾ ಇದ್ದೇ ಇರುತ್ತದೆ. ಈ ಭಾವನಾತ್ಮಕ ನಂಟಿನ ಪರಿಣಾಮವಾಗಿಯೇ ಮಕ್ಕಳು ಯಾವುದೇ ಪ್ರಾಣಿಯನ್ನು ಕೇವಲ ಪ್ರಾಣಿಯನ್ನಾಗಿ ನೋಡದೆ ಅವುಗಳ ಕುರಿತು ಮಾತನಾಡುವಾಗ ಅಥವಾ ಅವುಗಳ ಜೊತೆಗೆ ತನ್ನಷ್ಟಕ್ಕೆ ತಾನೇ ಮಗು ಮಾತನಾಡಿಕೊಳ್ಳುವಾಗ ಅಲ್ಲೆಲ್ಲ ಅದು ಅದಕ್ಕೆ ಏನಾದರೊಂದು ನಂಟಿನ ಲೇಪನ ಮಾಡುವುದುಂಟು. ಇಲ್ಲಿ ಮಂಗನಿಗೂ ಮಗುವಿಗೂ ಮೇಲ್ನೋಟಕ್ಕೆ ಸಂಬಂಧ ಇರದೇ ಹೋದರೂ ಮಗುವಿನೊಳಗಿರುವ ಭಾವನಾತ್ಮಕ ನಂಟಿನ ಪರಿಣಾಮ ಮಗು ಇಲ್ಲಿ ಮಂಗನನ್ನು 'ಮಂಗಣ್ಣ' ಎಂದು ಸಂಬೋಧಿಸಿದೆ. 'ಅಣ್ಣ' ಎಂದು ಅದನ್ನು ಕರೆಯುವ ಹಿಂದೆ ಅಪಾರ ಜೀವಪರ ಕಾಳಜಿ ಇದ್ದು, ಪ್ರಾಣಿಗಳನ್ನೂ ಮಾನವೀಯ ನೆಲೆಯಲ್ಲಿಯೇ ಪರಿಭಾವಿಸುವ ಬಾಂಧವ್ಯದ ಹೊಸ ಹೊಳಹುಗಳನ್ನು ಪ್ರಸ್ತುತ ಪದ್ಯ ಪರಿಚಯಿಸಿಕೊಡುತ್ತದೆ. ಬರಿ ಮಂಗ ಎಂದೂ ಕರೆದಿದ್ದರೂ ಅದರಿಂದ ಯಾವುದೇ ನಷ್ಟ ಮಗುವಿಗೂ, ಮಂಗನಿಗೂ ಇರಲಿಲ್ಲವಾದರೂ ಈ ಲಾಭ-ನಷ್ಟಗಳ ಲೆಕ್ಕಾಚಾರವನ್ನು ಪಕ್ಕಕ್ಕೆ ಇಟ್ಟು ಪರಸ್ಪರ ಪ್ರೀತಿ-ವಿಶ್ವಾಸಗಳನ್ನು ವೃದ್ಧಿಸುವ ಬಾಂಧವ್ಯದ ಉದ್ದೇಶಗಳಿಗೆ ಅಭಿಮುಖವಾಗಿ ಪ್ರಸ್ತುತ ಪದ್ಯದಲ್ಲಿ ಅಣ್ಣ, ಮಂಗಣ್ಣ ಎಂದು ಬಳಕೆಯಾಗಿರುವುದು ಸಮಯೋಚಿತವಾಗಿದೆ.

**ಕೊನೆ ಟಿಪ್ಪಣಿಗಳು**

೧. ಸಂಕೀರ್ಣ ಮಕ್ಕಳ ಸಾಹಿತ್ಯ; ಸಂ: ಎಂ.ವಿ. ಸೀತಾರಾಮಯ್ಯ; ಪುಟ ೫.

೨. ಅದೇ; ಪುಟ ೬.

೩. ಅದೇ; ಪುಟ ೫.

೪. ಮಕ್ಕಳ ಸಾಹಿತ್ಯ; ೨೦೦೬; ಸಂ: ಆನಂದ ಪಾಟೀಲ; ಪುಟ ೨೦.

೫. ಮಕ್ಕಳ ಸಾಹಿತ್ಯ; ೧೯೯೭; ಸಂ: ಪಳಕಳ ಸೀತಾರಾಮ ಭಟ್ಟ; ಪುಟ ೧೯.

೬. ಮಕ್ಕಳ ಸಾಹಿತ್ಯ; ೨೦೦೯; ಸಂ: ಡಾ. ಬಿದರಿ ಚಂದ್ರಕಲಾ; ಪುಟ ೧೨೪.

೭. ಮಕ್ಕಳ ಸಾಹಿತ್ಯ ಕವಿತೆಗಳು; ಸಂ: ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ; ಶಂ.ಗು. ಬಿರಾದಾರ, ಟಿ.ಎಸ್. ನಾಗರಾಜ ಶೆಟ್ಟಿ; ಪುಟ ೧೪೭.

೮. ಮಕ್ಕಳ ಸಾಹಿತ್ಯ; ೨೦೦೯; ಸಂ: ಡಾ. ಬಿದರಿ ಚಂದ್ರಕಲಾ; ಪುಟ ೧೨೫.

೯. ಮಕ್ಕಳ ಸಾಹಿತ್ಯ; ೨೦೦೯; ಸಂ: ಡಾ. ಬಿದರಿ ಚಂದ್ರಕಲಾ; ಪುಟ ೧೯೩.

೧೦. ಸಂಕೀರ್ಣ ಮಕ್ಕಳ ಸಾಹಿತ್ಯ; ಸಂ: ಎಂ.ವಿ. ಸೀತಾರಾಮಯ್ಯ; ಪುಟ ೧೦-೧೧.

೧೧. ಸಂಕೀರ್ಣ ಮಕ್ಕಳ ಸಾಹಿತ್ಯ; ಸಂ: ಎಂ.ವಿ. ಸೀತಾರಾಮಯ್ಯ; ಪುಟ ೨೨.

೧೨. ಚಂದ್ರನಶಾಲೆ; ಲೇ: ಟಿ.ಎಸ್. ನಾಗರಾಜ ಶೆಟ್ಟಿ; ಪುಟ ೧೯.

೧೩. ಅದೇ; ಪುಟ ೯.

•••

ಅಧ್ಯಾಯ : ಆರು

# ಮಕ್ಕಳ ಕಾವ್ಯದ ಆನ್ವಯಿಕ ನೆಲೆಗಳು

೬.೧. ಮಕ್ಕಳ ಕಾವ್ಯ ಮತ್ತು ಮನೋವಿಜ್ಞಾನ

೬.೨. ಮಕ್ಕಳ ಕಾವ್ಯ ಮತ್ತು ನೀತಿ ಪ್ರತಿಪಾದನೆ

೬.೩. ಮಕ್ಕಳ ಕಾವ್ಯ ಮತ್ತು ವ್ಯಕ್ತಿತ್ವ ವಿಕಸನ

## ಅಧ್ಯಾಯ : ಆರು

# ಮಕ್ಕಳ ಕಾವ್ಯದ ಆನ್ವಯಿಕ ನೆಲೆಗಳು

### ೬.೧. ಮಕ್ಕಳ ಕಾವ್ಯ ಮತ್ತು ಮನೋವಿಜ್ಞಾನ

ಕಾಲ ಬದಲಾದಂತೆ ಇಂದಿನ ನಮ್ಮ ಬದುಕಿನ ರೀತಿ-ನೀತಿಗಳು ಸಹ ಬದಲಾಗುತ್ತಿವೆ. ಸಾಮಾಜಿಕ ವ್ಯವಸ್ಥೆ ಬದಲಾದಂತೆ ಮಗುವಿನ ಮನಸ್ಸು ಬದಲಾಗುತ್ತ ಹೋಗಿದೆ. ಈ ನಿಟ್ಟಿನಲ್ಲಿ ಬದಲಾದ ಕಾಲದ ಮಗುವಿನ ಬಯಕೆ, ಬೇಡಿಕೆ, ದೃಷ್ಟಿಕೋನ, ಗ್ರಹಿಕೆ ಮೊದಲಾದ ಅಂಶಗಳಲ್ಲಿ ಬದಲಾವಣೆಗಳಾಗಿರುತ್ತವೆ. ಮಕ್ಕಳ ಮನೋಲೋಕ ಹಿರಿಯರ ಗ್ರಹಿಕೆಯಂತೆ ಕಿರಿದಾಗಿಯೇನೂ ಇಲ್ಲ. ಮಕ್ಕಳ ಮನಸ್ಥಿತಿಗಳನ್ನರಿಯಲು ಮನೋವಿಜ್ಞಾನದ ಶಾಖೆಗಳಾದ ಮಗುವಿನ ಮನೋವಿಜ್ಞಾನ (Child Psychology) ಮತ್ತು ವಿಕಾಸ ಮನೋವಿಜ್ಞಾನ (Developmental Psychology)ಗಳು ಹೆಚ್ಚು ಅಧ್ಯಯನ ಯೋಗ್ಯವಾಗಿವೆ . ಕಾರಣ ಮಕ್ಕಳ ಮನಸ್ಸನ್ನೇ ಕೇಂದ್ರವಾಗಿಟ್ಟುಕೊಂಡು ಅಧ್ಯಯನ ನಡೆಸುವ ಕಾರ್ಯವನ್ನು ಈ ಶಾಖೆಗಳು ಮಾಡುತ್ತವೆ. ಈ ಹಿನ್ನೆಲೆಯಲ್ಲಿ ಮಕ್ಕಳಿಗೂ ಮತ್ತು ಮನೋವಿಜ್ಞಾನಕ್ಕೂ ಪರಸ್ಪರ ಅಂತರ್‌ಸಂಬಂಧವಿದೆ ಎಂದು ಹೇಳಬಹುದಲ್ಲದೇ ಮಕ್ಕಳಿಗೆ ಸಂಬಂಧಿಸಿ ಯಾವ ವಯೋಮಾನದವರನ್ನು (ಎಲ್ಲಿಂದ ಎಲ್ಲಿಯತನಕ) ನಾವು ಮಕ್ಕಳು ಎಂದು ಕರೆಯಬೇಕು ಹಾಗೂ ಇದನ್ನೇ ಆಧರಿಸಿ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಯಾವುದನ್ನು ಮಕ್ಕಳ ಸಾಹಿತ್ಯ ಎಂದು ಕರೆಯಬೇಕು ಎಂಬುದನ್ನು ಖಚಿತಪಡಿಸಿ ಕೊಳ್ಳಬಹುದು.

ಆಧುನಿಕ ಕಾಲಘಟ್ಟದಲ್ಲಿ ನಿಂತಿರುವ ನಾವು ಮಕ್ಕಳನ್ನು ಹೆಚ್ಚು ಹೆಚ್ಚು ತಿಳಿಯಲು ಮನೋವಿಜ್ಞಾನವನ್ನು ಅವಲಂಬಿಸಿದರೆ, ಈ ಹಿಂದೆ ನಮ್ಮ ಪೂರ್ವಿಕರು ಮೌಖಿಕ ಪರಂಪರೆಯ ಮೂಲಕ ಮಕ್ಕಳ ಸಾಹಿತ್ಯಕ್ಕೆ ಗಣನೀಯ ಸೇವೆ ಸಲ್ಲಿಸಿದ್ದು, ಅವರ ಅಂದಿನ ಆ ಸಾಹಿತ್ಯ ರಚನೆಯ ಹಿಂದಿನ ಮಾರ್ಗಗಳು ಯಾವುವು ಎಂಬುದನ್ನು ನಾವಿಂದು ಸಂಶೋಧನೆಗಳ ಮೂಲಕವೇ ಕಂಡುಕೊಳ್ಳಬೇಕಾಗುತ್ತದೆ.

ಮಕ್ಕಳ ವಯೋಮಾನದ ಬೆಳವಣಿಗೆಯನ್ನು ಆಧರಿಸಿ ಅನೇಕ ಹಂತಗಳನ್ನಾಗಿಸಿ ವಿಭಜಿಸಿದ ಉದಾಹರಣೆಗಳು ಉಂಟು. ಐದುವರೆ ವರ್ಷದೊಳಗಿನ ಮಗುವಿಗೆ 'ಶಿಶು' ಎಂತಲೂ,

ಐದುವರೆ ವರ್ಷದಿಂದ ಒಂಭತ್ತು ವರ್ಷದವರೆಗಿನ ಮಕ್ಕಳಿಗೆ 'ಕಿಶೋರ' ಎಂತಲೂ, ಒಂಭತ್ತು ವರ್ಷದಿಂದ ಹದಿನಾಲ್ಕು ವರ್ಷದೊಳಗಿರುವವರನ್ನು 'ಬಾಲಕ' ಎಂದು ಕರೆಯಲಾಗಿದೆ.

ಪ್ರೊ. ಸುಬ್ರಹ್ಮಣ್ಯಂ ಮಕ್ಕಳ ಸಾಹಿತ್ಯ ಕುರಿತು ತಮ್ಮ ಒಂದು ಲೇಖನದಲ್ಲಿ ಹೀಗೆ ಅಭಿಪ್ರಾಯಿಸುತ್ತಾರೆ. "ಐದು ವರ್ಷದವರೆಗಿನ ಮಕ್ಕಳಿಗಾಗಿ ರಚಿತವಾದ ಸಾಹಿತ್ಯವನ್ನು ಶಿಶುಸಾಹಿತ್ಯವೆಂದೂ, ಆರು ವರ್ಷದಿಂದ ಹತ್ತು ವರ್ಷದ ಮಕ್ಕಳಿಗಾಗಿ ರಚಿತವಾದ ಸಾಹಿತ್ಯವನ್ನು ಬಾಲ ಸಾಹಿತ್ಯವೆಂದೂ, ಹನ್ನೊಂದರಿಂದ ಹದಿನಾರು ವರ್ಷದ ಮಕ್ಕಳಿಗಾಗಿ ರಚಿಸಿದ ಸಾಹಿತ್ಯವನ್ನು ಕಿಶೋರ ಸಾಹಿತ್ಯವೆಂದೂ ಹೆಸರಿಸಿ ಈ ಶಬ್ದಗಳ ಖಚಿತಾರ್ಥದ ಪ್ರಯೋಗಕ್ಕೆ ಅಥವಾ ಮಕ್ಕಳ ಸಾಹಿತ್ಯದ ಈ ವಿವಿಧ ಮಜಲುಗಳಿಗೆ ಒಂದು ವೈಜ್ಞಾನಿಕ ದೃಷ್ಟಿಯನ್ನು ನೀಡಬೇಕಾದುದು ಅಗತ್ಯವೆನಿಸಿದೆ. ಬರೆದುದೆಲ್ಲವನ್ನೂ ಮಕ್ಕಳ ಸಾಹಿತ್ಯವೆಂಬ ವಿಶಾಲಾರ್ಥದಲ್ಲಿ ಅಡಕಗೊಳಿಸುವುದಕ್ಕಿಂತ ಶಿಶುಸಾಹಿತ್ಯ, ಬಾಲಸಾಹಿತ್ಯ, ಕಿಶೋರ ಸಾಹಿತ್ಯವೆಂಬ ಖಚಿತಾರ್ಥ ಪ್ರಯೋಗದ ಬಳಕೆ ಮಕ್ಕಳ ಸಾಹಿತ್ಯದ ಸಮಗ್ರ ಬೆಳವಣಿಗೆಯ ದೃಷ್ಟಿಯಿಂದ ಅತ್ಯಾವಶ್ಯಕವಾದುದಾಗಿದೆ."[೪]

ಮನೋವೈಜ್ಞಾನಿಕ ಹಿನ್ನೆಲೆಯ ಈ ಬಗೆಯ ವಿಭಾಗ ಕ್ರಮದಿಂದ ಮಗು ಯಾವ ಹಂತದಲ್ಲಿ ಏನನ್ನು ನಿರೀಕ್ಷಿಸುತ್ತದೆ? ಅದರ ಪ್ರಮಾಣ ಎಷ್ಟು? ಅದನ್ನು ಮಗು ಸ್ವೀಕರಿಸಲು ನಾವು ಅನುಸರಿಸಬೇಕಾದ ಮಾರ್ಗ ಯಾವುದು? ಎಂಬ ಪ್ರಶ್ನೆಗಳಿಗೆ ಉತ್ತರ ಸಿಕ್ಕಂತಾಗುತ್ತದೆ. ಈ ಮೂಲಕ ಮಕ್ಕಳ ಸಾಹಿತ್ಯ ರಚನೆಯಲ್ಲಿ ಹೊಸತನವನ್ನು ನಿರೀಕ್ಷಿಸುವುದರ ಜೊತೆಯಲ್ಲಿಯೇ ಮಕ್ಕಳ ಸಾಹಿತ್ಯವನ್ನು ಸಮೃದ್ಧವಾಗಿಸುವಲ್ಲಿ ಭರವಸೆಯ ಹೆಜ್ಜೆಗಳನ್ನು ಇಡಬಹುದು.

### ೬.೨. ಮಕ್ಕಳ ಕಾವ್ಯ ಮತ್ತು ನೀತಿ ಪ್ರತಿಪಾದನೆ

ಕಾವ್ಯದ ಫಲಶೃತಿಗಳು ಒಂದೆರಡಲ್ಲ. ಅದು ವ್ಯಕ್ತಿಯ ಮನೋಲ್ಲಾಸಕ್ಕೆ ಬೇಕಾದ ರಂಜನೆಯನ್ನು ನೀಡುವುದರ ಜೊತೆಗೆ ಮನೋವಿಕಾಸಕ್ಕೆ ಬೇಕಾದ ನೀತಿ ಪ್ರತಿಪಾದನೆಯನ್ನು ನೀಡುತ್ತಲೇ ಬಂದಿದೆ. ಇದಕ್ಕೆ ನೂರಾರು ವರ್ಷಗಳ ಇತಿಹಾಸವೂ ಇದೆ. ವಚನ ಸಾಹಿತ್ಯ, ದಾಸ ಸಾಹಿತ್ಯ, ತತ್ವಪದ ಸಾಹಿತ್ಯಗಳಲ್ಲೆಲ್ಲ ನೀತಿ ಪ್ರತಿಪಾದನೆಯ ಕುರುಹುಗಳು ಸ್ಪಷ್ಟವಾಗಿ ಸಿಕ್ಕುತ್ತವೆ. ಕಾವ್ಯ ನೀಡುವ ರಂಜನೆಯು ವ್ಯಕ್ತಿಯ ವೈಯಕ್ತಿಕ ಹಿತಾಸಕ್ತಿಗಾದರೆ, ಅದೇ ಕಾವ್ಯ ನೀಡುವ ನೀತಿ ಪ್ರತಿಪಾದನೆಯಲ್ಲಿ ವ್ಯಕ್ತಿಯ ಹಿತಾಸಕ್ತಿಯ ಜೊತೆಗೆ ಸಾಮಾಜಿಕ ಹಿತಾಸಕ್ತಿಯ ಉದ್ದೇಶವೂ ಅಡಗಿದೆ ಎಂಬುದು ಗಮನಾರ್ಹ ಸಂಗತಿಯಾಗಿದೆ. 'ನೀತಿ ಪ್ರತಿಪಾದನೆ' ಎಂಬುದು ಎಲ್ಲ ಕಾಲದ ತುರ್ತು ಆಗಿರುತ್ತದೆ 'ನೀತಿ' ಎಂಬುದು ಕೇವಲ ಉಪದೇಶ, ತತ್ವ, ಸಿದ್ಧಾಂತಗಳ ಬೋಧೆ ಎಂದು ನೋಡದೆ ಅದರಾಚೆಗೆ ಅದೊಂದು ಸಾಮಾಜಿಕ ಚಿಕಿತ್ಸಕ ಮಾರ್ಗದ ಪ್ರಮುಖ ಸಾಧನವಾಗಿ ಪರಿಗಣಿಸಬೇಕಿದೆ. ಈ ಬಗೆಯ ನೀತಿ ಪ್ರತಿಪಾದನೆಯಿಂದ ಕನ್ನಡ ಮಕ್ಕಳ ಕಾವ್ಯವೂ ಹೊರತಾಗಿಲ್ಲ. ಕಾರಣ ಮಕ್ಕಳು ಚಿಕ್ಕಂದಿನಿಂದಲೇ ನೀತಿಪಾಠಗಳ ನೆರಳಿನಲ್ಲೇ ಬೆಳೆದರೆ ಅಂತಹ ಮಕ್ಕಳು ಜೀವನದಲ್ಲಿ ನೈತಿಕತೆಯನ್ನು ಅಳವಡಿಸಿಕೊಳ್ಳುವುದರ ಜೊತೆಗೆ

ಸಾಮಾಜಿಕ ಸುಸ್ಥಿರತೆ ಹಾಗೂ ಸಾಮಾಜಿಕ ಶಾಂತಿಗೆ ನಾಂದಿ ಹಾಡುತ್ತಾರೆ. ಮಕ್ಕಳ ಕವಿ ಟಿ.ಎಸ್. ನಾಗರಾಜ ಶೆಟ್ಟಿಯವರ 'ದಯೆ' ಕವಿತೆ ಹೀಗಿದೆ.

"ಚಿಂದಿಯ ಬಟ್ಟೆಯ ಉಟ್ಟಿರೊ ಮುದುಕನ
ಪುಟ್ಟನು ಕಂಡನು ಹಟ್ಟಿಯಲಿ
ಮೈಯನು ಮುಚ್ಚದ ಗತಿಯನು ಕಂಡು
ನೀರನು ಸುರಿಸಿದ ಕಣ್ಣಿನಲಿ

ಸದ್ದೇ ಇಲ್ಲದೆ ಅಪ್ಪನ ಅಂಗಿಯ
ಕದ್ದೇ ಬಿಟ್ಟನು ರಾತ್ರಿಯಲಿ
ಬಿದ್ದನೊ ಎದ್ದನೊ ಪರಿವೆಯೆ ಇಲ್ಲದೆ
ಹಟ್ಟಿಗೆ ಓಡಿದ ಹಗಲಿನಲಿ

"ಅರಿವೆಯನಿದನು ಉಟ್ಟುಕೊ ನೀನು
ಹರಿದಿರೊ ಬಟ್ಟೆಯ ಬಿಸುಡಯ್ಯ
ಅಂಗಿಯ ಬದಲಿಸಿ ಚಂದವ ಕಾಣಲು
ಈಗಲೆ ಕನ್ನಡಿ ನೋಡಯ್ಯ!"[೨]

ದಯವಿಲ್ಲದ ಧರ್ಮವಾವುದಯ್ಯ, ದಯ ಬೇಕು ಸಕಲ ಪ್ರಾಣಿಗಳೆಲ್ಲರಲ್ಲು, ದಯವೇ ಧರ್ಮದ ಮೂಲವಯ್ಯ ಎಂದು ವಚನಕಾರರು 'ದಯೆ'ಯ ಮಹತ್ವವನ್ನು ಒತ್ತಿ ಹೇಳಿದ್ದಾರೆ. ಏಣಿ-ಶ್ರೇಣಿಕೃತ ವ್ಯವಸ್ಥೆಯ ಭಾರತ ದೇಶದೊಳಗೆ "ಸಾಮಾಜಿಕ ಅಸಮಾನತೆಯ ಸಮಸ್ಯೆ ಇಂದು ನಿನ್ನೆಯದಲ್ಲ. ಒಬ್ಬ ನೂರಾರು ಜೊತೆ ಬಟ್ಟೆಗಳನ್ನು ತನ್ನ ಅಲಮಾರಿನಲ್ಲಿರಿಸಿದ್ದರೆ, ಇನ್ನೊಬ್ಬ ಉಡಲು ತುಂಡುಡುಗೆಯು ಇಲ್ಲದ ದೀನ ಪರಿಸ್ಥಿತಿಯಲ್ಲಿ ಬದುಕುತ್ತಿರುತ್ತಾನೆ. ಹಣದ ಶ್ರೀಮಂತಿಕೆಯೇ ಶ್ರೀಮಂತಿಕೆ ಎಂದು ಭಾವಿಸಿ ಅಹಂಕಾರಗಳಿಂದ ಬದುಕುವ ಜನರ ನಡುವೆ ಬಾಲಕನೊಬ್ಬ ಹಟ್ಟಿಯ ಮುದುಕನ ದೀನಸ್ಥಿತಿಯ ಕಂಡು ತನ್ನ ಬಳಿ ಹಣವಿಲ್ಲದಿದ್ದರೂ ತನ್ನ ತಂದೆಯ ಅಂಗಿಯ ಜೇಬಿನಿಂದ ಕದ್ದ ಹಣದಿಂದ ಹೊಸ ಬಟ್ಟೆಯನ್ನು ತಂದು ಮುದುಕನಿಗೆ ನೀಡುವ ಸಮ ಸಮಾಜದ ಸಿದ್ಧಾಂತದ ಸಾಮಾಜಿಕ ನ್ಯಾಯದ ನೀತಿ ಪ್ರತಿಪಾದನೆಯನ್ನು ಕವಿ ಮನೋಜ್ಞವಾಗಿ ಕಟ್ಟಿಕೊಟ್ಟಿದ್ದಾರೆ.

ಕವಿ ಕಯ್ಯಾರ ಕಿಂಞಣ್ಣ ರೈ ಅವರ ಕವಿತೆಯೊಂದು ನೀತಿ ಪ್ರತಿಪಾದನೆಯ ಹಿನ್ನೆಲೆಯಲ್ಲಿಯೇ ರಚಿತವಾಗಿದೆ.

### ನೀ ನನಗಿದ್ದರೆ

ಸಂತೆಗೆ ಹೋದನು ಭೀಮಣ್ಣ,
ಹಿಂಡಿಯ ಕೊಂಡನು ಹತ್ತುಮಣ;
ಕತ್ತೆಯ ಬೆನ್ನಿಗೆ ಹೇರಿಸಿದ,
ಕುದುರೆಯ ಜತೆಯಲಿ ಸಾಗಿಸಿದ.

ಕತ್ತೆಯು ಅರಚಿತು "ಓ ಗೆಳೆಯ,
ಅರ್ಧವ ನೀ ಹೊರು, ದಮ್ಮಯ್ಯ
ಕುದುರೆಗೆ ಕೂಗದು ಕೇಳಿಸಿತು.
ಕತ್ತೆಯ ಕಿರುಚನು ಚಾಳಿಸಿತು.

ನಿನ್ನಯ ಬೆನ್ನಿಗೆ ಹಾಕಿದನು.
ಅದಕೇ ನಿನ್ನನು ಸಾಕಿದನು.
ನೀನೇ ಹೊತ್ತುಕೊ ಬೇಗ ನಡಿ,
ದನಿಯದೊ ಬರುವನು ಹಾದಿ ಹಿಡಿ!"

ನಡುಗಿತು ಕತ್ತೆಯ ಕೈಕಾಲು!
ಬಿದ್ದಿತು ಭೂಮಿಗೆ ಕಂಗಾಲು"!
ಬಂದನು ಆಗಲೆ ಭೀಮಣ್ಣ
ಕುದುರೆಗೆ ಹೊರಿಸಿದ ಹತ್ತು ಮಣ

ಹೊತ್ತಿತು ಕುದುರೆಯು ಹೊರೆಯನ್ನ,
ಅತ್ತಿತು ಬಗ್ಗಿಸಿತದು ಬೆನ್ನ,
ಕುದುರೆಯು ಬೇಡಿತು ಕತ್ತೆಯನು,
"ಮರೆಯೆನು ನಿನ್ನುಪಕಾರವನು.

ಒಂದಿಷ್ಟಾದರು ಹೊತ್ತು ಬಿಡು.
ನನ್ನಯ ಪ್ರಾಣವ ಉಳಿಸಿಕೊಡು"
ಕತ್ತೆಯು ಹೇಳಿತು ಹಿಗ್ಗಿನಲಿ
"ಆಗೇನಂದಿಯ ಸೊಕ್ಕಿನಲಿ?

ನನ್ನಯ ಕಷ್ಟದಿ ಹಿಗ್ಗಿದ್ದಿ
ಬಂತೇ ಈಗಾದರೂ ಬುದ್ಧಿ?
ನೀ ನನಗಿದ್ದರೆ ನಾ ನಿನಗೆ
ನೆನಪಿರಲಿ ನುಡಿ ನಮ್ಮೊಳಗೆ"[೩]

ಪ್ರಸ್ತುತ ಕವಿತೆಯಲ್ಲಿ ಪರೋಪಕಾರದ ನೀತಿಯ ಪ್ರತಿಪಾದನೆಯನ್ನು ಮಾಡಲಾಗಿದ್ದು, ಮನುಷ್ಯ ಜೀವಿ ಸಮಾಜ ಜೀವಿಯಾಗಿದ್ದು, ಇತರರ ಕಷ್ಟದಲ್ಲಿ ತಾನು ನೆರವಾಗುವಲ್ಲಿಯೇ ಬದುಕಿನ ನಿಜವಾದ ಸಾರ್ಥಕತೆಯು ಇದೆಯೆಂಬ ಒಳತೋಟಿಯು ಈ ಕಾವ್ಯದಲ್ಲಿ ವ್ಯಕ್ತವಾಗಿದೆ. ಇತರರು ಕಷ್ಟದಲ್ಲಿದಾಗ ನಾವು ಸ್ಪಂದಿಸದೇ ಹೋದರೆ ಆ ಕಷ್ಟ ನಾಳೇ ನಮ್ಮ ಜೀವನದಲ್ಲಿ ಘಟಿಸಿಬಿಡಬಹುದಾದ ಸಾಧ್ಯತೆಗಳಿದ್ದು ಆಗ ನಾವು ಏಕಾಂಗಿಯಾಗಿ ಪಶ್ಚಾತ್ತಾಪಪಟ್ಟುಕೊಂಡು ಸಂದರ್ಭಗಳನ್ನು ಎದುರಿಸುವ ಬದಲು, 'ಇನ್ನೊಬ್ಬರ ಕಷ್ಟದಲ್ಲಿ ನಾವು ಹಾಗೂ ನಮ್ಮ

ಕಷ್ಟದಲ್ಲಿ ಇನ್ನೊಬ್ಬರು' ಎಂಬ ಪರೋಪಕಾರದ ನೀತಿಯನ್ನು ನಾವು ನಮ್ಮ ಬದುಕಿನಲ್ಲಿ ಅಳವಡಿಸಿಕೊಂಡರೆ ಬದುಕು ಉಲ್ಲಾಸದಿಂದ ಕೂಡಿರಲು ಸಾಧ್ಯ ಎಂಬ ಸಂದೇಶವೊಂದನ್ನು ಕವಿ ತಮ್ಮ ಕವಿತೆಯ ಮೂಲಕ ಮುದ್ದು ಮಕ್ಕಳಿಗೆ ರವಾನಿಸಿದ್ದಾರೆ.

ಸಾಮಾಜಿಕ ಅಸಮಾನತೆಗೆ ವರ್ಣತರತಮವು ಒಂದು ಕಾರಣವೇ ಆಗಿದೆ. ಈ ವರ್ಣಬೇಧ ನೀತಿಯನ್ನು ಕಟುವಾಗಿ ಟೀಕಿಸುವ ಮತ್ತು ಸಮಾಜವನ್ನು ಈ ಬಗೆಯ ತರತಮಗಳಿಂದ ಮುಕ್ತಗೊಳಿಸುವ, ಎಲ್ಲೆಡೆ ಪ್ರೀತಿ-ಸ್ನೇಹವ ಹಂಚಿ ಸಾಮರಸ್ಯದ ಬದುಕಿಗೆ ಕಾರಣವಾಗುವ ಮಾನವ ಅಂತಃಕರಣದ ನೀತಿಯನ್ನು ಸಾರ ಹೊರಟ ಹೆಚ್.ಎಸ್. ವೆಂಕಟೇಶಮೂರ್ತಿಯವರ ಕಾವ್ಯ ಜೀವಪರ ಚಿಂತನೆಗಳಿಂದ ಕೂಡಿದೆ ಎಂದರೆ ತಪ್ಪಾಗಲಾರದು. ಅದು ಈ ಕೆಳಗಿನಂತಿದೆ.

**ಗುಬ್ಬಿ ಮರಿಯ ಹೊಸ ತರ್ಕ**

ಕಾಗೆ ಜೋಡಿ ಆಡು ನಿನ್ನ
ಕಾಲ ಮುರಿತೀನಿ ಅಂತು
ಅಮ್ಮ ಗುಬ್ಬಿ!

ಯಾಕಮ್ಮ ಹಾಗಂತಿ ಕಾಗೆ ಮರಿ ಜಾಣಮರಿ
ಆಡಿದ್ರೇನು ತಪ್ಪು ಅಂತು
ಗುಬ್ಬಿ ಮರಿ!

ಗುಬ್ಬಿ ಮರಿ ಗುಬ್ಬಿ ಮರಿ
ಜೋಡಿ ಮಾತ್ರ ಆಡ್ಕೊಬೇಕು
ಅಮ್ಮ ಗುಬ್ಬಿ ಹೇಳ್ತು
ಗುಬ್ಬಿ ಮರಿ ಕಾಗೆ ಮರಿ ಜೋಡಿ ಯಾಕೆ
ಆಡ್ಕೊ ಬಾರ್ದು?
ಮರಿ ಗುಬ್ಬಿ ಕೇಳ್ತು!

ಅಮ್ಮ ಗುಬ್ಬಿ ಯೋಚಿಸಿ ಹೇಳ್ತು:
ನೋಡು ಪುಟ್ಟಿ ಕಾಗೆ ಮರಿಕಾಳ್ಗಪ್ಪು ನೀನು ಬಿಳಿ
ಅದರ ಜೋಡಿ ಆಡ್ತಾ ಇದ್ರೆ ನೀನು ಕೂಡ ಕರ್‍ರಗೆ
ಕರೀ ಕೊರಮ ಆಗ್ತಿ ನೋಡು ನಂಗೇನಂತೆ?
ಅದಕ್ಕೆ.....

ಪುಟಾಣಿ ಗುಬ್ಬಿ ತಟ್ಟನೆ ಹೇಳ್ತು :
ಹೌದಲ್ಲಮ್ಮ ನಾನು ಬಿಳಿ, ಕಾಗೆ ಮರಿ ಕಾಳ್ಗಪ್ಪು

ನನ್ನ ಜೋಡಿ ಆಡ್ತಾ ಇದ್ರೆ ಕಾಗೆ ಮರಿ ಮಲ್ಲಿಗೆ
ಹೂವಿನ ಹಾಗೆ ಬೆಳ್ಳಗೆ
ಆಗತ್ ನೋಡು ಅದಕ್ಕೇ -
ಅಂತಪುರ್ರನೆ ಹಾರಿ ಹೋಯ್ತು ಕಾಗೆ ಜೋಡಿ ಆಡೋಕೆ!”[೪]

ಕಾವ್ಯದಲ್ಲಿ ಬರುವ ಕಾಗೆ - ಗುಬ್ಬಿಗಳು ಕೇವಲ ಸಾಂಕೇತಿಕ ರೂಪಗಳಾಗಿದ್ದು, ಅಂತಿಮವಾಗಿ ಅವು ಮಾನವ ಬದುಕಿನ ವರ್ಣತರತಮ ವ್ಯವಸ್ಥೆಯನ್ನು ಅಣಕಿಸುವಂತಿದೆ.

ಮನುಷ್ಯನಿಗೆ ಕೆಲ ಗುಣಗಳು ಹುಟ್ಟಿನಿಂದಲೇ ಬರುವಂತವು. ಅದರೊಳಗೆ ಲೋಭತನವೂ ಒಂದು. ಈ ಲೋಭತನ ಅತಿಯಾದರೆ ಅದರಿಂದಾಗುವ ಅಪಾಯಗಳನ್ನು ಮನದಟ್ಟು ಮಾಡಿಸುವ ಕವಿತೆ ಪರಶುರಾಮ ಚಿತ್ರಗಾರ ಅವರದ್ದಾಗಿದೆ.

**ಅತಿ ಆಸೆ**

“ಹಸಿದ ಹೊಟ್ಟೆಯಿಂದ ನಾಯಿ
ರೊಟ್ಟಿಗಾಗಿ ತಿರುಗಿತು
ಊರ ದಾಟಿ ಹಳ್ಳದಾಚೆ
ಹುಡುಕಲೆಂದು ಹೊರಟಿತು

ಅಲ್ಲಿ ಹೊಲ ಗುಡಿಸಲಲ್ಲಿ
ಬುತ್ತಿ ಗಂಟು ದೊರಕಿತು
ರೊಟ್ಟಿಯೊಂದನೆತ್ತಿಕೊಂಡು
ಉಬ್ಬಿನಿಂದ ಮರಳಿತು

ಹಳ್ಳ ದಾಟುವಾಗ ನೋಟ
ನೀರಿನಲ್ಲಿ ಬಿದ್ದಿತು
ರೊಟ್ಟಿ ಹಿಡಿದ ಬೇರೆ ನಾಯಿ
ಕಂಡು ರೊಚ್ಚಿಗೆದ್ದಿತು

ಅದನು ಕಿತ್ತುಕೊಳ್ಳಲೆಂದು
ಬಾಯಿ ತೆರೆದು ಬೊಗಳಿತು
ರೊಟ್ಟಿ ಜಾರಿ ಹಳ್ಳದಲ್ಲಿ
ಬಿದ್ದು ಬಿಡಲು ಮರುಗಿತು

ಆಸೆಯಿಂದ ತನ್ನದನ್ನು
ಕಳೆದುಕೊಂಡ ತಪ್ಪಿಗೆ
ಡೊಂಕು ಬಾಲ ಎತ್ತಿಕೊಂಡು
ಓಡಿತಾಗ ತೆಪ್ಪಗೆ”[೫]

ಹಸಿದ ನಾಲಿಗೆ ರೊಟ್ಟಿಯೊಂದು ಸಿಕ್ಕಾಗ ಅದನ್ನೇ ತಿಂದುಂಡು ಬಿಂಬವನ್ನು ಅನ್ಯರದೆಂದು ಭಾವಿಸಿದ ನಾಯಿ ತನ್ನ ರೊಟ್ಟಿಯನ್ನು ತಿನ್ನದೇ ಬಿಂಬದ ನಾಯಿಯ ರೊಟ್ಟಿಯನ್ನು ಕಿತ್ತುಕೊಳ್ಳ ಬಯಸಿದ ನಾಯಿಯ ದುರಾಸೆಯ ಫಲದಿಂದಾಗಿ ತನ್ನ ಬಳಿಯಿದ್ದ ರೊಟ್ಟಿಯೊಂದನ್ನು ಕಳೆದುಕೊಂಡು ದುಃಖಿಸುವಂತಾದದ್ದು ತನ್ನದಲ್ಲದೇ ಇರುವುದರ ಮೇಲಿನ ವ್ಯಾಮೋಹಕ್ಕಿಂತ ತನ್ನ ಬಳಿ ಇರುವುದರಲ್ಲಿ ಸುಖವಿದೆ ಎಂದು, "ಅತಿ ಆಸೆ ಗತಿ ಕೇಡು" ಎಂಬ ನೀತಿಯ ಪಾಠವನ್ನು ಇದರಿಂದ ತಿಳಿಯಬಹುದು.

ನೀತಿ ಪಾಠಗಳಿಂದ ವಂಚಿತವಾಗಿ ಬೆಳೆಯುವ ವ್ಯಕ್ತಿಗಳು ಮಾತ್ರ ಭ್ರೂಣಹತ್ಯೆಯಂತಹ ಹೀನ ಕೃತ್ಯಕ್ಕೆ ಕೈ ಹಾಕುತ್ತಾರೆ. ಕವಿ ಫ.ಗು. ಸಿದ್ದಾಪುರ ಅವರು ತಮ್ಮ ಇಡೀ ಕವಿತೆಯಲ್ಲಿ ಪುರುಷಪ್ರಧಾನ ವ್ಯವಸ್ಥೆಯ ಕ್ರೌರ್ಯದ ನೀತಿಯನ್ನು ಖಂಡಿಸಿ ಲಿಂಗತರತಮದಿಂದ ಮುಕ್ತವಾದ ಸಮ ಸಮಾಜದ ಕನಸನ್ನು ಮಕ್ಕಳ ಮನಸಿನಲ್ಲಿ ಬಿತ್ತುವ ಕೆಲಸ ಮಾಡಿದ್ದಾರೆ. ಕವಿತೆ ಹೀಗಿದೆ.

### ಭ್ರೂಣಹತ್ಯೆ

"ಹೊತ್ತು ಹೆತ್ತು ಪೊರೆವ ಜನನಿ
ದೇವರೆಂದು ಬಗೆದರು
ಹೆಣ್ಣು ಜಗದ ಕಣ್ಣು ಎಂದು
ಆದಿಯಿಂದ ನುಡಿವರು

ಗಂಡಿಗಿಂತ ಕಡಿಮೆಯಿಲ್ಲ
ಹೆಣ್ಣು ಯಾವ ವಿಧದಲಿ
ಖಡ್ಗ ಪಿಡಿದು ಕಾದಿರವರು
ಹಲವರುಂಟು ಬುವಿಯಲಿ

ಹೆಣ್ಣು ಮಗುವು ಹುಟ್ಟಿದಾಗ
ಮುನಿದು ಮೂಗು ಮುರಿದವರು
ಹುಣ್ಣು ಹುಟ್ಟಿತೆಂದು ಬಗೆದು
ದುಃಖ ಪಟ್ಟು ಕೊಳುವರು

ಹೆಣ್ಣು ಹೆತ್ತ ಜನನಿಯನ್ನು
ಮಹಾಪಾಪಿ ಎನುವರು
ಗಂಡುಗಳನು ಹಡೆಯುವವಳು
ಹೆಣ್ಣು ಎಂದು ಅರಿಯರು

ಗರ್ಭದೊಳಿಹ ಪಿಂಡವನ್ನು
ಪತ್ತೆ ಹಚ್ಚಿ ಬಿಡುವರು

ಭ್ರೂಣ ಬೆಳೆವ ಮೊದಲೆ ಅದರ
ಲಿಂಗವನ್ನು ತಿಳಿವರು

ಗಂಡು ಎಂದು ತಿಳಿದು ಬರಲು
ಹಿಗ್ಗಿನಿಂದ ಕುಣಿವರು
ಹೆಣ್ಣು ಮಗುವು ಬೇಡವೆಂದು
ಭ್ರೂಣ ಹತ್ಯೆಗೈವರು

ಭ್ರೂಣಹತ್ಯೆ ಹೇಯಕೃತ್ಯ
ನಮ್ಮ ಪುಣ್ಯ ನಾಡಲಿ
ಗಂಡಿನಷ್ಟೇ ಹೆಣ್ಣಿಗಿಹುದು
ಬದುಕು ಹಕ್ಕು ಬುವಿಯಲಿ

ಅಮ್ಮ ಇಂದು ಶಾಲೆಯಲ್ಲಿ
ಗುರುಗಳೆಮಗೆ ಹಾಡನು
ಹೇಳಿಕೊಟ್ಟ ರೀತಿ-ನೀತಿ
ನಿನಗೆ ಹೇಳಿ ಬಿಡುವೆನು!

ನಿನ್ನ ಹಿರಿಮೆ ಗರಿಮೆ ಬಹಳ
ದೊಡ್ಡದೆಂದು ನುಡಿದರು!
ದೇವಿ ನೀನು, ಧರಣಿ ನೀನು
ಎಲ್ಲಾ ನೀನೆ ಅಂದರು?!"೬

ಈ ನಿಸರ್ಗವು ಎಲ್ಲರಿಗೂ ಸರಿಸಮಾನವಾಗಿ ಬದುಕುವ ಹಕ್ಕು ನೀಡಿದೆ. ಆದರೆ ಪುರುಷ ಪ್ರಧಾನ ವ್ಯವಸ್ಥೆಯ ಏಕಮುಖಿ ಚಿಂತನೆಗಳ ಹಿನ್ನೆಲೆಯಲ್ಲಿ ಹೆಣ್ಣು ಇಂದು ಶೋಷಣೆಗೆ ಗುರಿಯಾಗಿದ್ದಾಳೆ. ಭ್ರೂಣದಲ್ಲಿರುವಾಗಲೇ ಲಿಂಗವನ್ನು ಪತ್ತೆ ಹಚ್ಚಿ ಹೆಣ್ಣು ಮಗುವನ್ನು ಹತ್ಯೆಗೈವ ಪರಿ ನಾಗರಿಕ ಸಮಾಜ ತಲೆತಗ್ಗಿಸುವಂತದ್ದಾಗಿದೆ. ತನ್ನದಲ್ಲದ ತಪ್ಪಿಗೆ, ಇನ್ನೂ ಜನ್ಮತಾಳದೇ ಇರುವ ಕೂಸು ಭ್ರೂಣದಲ್ಲೇ ಬಲಿಪಶುಯಾಗುವುದನ್ನು ಗಮನಿಸಿದರೆ ಬಹುಶಃ ಆಧುನಿಕ ಜಗತ್ತು ತಾಂತ್ರಿಕ ಜಗತ್ತಿನಲ್ಲಿ ಸಾಧಿಸಿದಷ್ಟನ್ನು ತಾತ್ವಿಕವಾಗಿ, ನೈತಿಕವಾಗಿ ಸಾಧಿಸಲಿಲ್ಲವೇನೋ ಎಂಬ ಪ್ರಶ್ನೆ ಏಳದೇ ಇರದು. ಬದುಕಿಗೆ ನೀತಿ ನಿಯಮಗಳ ಕಡಿವಾಣ ಇಲ್ಲದೆ ಹೋದರೆ ಬದುಕು ಸ್ವೇಚ್ಛೆಯ ಉತ್ತುಂಗವನ್ನು ತಲುಪಿ ಸಾಮಾಜಿಕ ಅಧಃಪತನಕ್ಕೆ ಕಾರಣವಾಗುತ್ತದೆ. ಹಾಗಾಗಿಯೇ ಕವಿ ಇಲ್ಲಿ ಈ ಬಗೆಯ ಕೃತ್ಯಗಳ ಬಗೆಗೆ ಮಕ್ಕಳಿಗೆ ಕವಿತೆಯ ಮೂಲಕ ತಿಳಿಸುತ್ತ, ಬದುಕಿನಲ್ಲಿ ನೀತಿಯ ಮಹತ್ವ ಎಂತದ್ದು ಎಂಬುದನ್ನು ಸಾರ ಹೊರಟ್ಟಿದ್ದಾರೆ.

### ೬.೩. ಮಕ್ಕಳ ಕಾವ್ಯ ಮತ್ತು ವ್ಯಕ್ತಿತ್ವ ವಿಕಸನ

ಮಕ್ಕಳ ಕಾವ್ಯ ಕೇವಲ ಮಕ್ಕಳ ಮನೋರಂಜನೆಗೆಂದೇ ಇರುವ ರಂಜನೆಯ ಸರಕಾಗದೆ ಅದರಾಚೆಗೆ ಅದು ಮಕ್ಕಳ ವ್ಯಕ್ತಿತ್ವ ವಿಕನಸದ ಭಾಗವಾಗಿಯೂ ತನ್ನ ಕಾರ್ಯ ನಿರ್ವಹಿಸುತ್ತಿದೆ.

ವ್ಯಕ್ತಿತ ವಿಕಸನ ಎನ್ನುವುದು ಇಂದು ಆನೆಯ ಕಾಲ್ತುಳಿತಕ್ಕೆ ಸಿಕ್ಕ ಅಂಗವಿಕಲನ ಪಾಡಿನಂತಾಗಿದೆ. ಒಳ್ಳೆಯ ವ್ಯಕ್ತಿತ್ವಗಳ ನಿರ್ಮಾಣ ಇಂದಿನ ಸಮಾಜದ ತುರ್ತುಗಳಲ್ಲಿ ಒಂದಾಗಿದೆ. ಒಳ್ಳೆಯ ವ್ಯಕ್ತಿಗಳ ನಿರ್ಮಾಣ ಕಾರ್ಯದಲ್ಲಿನ ನಮ್ಮ ಅಸಡ್ಡೆಗಳು ಮತ್ತು ಬೇಜವಾಬ್ದಾರಿತನಗಳೇ ಈ ಹೊತ್ತಿನ ಸಾಮಾಜಿಕ ವಿಸಂಗತಿಗಳ ಮೂಲ ಕಾರಣವೆಂದು ಭಾವಿಸಬಹುದು. ನೈತಿಕತೆಯ ಪಾಠವನ್ನು ಮರೆತಂತಿರುವ ನಮ್ಮ ಬದುಕಿನ ಶೈಲಿಗಳು ನೆಮ್ಮದಿಯನ್ನು ದೇವಸ್ಥಾನಗಳಲ್ಲಿ, ಬಾರ್ ಅಂಡ್ ರೆಸ್ಟೋರೆಂಟ್‌ಗಳಲ್ಲಿ, ಸಂಜೆಯ ಉದ್ಯಾನವನಗಳಲ್ಲಿ, ನಗೆ ಚಟಾಕಿಯಂತಹ ಹಾಸ್ಯ ಕಾರ್ಯಕ್ರಮಗಳಲ್ಲಿ ಹುಡುಕಿಕೊಂಡು ಹೋಗುವಂತಹ ವಿಷಮ ಸ್ಥಿತಿಗಳಲ್ಲಿ ನಾವಿದ್ದೇವೆ. ನಾಳೆಯ ಸಶಕ್ತ, ಸುಸ್ಥಿರ, ಸುಭದ್ರ, ಶಾಂತ, ಸುಶಿಕ್ಷಿತ ಸಮಾಜದ ನಿರ್ಮಾಣಕ್ಕೆ ನಾವಿಂದೇ ನಮ್ಮ ಮಕ್ಕಳನ್ನು ಅಣಿಗೊಳಿಸಬೇಕಿದೆ. ಮಕ್ಕಳ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗುವ ಗುಣಾತ್ಮಕ ಮೌಲ್ಯಗಳನ್ನು ಮಕ್ಕಳಿಗೆ ತಿಳಿಸುವಲ್ಲಿ ಮಕ್ಕಳ ಕಾವ್ಯ ಹೇಗೆ ಸಹಾಯಕವಾಗಿದೆ ಎಂಬುದನ್ನು ನೋಡುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

**ಪ್ರೀತಿ**

ಮಕ್ಕಳಿಗೆ ಶಿಕ್ಷಣ ನೀಡುವುದು, ಉದ್ಯೋಗ ಕೊಡಿಸುವುದು ಅಷ್ಟೇ ಈ ಹೊತ್ತಿನ ಬಹುಪಾಲು ತಂದೆ–ತಾಯಿಗಳ ಜವಾಬ್ದಾರಿ ಎಂಬಂತೆ ತೋರುತ್ತಿದೆ. ಅದರಾಚೆಗೂ ಸಹ ಮಕ್ಕಳಿಗೆ ನೀಡುವಂತದ್ದು ಸಾಕಷ್ಟಿದೆ. ಎಷ್ಟೋ ಕುಟುಂಬಗಳಲ್ಲಿ ಮಕ್ಕಳು ಇಂದು ತಾಯ್ತಂದೆಯರ ಪ್ರೀತಿಯ ಪಾಠದಿಂದಲೇ ವಂಚಿತರಾಗುತ್ತಿದ್ದಾರೆ. ಮಕ್ಕಳು ಸೋತಾಗ ಆಲಂಗಿಸದಿದ್ದರೆ, ದುಃಖಿಸುವಾಗ ಸಾಂತ್ವನ ಹೇಳದಿದ್ದರೆ, ಪ್ರೀತಿಯ ಅರ್ಥ ಮಕ್ಕಳಿಗಾಗುವುದಾದರೂ ಹೇಗೆ? ಪ್ರೀತಿಯಿಂದ ವಂಚಿತರಾದ ಮಕ್ಕಳಿಂದ ಮುಂದೆ ನಾವು ಒಳ್ಳೆಯದೇನನ್ನೂ ನಿರೀಕ್ಷಿಸಲು ಸಾಧ್ಯವೇ ಇಲ್ಲ, ಕಾರಣ ಪ್ರೀತಿ ನಮ್ಮ ಎಲ್ಲ ಚಟುವಟಿಕೆಗಳ ಜೀವ ದ್ರವ್ಯವಾಗಿದೆ.

ಕೂಸಿದ್ದ ಮನಿಗೆ ಬೀಸಣಿಕೆ ಯಾತಕ
ಕೂಸು ಕಂದಯ್ಯ ಒಳ ಹೊರಗ । ಆಡಿದರ
ಬೀಸಣಿಕೆ ಗಾಳಿ ಸುಳಿದಾವ ॥[೬]

ಮಗುವಿನ ಆಟದ ಚಟುವಟಿಕೆಗಳೇ ತಾಯಿಗೆ ತುಂಬು ಸಂಭ್ರಮ ನೀಡಿವೆ. ಪ್ರಸ್ತುತ ಪದ್ಯ ಕಂದನ ಮೇಲೆ ತಾಯಿಗೆ ಇರುವ ಅಪಾರ ಪ್ರೀತಿಯನ್ನು ನಮ್ಮೆದುರು ತೆರೆದಿಡುತ್ತದೆ.

ಒಂದು ಅಂಶವನ್ನು ನಾವಿಲ್ಲಿ ಗಮನಿಸಬೇಕಾಗುತ್ತದೆ. ಹುಟ್ಟುವಾಗಲೇ ಯಾರೂ ಮಹಾತ್ಮರಾಗಿಯೋ, ದುರಾತ್ಮರಾಗಿಯೋ ಹುಟ್ಟಿರುವುದಿಲ್ಲ. ಮಗು ಬೆಳೆಯುವ ಕೌಟುಂಬಿಕ ಪರಿಸರ

ಮತ್ತು ಸಾಮಾಜಿಕ ಪರಿಸರಗಳೆರಡೂ ಮಗುವೊಂದನ್ನು ಮಹಾತ್ಮನನ್ನಾಗಿ ಅಥವಾ ದುರಾತ್ಮನನ್ನಾಗಿ ರೂಪಿಸಿ ಬಿಡಬಹುದು. ಈ ಹಿನ್ನೆಲೆಯಲ್ಲಿ ಸಮಾಜದ ಸ್ವಾಸ್ಥ್ಯ ಕೆಡದಂತೆ ನೋಡಿಕೊಳ್ಳಬೇಕಾದರೆ ಮೊದಲು ಪ್ರತಿ ಕುಟುಂಬಗಳ ಮಕ್ಕಳ ಮಾನಸಿಕ ಸ್ವಾಸ್ಥ್ಯವು ಕೆಡದಂತೆ ಎಚ್ಚರವಹಿಸಬೇಕಾದದ್ದು ಈ ಸಮಾಜದ ಎಲ್ಲ ಪೋಷಕರ ಆದ್ಯ ಕರ್ತವ್ಯವಾಗಿದೆ. ಕಾರಣ ಸಮಾಜದ ಕನಿಷ್ಟತಮ ಘಟಕ ಕುಟುಂಬವಾದರೆ, ಕುಟುಂಬದ ಕನಿಷ್ಟತಮ ಘಟಕ ಮಗುವಾಗಿದೆ. 'ಇಂದಿನ ಮಗು ನಾಳಿನ ಪ್ರಜೆ' ಎಂಬ ಮಾತೊಂದಿದೆ. ಪ್ರಜೆಗಳೆಲ್ಲರೂ ನಾಗರೀಕರಾಗಿರುವುದಿಲ್ಲ. ಬದಲಿಗೆ ಅವರನ್ನು ನಾಗರೀಕರನ್ನಾಗಿ ರೂಪಿಸುವ ಬಹಳ ದೊಡ್ಡ ಸವಾಲು ಈ ನಾಡಿನ ಪ್ರತಿಯೊಬ್ಬ ತಂದೆ-ತಾಯಿ, ಗುರು-ಹಿರಿಯರಿಗೆ ಇರುವುದರಿಂದ ನೈತಿಕತೆಯ ಪಾಠವನ್ನು ಚಿಕ್ಕ ಮಕ್ಕಳಿರುವಾಗಿನಿಂದಲೇ ಕೊಡುವ ಜರೂರು ಇದೆ. ಬಿತ್ತಿದಂತೆ ಬೆಳೆ ಎಂಬಂತೆ ಮಕ್ಕಳಿಗೆ ನಾವಿಂದು ಪ್ರೀತಿಯನ್ನು ನೀಡಿದರೆ ಅವು ಸಮಾಜಕ್ಕೆ ಪ್ರೀತಿಯನ್ನೇ ಧಾರೆಯೆರೆಯುತ್ತವೆ. ಇದಕ್ಕೆ ಉದಾಹರಣೆಯಾಗಿ ನಾವು ನಾಡಿನ ಸಾಹಿತಿಗಾಳಾದ ಸಿಂಪಿ ಲಿಂಗಣ್ಣನವರ ಮಾತುಗಳನ್ನು ಸ್ಮರಿಸಬಹುದು. ಅವರು ೧೯೯೨ರಲ್ಲಿ ಕೊಪ್ಪಳದಲ್ಲಿ ನಡೆದ ಅಖಿಲ ಭಾರತ ೬೧ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ತಮ್ಮ ಅಧ್ಯಕ್ಷ ಭಾಷಣದಲ್ಲಿ ಹೀಗೆ ಉದ್ಧರಿಸಿದ್ದಾರೆ.

"ನನ್ನ ಮಟ್ಟಿಗೆ ಜೀವನ ಬೇರೆ ಅಲ್ಲ, ಸಾಹಿತ್ಯ ಬೇರೆ ಅಲ್ಲ. ಅವು ಎರಡೂ ಕೈ ಹಿಡಿದುಕೊಂಡೇ ಸಾಗಿವೆ. ನಾನು ಎರಡು ವರ್ಷದವನಿದ್ದಾಗ ನನ್ನ ಹಡೆದವ್ವ ಎದೆದುಂಬಿ ಹಾಡಿದ ಲಲ್ಲೆ ನುಡಿ

ಕರಿ ಅಂಗಿ ಕಸೂತಿ ತಲೆ ತುಂಬ ಜಾವೂಳ
ಅಂಗಳದಾಗ ನವಿಲಾಟ | ಅದಕಿಂತ
ಲಿಂಗಯ್ಯನಾಟ ಬಲುಮಾಟ

ನನ್ನಲ್ಲಿ ಸಾಹಿತ್ಯಾಭಿರುಚಿಯ ಅಂಕುರವನ್ನು ಹುಟ್ಟಿಸಿತು"[೮]

ಮಕ್ಕಳ ಕಾವ್ಯ ಮಕ್ಕಳ ಮೇಲೆ ಮಾಡಬಹುದಾದ ಪ್ರಭಾವಕ್ಕೆ ಸಿಂಪಿ ಲಿಂಗಣ್ಣನವರ ಮಾತುಗಳು ಸ್ಪಷ್ಟ ನಿದರ್ಶನದಂತಿವೆ. ಲಿಂಗಣ್ಣನವರು ಚಿಕ್ಕಂದಿನಿಂದಲೂ ಮೌಖಿಕ ಪರಂಪರೆಯ ಅವಿಭಾಜ್ಯ ಅಂಗಗಳಾದ ತಾಯಿ ಪ್ರೀತಿಯ ಜೋಗುಳ ಹಾಡುಗಳ ಸಾಹಿತ್ಯಿಕ ವಾತಾವರಣದಲ್ಲಿ ಬೆಳೆದಿದ್ದರಿಂದಲೇ ಮುಂದೆ ಅವರು ತಮ್ಮ ಕೊನೆ ಉಸಿರಿರುವವರೆಗೂ ಸಾಹಿತ್ಯದ ಸೇವೆಯನ್ನು ಮಾಡಿದರೆನ್ನಬಹುದು.

ಹೀಗೆ ಸಾಹಿತ್ಯಿಕ ವಾತಾವರಣದಲ್ಲಿ ಬೆಳೆದ ಸಿಂಪಿ ಲಿಂಗಣ್ಣನವರು ಸಾಹಿತಿಯಾಗಿ ಉಳಿದರೆ ಹಿಂಸಾತ್ಮಕ ಚಟುವಟಿಕೆಗಳ ಹಿನ್ನೆಲೆಯ ವಾತಾವರಣದಲ್ಲಿ ಬೆಳೆದ ಮಗುವೊಂದು ಕೇವಲ ಒಂದು ಸಮಾಜವನ್ನಲ್ಲದೇ ರಾಷ್ಟ್ರವನ್ನೇ ನೆತ್ತರಿನಲ್ಲಿ ತೇಲಾಡುವಂತೆ ಮಾಡುತ್ತಾನೆಂಬುದಕ್ಕೆ ನಿದರ್ಶನವಾಗಿ ನಾವು ಆಫ್ರಿಕಾದ ಉಗಾಂಡದಲ್ಲಿನ ಜೋಸೆಫ್ ಕೋನಿಯ ಮಕ್ಕಳ ಸೈನ್ಯದ[೯] ಕುರಿತು ಇಲ್ಲಿ ನೋಡಬಹುದು.

ಜೋಸೆಫ್‌ನ ಭಯಾನಕ ಮಕ್ಕಳ ಸೈನ್ಯದ ಸಂಖ್ಯೆ ಅರವತ್ತಾರು ಸಾವಿರ. ಜಗತ್ತಿನ ಮೋಸ್ಟ ವಾಂಟೆಡ್ ಕ್ರಿಮಿನಲ್‌ಗಳಲ್ಲಿ ಒಬ್ಬನಾದ ಜೋಸೆಫ್‌ನ ಹೆಸರು ಕೇಳಿದರೆ ಆಫ್ರಿಕಾದಿಂದ ಅಮೆರಿಕಾದವರೆಗೆ ಜನರು ಬೆಚ್ಚಿ ಬೀಳುತ್ತಿದ್ದರು. ೧೯೬೧ರಲ್ಲಿ ಉಗಾಂಡದ ವೋಡ್ನ ಎನ್ನುವ ಪುಟ್ಟ ಊರಿನ ರೈತ ಕುಟುಂಬದಲ್ಲಿ ಹುಟ್ಟಿದ ಕೋನಿ ಬೆಳೆಯುತ್ತ ತನ್ನ ಅಣ್ಣ–ತಮ್ಮಂದಿರ ಜೊತೆ ಹಿಂಸಾಚಾರಕ್ಕೆ ಇಳಿದಿದ್ದನು. ಚಿಕ್ಕ ವಯಸ್ಸಿನಲ್ಲೇ ಆತನ ವಿಕೃತ ಮನಸ್ಸು ಹಿಂಸೆಗೆ ಪ್ರಚೋದನೆ ನೀಡಿದ್ದರ ಹಿನ್ನೆಲೆಯಲ್ಲಿ ಆತನ ವಿದ್ಯಾಭ್ಯಾಸಕ್ಕೆ ನಿರ್ಬಂಧ ಹೇರಲಾಯಿತು. ಈ ಸಮಯದಲ್ಲೇ ಅವನು ಶಾಲೆಗೆ ವಿದಾಯ ಹೇಳಿ ಕಾಡು ಸೇರಿ ಮಕ್ಕಳನ್ನೇ ತನ್ನ ಭಯಾನಕ ಸೇನೆಯ ಕೇಂದ್ರಬಿಂದುಗಳನ್ನಾಗಿ ಮಾಡಿಕೊಂಡು ಭಯೋತ್ಪಾದಕ ಕೃತ್ಯಗಳನ್ನು ಎಸಗುತ್ತಾ ಬಂದನು. ತನ್ನ ಸೈನ್ಯದ ಬಲವನ್ನು ಹೆಚ್ಚಿಸಿಕೊಳ್ಳಲು ಕೋನಿಯು ಗ್ರಾಮೀಣ ಪ್ರದೇಶಗಳ ಮೇಲೆ ದಂಡೆತ್ತಿ ಹೋಗುತ್ತಾನೆ, ಅಲ್ಲಿನ ಮಕ್ಕಳನ್ನು ಅಪಹರಿಸುತ್ತಾನೆ. ಈ ಸಮಯದಲ್ಲಿ ಅಡ್ಡ ಬಂದ ಹೆತ್ತವರನ್ನು ನಿರ್ದಾಕ್ಷಿಣ್ಯವಾಗಿ ಕೊಂದು ಹಾಕುತ್ತಾನೆ. ಹೀಗೆ ಅಪಹರಿಸಿದ ಮಕ್ಕಳನ್ನು ದಟ್ಟ ಅರಣ್ಯದ ನಡುವೆ ಇರುವ ತನ್ನ ಕ್ಯಾಂಪಿಗೆ ಕರೆದೊಯ್ದು ಮಕ್ಕಳ ಕಣ್ಣಿಗೆ ಬಟ್ಟೆ ಕಟ್ಟಿ ಅವರ ಕೈಗೆ ಏಕೆ-೪೭ ಗನ್ನು ಕೊಟ್ಟು ಬಂಧಿತ ವೈರಿಗಳನ್ನು ಮುಂದೆ ನಿಲ್ಲಿಸಿ ಮಕ್ಕಳ ಕೈಯಿಂದ ಶೂಟ್ ಮಾಡಿಸುತ್ತಾನೆ. ಹೀಗೆ ಜೋಸೆಫ್‌ನ ಸೇನೆ ಸೇರಿದ ಮಕ್ಕಳಿಗೆ ಕ್ರಮೇಣ ಡ್ರಗ್ಸನ ಪರಿಚಯವೂ ಆಗಿ ಅನೇಕ ದುಶ್ಚಟಗಳ ಬೆನ್ನು ಹತ್ತುತ್ತಾರೆ. ತನ್ನ ಸೇನೆಯಿಂದ ತಪ್ಪಿಸಿಕೊಳ್ಳುವ ಪ್ರಯತ್ನ ಮಾಡಿದ ಮಕ್ಕಳು ಸೇನೆಯ ಕಮಾಂಡರ್‌ಗಳ ಲೈಂಗಿಕ ಗುಲಾಮ ರಾಗುತ್ತಾರೆ.

ಹೀಗೆ ಜೋಸೆಫ್‌ನ ಗರಡಿಯಲ್ಲಿ ಪಳಗಿದ ಮಕ್ಕಳು ಬಾಂಬ್ ದಾಳಿ ಮಾಡುವುದರಲ್ಲೂ, ರಾಕೆಟ್ ಹಾರಿಸುವುದರಲ್ಲೂ, ದಟ್ಟ ಅರಣ್ಯದಲ್ಲಿ ನುಗ್ಗಿ ಪೊದೆಗಳ ನಡುವೆ ನುಸುಳಿ ದಾಳಿ ಮಾಡುವ ನೈಪುಣ್ಯತೆಯನ್ನು ಸಾಧಿಸಿರುತ್ತಾರೆ. ಇಂತಹ ಭಯಾನಕ ಸೇನೆಯ ಮಕ್ಕಳಿಂದ, ಬಾಲ್ಯದಲ್ಲೇ ವಿಕೃತ ಮನಸ್ಸಿನ ಹಿಂಸೆಯ ಪಾತಗಳಿಗೆ ಬಲಿಯಾದ ಜೋಸೆಫ್ ಕೋನಿಯಿಂದ ನಾವು ಏನನ್ನು ತಾನೇ ನಿರೀಕ್ಷಿಸಲು ಸಾಧ್ಯ?

ಹೀಗಾಗಿ ಒಂದು ಸನ್ನಡತೆಯ ನಾಗರಿಕ ಸಮಾಜದ ನಿರ್ಮಾಣಕ್ಕೆ ಮಕ್ಕಳನ್ನೇ ನಾವಿಂದು ಭದ್ರ ಬುನಾದಿಯನ್ನಾಗಿ ಬಳಸಿಕೊಳ್ಳಬೇಕಾಗಿದೆ. ಈ ಬಗೆಯ ನೈತಿಕತೆಯ ಮೊದಲ ಮೆಟ್ಟಿಲು ಗಳನ್ನಾಗಿ ತಾಯಿ ಪ್ರೀತಿಯ ಅನನ್ಯ ಪ್ರತಿರೂಪಗಳಾದ ಮೌಖಿಕ ಪರಂಪರೆಯ ಜೋಗುಳ ಹಾಡುಗಳನ್ನು ಅಥವಾ ಲಾಲಿ ಹಾಡುಗಳನ್ನು ನೋಡಬಹುದು.

ಲಾಲಿ ಲಾಲಿ ಲಾಲಿ . . . . ಜೊ . . . . ಜೊ . . . .!
ಕುರ್ರ್ಯೋ, ಕುರ್ರ್ಯೋ, ಕುರ್ರ್ಯೋ ನಾಯಿ . . . .!

ಅತ್ತಾರೆ ಅಳಲವ್ವಾ
ಅಳುವ ಕೂಸಿರಲಿ
ಕೆಟ್ಟಾರೆ ಕೆಡಲಿ ಮನೆಗೆಲಸ

ಆಡಾಕ ಹೋದಲ್ಲಿ
ಅಂಗೈಯ ನೋಡ್ಯಾರ
ಮುಂಗೈಯ ಮಣ್ಣ ಒರಸ್ಯಾರ ಕುರ್‍ಯೋ ಕುರ್‍ಯೋ . . .!

ಸಣ್ಣಂಗಿ ಸರದಾರ
ಬೆಳ್ಳಿಯ ಉಡುದಾರ
ಎಲ್ಲಾಡಿ ಬಂದ್ಯೋ ಮಗರಾಯ ಕುರ್‍ಯೋ ಕುರ್‍ಯೋ . . .!
ಲಾಲಿ ಲಾಲಿ ಲಾಲಿ . . . . ಜೋ . . . . ಜೊ . . . .!
ಅತ್ತಾರೆ ಅಳಲವ್ವಾ
ನಮ ಪುಟ್ಟಕ್ಕಾ
ಮುತ್ತೆಲ್ಲಿ ಉದುರ್‍ಯಾವೆ . . .![೧೦]

ಗಂಡು ಹೊರಗೆ ಹೋಗಿ ದುಡಿಯುವ ಮೂಲಕ ತನ್ನ ಬದುಕನ್ನು ತಾನು ಕಟ್ಟಿಕೊಳ್ಳುವ ಪ್ರಯತ್ನ ಮಾಡುತ್ತಿದ್ದರೆ, ಪ್ರತಿ ಮನೆಯ ತಾಯಿ ಸಹ ತನಗೆ ಗೊತ್ತಿದ್ದೋ, ಗೊತ್ತಿಲ್ಲದೇನೆ ತಾನು ಕುಳಿತಲ್ಲಿಂದಲೇ ಒಂದು ಸಮಾಜವನ್ನು ಕಟ್ಟುವ ಕೆಲಸದಲ್ಲಿ ನಿರತಳಾಗಿರುತ್ತಾಳೆ. ಈ ಮಾತನ್ನಿಲ್ಲಿ ಪ್ರಸ್ತಾಪಿಸಿದ ಉದ್ದೇಶವೆಂದರೆ ಮಗು ಅಳುವಾಗ ತನ್ನ ಮನೆಗೆಲಸ ಕೆಟ್ಟರೆ ಕೆಡಲಿ ಎನ್ನುವಲ್ಲಿ ಕೆಲಸಕ್ಕಿಂತ ಮಗುವೇ ಮುಖ್ಯ ಎಂಬುದನ್ನು ಸೂಚಿಸುತ್ತದೆ. ಈ ಬಗೆಯ ಮಕ್ಕಳ ಮೇಲಿನ ಅಪಾರ ಪ್ರೀತಿ ಮತ್ತು ಆ ಪ್ರೀತಿಯಿಂದಲೇ ಹುಟ್ಟಿದ ಈ ಜೋಗುಳ ಅಥವಾ ಲಾಲಿ ಹಾಡುಗಳು ಮಕ್ಕಳ ಕಾವ್ಯದ ಬೆಲೆಯನ್ನು ಹೆಚ್ಚಿಸುವುದರ ಜೊತೆ ಜೊತೆಗೆ ಪ್ರಸ್ತುತ ಸಮಾಜವನ್ನು ಇನ್ನಷ್ಟು ಆಗಬಹುದಾದ ಅವಘಡಗಳಿಂದ ತಪ್ಪಿಸಿ ಬೆಚ್ಚಗೆ ಕಾಪಿಟ್ಟಿದೆ.

ನಮ್ಮ ಬಾಲ್ಯಗಳು ಅಜ್ಜಿ ಕಥೆಗಳಿಂದ, ಜೋಗುಳ ಹಾಡುಗಳಿಂದ ಸಮೃದ್ಧವಾಗಿದ್ದವು. ಇಂದು ಎಷ್ಟೋ ಮನೆಗಳಲ್ಲಿ ಮಕ್ಕಳಿಗೆ ಜೋಗುಳ ಹಾಡುಗಳ ಬದಲಾಗಿ ಇಂದಿನ ಚಲನಚಿತ್ರ ಗೀತೆಗಳನ್ನು ಮೊಬೈಲ್‌ಗಳ ಮುಖಾಂತರ ಕೇಳಿಸಿ ಅಳುವ ಮಕ್ಕಳನ್ನು ಸುಮ್ಮನಿರಿಸುವ ಪ್ರವೃತ್ತಿಯನ್ನು ಇಂದು ಕಾಣಬಹುದು. ಕಾರಣ ಎಷ್ಟೋ ತಾಯಂದಿರಿಗೆ ಜೋಗುಳ ಹಾಡುಗಳೇ ನೆನಪಿರುವುದಿಲ್ಲ. ಚಲನಚಿತ್ರ ಗೀತೆಗಳು ಒಳ್ಳೆಯದಾದರೆ ಪರವಾಗಿಲ್ಲ. ಆದರೆ ಒಳ್ಳೆಯ ಚಲನಚಿತ್ರ ಗೀತೆಗಳನ್ನು ಕೇಳಿಸುವುದರಲ್ಲೂ ನಮ್ಮ ಬೇಜವಾಬ್ದಾರಿತನ ಎದ್ದು ತೋರುತ್ತಿದೆ.

ಉದಾ:- ೧. ಹೊಡಿ ಮಗ, ಹೊಡಿ ಮಗ
ಹೊಡಿ ಮಗ, ಹೊಡಿ ಮಗ, ಬಿಡಬೇಡ ಅವ್ನಾ

೨. ಅಪ್ಪಾ ಲೂಜಾ . . . ಅಮ್ಮಾ ಲೂಜಾ
ಅದು ಸರಿ, ಅದು ಸರಿ . . . !

ಈ ಬಗೆಯ ಗೀತೆಗಳು ಮಕ್ಕಳಿಗೆ ಕಲಿಸುವುದಾದರೂ ಏನನ್ನು ಎಂಬ ಪ್ರಶ್ನೆಗೆ ಬಹಳಷ್ಟು ಪೋಷಕರ ಬಳಿ ಉತ್ತರವೇ ಇಲ್ಲ ಎಂಬುದು ದುರಂತ. ತಂದೆ -ತಾಯಿ ಇಬ್ಬರೂ ನೌಕರಿಗೆ

ಹೋಗುವವರಿದ್ದರಂತೂ ಅಂತವರ ಮಕ್ಕಳ ಪಾಡು ಹೇಳತೀರದು. ಮಕ್ಕಳನ್ನು ಕೆಲವರು ಅನಿವಾರ್ಯವಾಗಿ "ಶಿಶು ಪಾಲನಾ ಕೇಂದ್ರ"(Child Care Centre)ಗಳಲ್ಲಿ ಅನಾಥರಂತೆ ಬಿಟ್ಟು ಹೋಗುತ್ತಾರೆ.

ಎಳೆಯ ವಯಸ್ಸಿನಲ್ಲಿ ತಂದೆ-ತಾಯಿಗಳ ಪ್ರೀತಿಯ ಆರೈಕೆಯಲ್ಲಿ ಬೆಳೆಯಬೇಕಾದ ಮಕ್ಕಳು ಆಧುನಿಕ ಬದುಕಿನ ಸಂಕೀರ್ಣ ಜೀವನ ಶೈಲಿಗಳಿಂದ ಮಕ್ಕಳು ಯಾವುದೋ ಸಂಸ್ಥೆಯಲ್ಲಿ, ಯಾರದೋ ಉಪಚಾರದಲ್ಲಿ ಬೆಳೆಯುತ್ತವೆ. ಇಲ್ಲಿ ನಾವು ಜೋಗುಳ ಹಾಡುಗಳನ್ನು ನಿರೀಕ್ಷೆ ಮಾಡಲು ಹೇಗೆ ಸಾಧ್ಯ? ಮಕ್ಕಳ ಕಾವ್ಯ ಇಲ್ಲಿ ಮಾಯವಾಗುವ ಸಾಧ್ಯತೆಗಳು ಹೆಚ್ಚಿರುತ್ತವೆ.

ಇಂದಿನ ಮಕ್ಕಳಿಗೆ ಅಳುವುದಕ್ಕೂ ಸ್ವಾತಂತ್ರ್ಯ ಇಲ್ಲ. ಈ ಹಿಂದೆ ಅಳುತ್ತಾ, ಹಾಡುತ್ತಾ, ಬೈಗುಳ ಕೇಳುತ್ತಾ ಎದ್ದು ಬಿದ್ದು ದೊಡ್ಡವರಾಗುವ ಜೀವನ ಕ್ರಮಗಳಿದ್ದವು. ಕೆಲವು ತಾಯಂದಿರು ಕಂಠಪಾಠ ಮಾಡಿದ ಒಂದು ಸೂತ್ರ : ಅಳಬೇಡ, ಅಳಬೇಡ ನೀನು' ಅಂತ ಹೆದರಿಸುವುದು. ಮಕ್ಕಳು ಸಹಜವಾಗಿ ಬೆಳೆಯಬೇಕೆಂದರೆ ಅವರನ್ನು ಅಳುವುದಕ್ಕೆ ಬಿಡಬೇಕು. ಆದರೆ ಅದು ಅತಿರೇಕಕ್ಕೆ ಹೋಗದಂತೆ ಮಾತ್ರ ತಡೆಯಬೇಕಿದೆ. ಇಲ್ಲವಾದಲ್ಲಿ ಅಳುವುದು ಮಗುವಿಗೆ ಒಂದು ರೋಗವೋ, ರೂಢಿಯೋ ಆಗಿ ಪರಿಣಮಿಸಬಹುದು. ಮಕ್ಕಳು ಯಾಕೆ ಅಳಬಾರ್ದು ಎನ್ನುವುದು ಸಹ ಯಕ್ಷ ಪ್ರಶ್ನೆಯಾಗಿಯೇ ಉಳಿದಿದೆ. ಮಕ್ಕಳನ್ನು ಅಳುವುದಕ್ಕೆ ಬಿಡಬೇಕು. ಆಗಲೇ ಅವರಿಗೆ ಆರ್ಥಿಕ ಪರಿಸ್ಥಿತಿಯ ಅರಿವು ಅಥವಾ ಒಂದರ ಕೊರತೆಯ ಅರಿವು ಉಂಟಾಗಬಹುದು. ಬದುಕು ಕೇವಲ ಸುಖದ ಯಾನವಲ್ಲ ಎಂಬ ಸತ್ಯದ ತಿಳುವಳಿಕೆಯನ್ನು ಚಿಕ್ಕಂದಿನಿಂದಲೇ ಕೊಡಬೇಕಾಗಿದೆ. ಅಳದೆ ಹಾಗೆ ಇರಲು ಮಕ್ಕಳು ಮಣ್ಣಿನ ಮುದ್ದೆಗಳಲ್ಲ, ಷೋಕೇಸಿನ ಬೊಂಬೆಗಳಲ್ಲ ಎಂಬುದನ್ನು ನಾವು ನೆನಪಿನಲ್ಲಿಡಬೇಕಾಗಿದೆ.

ಕೆಲವು ತಾಯಂದಿರು ಮಕ್ಕಳ ಅಳುವನ್ನು ನಿಲ್ಲಿಸುವ ಕಾರಣಕ್ಕೆ ಮಕ್ಕಳು ಕೇಳಿದ ಎಲ್ಲ ವಸ್ತುಗಳನ್ನು ಕೊಡಿಸುವ ಧಾವಂತಕ್ಕೆ ಬೀಳುತ್ತಾರೆ. ಇದುವೇ ಕೊಳ್ಳುಬಾಕ ಸಂಸ್ಕೃತಿಗೆ ನಾಂದಿ ಹಾಡುವ ಸಾಧ್ಯತೆ ಇರುತ್ತೆ. ಹೀಗೆ ಕೇಳಿದ್ದೆಲ್ಲ ಕೊಡಿಸುವ ರೂಢಿಯಿಂದಾಗಿ ಮಗುವಿಗೆ ಸೋಲಿನ ಅನುಭವವೇ ಆಗುವುದಿಲ್ಲ. ಇದು ತುಂಬಾ ಅಪಾಯಕಾರಿ ಬೆಳವಣಿಗೆಯಾಗಿದೆ. ಕಾರಣ ಮುಂದೊಂದು ದಿನ ಬೆಳೆದು ದೊಡ್ಡವರಾದ ಮಕ್ಕಳಿಗೆ ತಮಗೆ ಬೇಕೆನಿಸಿದ್ದನ್ನು ಪಡೆಯುವಲ್ಲಿ ವಿಫಲರಾದರೆ ಅಂತಹ ಮಕ್ಕಳು ಬಹುತೇಕ ಆತ್ಮಹತ್ಯೆಗೆ ಶರಣಾಗುತ್ತಾರೆ. ಕಾರಣ ಸೋಲನ್ನು ಮೆಟ್ಟಿ ನಿಲ್ಲುವ ಆತ್ಮವಿಶ್ವಾಸವನ್ನು ಅವರು ಕಳೆದುಕೊಂಡಿರುತ್ತಾರೆ. ಹಾಗಾಗಿಯೇ ನಮ್ಮ ಜನಪದರು ಮಕ್ಕಳ ಅಳುವನ್ನು ಕಾವ್ಯದ ವಸ್ತುಗಳನ್ನಾಗಿ ಸ್ವೀಕರಿಸುತ್ತಿದ್ದರು. ಇದು ಅವರ ಸಕಾರಾತ್ಮಕ ಚಿಂತನೆಗೆ ಸಾಕ್ಷಿಯಾಗಿದೆ.

**ಸಾಮಾಜಿಕ ಸಹಭಾಗಿತ್ವ**

ಮನೆಯೊಳಗಿನ ಸಂಬಂಧಗಳ ಜೊತೆ ತನ್ನನ್ನು ಬೆಸೆದುಕೊಂಡ ನಂತರ ಮಗು ಸಾಮಾಜಿಕವಾಗಿ ತನ್ನನ್ನು ತಾನು ತೆರೆದುಕೊಳ್ಳುವುದು ಮುಖ್ಯವಾಗುತ್ತದೆ. ಮೌಖಿಕ ಕಾವ್ಯದ ಮುಖ್ಯ ಲಕ್ಷಣ ಸಮಾಜದ ಜೊತೆ ಮುಖಾಮುಖಿಯಾಗುವುದು. ಈ ಮುಖಾಮುಖಿಯಾಗುವ ಸಂದರ್ಭಕ್ಕೆ ನಾಂದಿ ಹಾಡುವುದು ಮಗುವಿನ ಆಟಗಳು. ಅದಕ್ಕೆ ತಾಯಿಯೊಬ್ಬಳು.

ಆಡಿ ಬಾ ನನಕಂದ ಅಂಗಾಲ ತೊಳದೇನ
ತೆಂಗಿನಕಾಯಿ ತಿಳಿನೀರ | ತಕ್ಕೊಂಡು
ಬಂಗಾರದ ಮಾರಿ ತೊಳದೇನ ||[೧೧]

ಮಾನವ ಸಮಾಜ ಜೀವಿಯಾಗಿದ್ದು ಅವನು ಒಂಟಿಯಾಗಿ ಬಾಳಲಾರ. ತನ್ನ ಜೀವಿತದ ಬಹುಪಾಲು ಸಮಯವನ್ನು ವ್ಯಕ್ತಿ ಸಮಾಜದಲ್ಲೇ ಕಳೆಯುವುದರಿಂದ, ಸಮಾಜದಲ್ಲೇ ಬೆಳೆಯುವುದರಿಂದ, ಸಮಾಜದಲ್ಲೇ ಕಲಿಯುವುದರಿಂದ ಸಮಾಜ ಮಗುವಿನ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಆರೋಗ್ಯ-ಶಿಕ್ಷಣದಂತಹ ಮೂಲಭೂತ ಅವಶ್ಯಕತೆಗಳಿಂದ ಹಿಡಿದು ಬಹುತೇಕ ಸೌಲಭ್ಯಗಳನ್ನು ಸಮಾಜದಿಂದ ಪಡೆವ ವ್ಯಕ್ತಿ ಸಮಾಜಕ್ಕೆ ನೀಡುವುದಾದರೂ ಏನು? ಎಂಬ ಪ್ರಶ್ನೆಗೆ ನಿರುತ್ತರವೇ ಹೆಚ್ಚು. ಸಮಾಜ ಪ್ರಗತಿಪಥದಲ್ಲಿ ಸಾಗಬೇಕಾದರೆ, ಒಂದಿಷ್ಟು ಬದಲಾವಣೆಯಾಗಬೇಕಾದರೆ ವ್ಯಕ್ತಿ ಸಮಾಜಕ್ಕೆ ತನ್ನನ್ನು ತಾನು ಸಮರ್ಪಿಸಿಕೊಳ್ಳುವ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಬೇಕಾಗುತ್ತದೆ. ಇಂತಹ ಸಮರ್ಪಣಾ ಭಾವದ ಮೊದಲ ಮೆಟ್ಟಿಲುಗಳಾಗಿವೆ ಇಲ್ಲಿನ ಜೋಗುಳ ಹಾಡುಗಳು. ಮನೆಯಿಂದಾಚೆ ತೆರಳಿ ಹೊರಗೆ ಸಮಾಜದಲ್ಲಿ ತನ್ನ ಸ್ನೇಹ-ಸಂಬಂಧಗಳನ್ನು ಮಗು ವಿಸ್ತರಿಸಿಕೊಳ್ಳುವುದು ಈ ಆಟಗಳಿಂದ. ಇಲ್ಲಿ ಮಗುವಿನ ಆಟ ಕೇವಲ ಆಟವಾಗಿರದೇ ಮನೋರಂಜನೆಯಾಗಿರದೇ, ಕಲಿಕಾ ಪ್ರಕ್ರಿಯೆಯು ಆಗಿರುತ್ತದೆ. ಸಮಾಜದ ಅರಿವು ಮಗುವಿಗೆ ಉಂಟಾಗುವುದೇ ಆಟದ ಅನುಭವಗಳಿಂದ ಗಾದೆ ಮಾತೊಂದು ಹೀಗಿದೆ.

ಕೋಣ್ಯಾಗ ಬಿಟ್ಟ ಕೂಸು ಕ್ವಳಿತು
ಓಣ್ಯಾಗ ಬಿಟ್ಟ ಕೂಸು ಬೆಳಿತು

ಇಂದು ಮಕ್ಕಳು ಓಣಿಯ ಕೂಸಾಗಿ ಬೆಳೆಯುವುದಕ್ಕಿಂತಲೂ ಹೆಚ್ಚಾಗಿ ಕೋಣೆಯ ಕೂಸುಗಳಾಗಿ ಬೆಳೆಯುತ್ತಿವೆ. ಕಂಪ್ಯೂಟರ್, ಟಿ.ವಿ., ಸೆಲ್‌ಫೋನ್‌ಗಳ ಒಡನಾಟದಲ್ಲೇ ಹೆಚ್ಚು ಸಮಯ ಕಳೆಯುವ ಮಗು ನಾಲ್ಕು ಗೋಡೆಗಳಿಗಷ್ಟೇ ತನ್ನ ಪ್ರಪಂಚವನ್ನು ಸೀಮಿತಗೊಳಿಸಿ ಅಂತರ್ಮುಖಿಯಾಗುವ ಸಾಧ್ಯತೆ ಹೆಚ್ಚು. ಈ ಹಿನ್ನೆಲೆಯಲ್ಲಿ 'ಆಡಿ ಬಾ ನನಕಂದ' ಎನ್ನುವ ಸಾಲುಗಳು ಮಗು ಸಮಾಜಮುಖಿಯಾಗಲು ಹೆಚ್ಚು ಅನುವು ಮಾಡಿಕೊಡುತ್ತದೆ. ಇನ್ನೊಂದು ಪದ್ಯ ಹೀಗಿದೆ.

ಆಚಾರಕ್ಕೆ ಅರಸಾಗು
ನೀತಿಗೆ ಪ್ರಭುವಾಗು
ಜ್ಯೋತಿಯೇ ಆಗು ನೀ ಜಗಕೆಲ್ಲ[೧೨]

ಇಂದು ಆಚಾರ-ವಿಚಾರಗಳು ಕಾಣೆಯಾಗಿ ವಿಕಾರಗಳೇ ವಿಜೃಂಭಿಸುತ್ತ ಸಮಾಜವನ್ನು ದಿಕ್ಕು ತಪ್ಪಿಸುತ್ತಿವೆ. ಪ್ರಸ್ತುತ ಪದ್ಯದ 'ಜ್ಯೋತಿಯೇ ಆಗು ನೀ ಜಗಕೆಲ್ಲ' ಎಂಬ ಕೊನೆಯ ಸಾಲು ಮಗು ವ್ಯಕ್ತಿಯಾಗಿ ಬೆಳೆದು ನಿಂತಾಗ ತಾನು ಹುಟ್ಟಿ ಬೆಳೆದ ಸಮಾಜಕ್ಕೆ ಏನಾದರೂ ಕೊಡುಗೆ ಕೊಡುವ ಮೂಲಕ ಸಮಾಜಮುಖಿಯಾಗಬೇಕೆನ್ನುವ ಆಶಯವನ್ನು ತೆರೆದು ತೋರಿಸುತ್ತದೆ.

**ವೈಚಾರಿಕತೆ**

ಸಾಮಾಜಿಕ ಬದಲಾವಣೆ ಆಗಬೇಕಾದರೆ ವೈಚಾರಿಕವಾಗಿ ಚಿಂತನೆ ಮಾಡುವ ಗುಣವನ್ನು ಎಲ್ಲರೂ ಬೆಳೆಸಿಕೊಳ್ಳಬೇಕಾಗಿದೆ. ನಮ್ಮ ಮನಸು ಚಿಂತನಶೀಲ, ವಿಚಾರಶೀಲತೆಯಿಂದ ಕೂಡಿರಬೇಕು. ವಿಚಾರಗಳನ್ನು ಮಾಡದೇ ಹೋದರೆ ಮತಿಗೆ ಕೇಡನ್ನುಂಟು ಮಾಡಿದಂತೆಯೇ ಸರಿ. ಮತಿಗೆ ಕೇಡುಂಟು ಮಾಡುವವನು ಮತಿಗೇಡಿಯಾಗುತ್ತಾನೆ. ಮಕ್ಕಳನ್ನು ಮತಿಗೇಡಿಗಳಾಗುವ ಅಪಾಯದಿಂದ ತಪ್ಪಿಸಲು ಮಕ್ಕಳ ಕಾವ್ಯ ಆಗಾಗ ವೈಚಾರಿಕ ಅಂಶಗಳಿಂದ ಕೂಡಿದ ರಚನೆಗಳನ್ನು ಪ್ರಸ್ತುತಪಡಿಸುತ್ತಲೇ ಇದೆ. ಚಿಂತಾಮಣಿ ಕೊಡ್ಲೆಕೆರೆಯವರ ಮಕ್ಕಳ ಕಾವ್ಯವಾದ 'ಮೊಮ್ಮಗಳ ಮಾತು' ವೈಚಾರಿಕತೆಯಿಂದ ಕೂಡಿರುವುದನ್ನು ಗಮನಿಸಬಹುದು.

ಯುರೋಪಿನ ಪಿಜ್ಜಾ
ತಿನ್ನಬೇಡ ಅಜ್ಜ
ಹಸಿವಾದರೆ ತಿನ್ನು
ಸೇಬು, ಬಾಳೆಹಣ್ಣು

ಬಣ್ಣದ ಪಾನೀಯ
ಬೇಡ ಅಸಹನೀಯ
ಒಂದು ಲೋಟ ಹಾಲು
ಎಲ್ಲದಕ್ಕೂ ಮೇಲು

ದೋಸೆ, ಇಡ್ಲಿ, ವಡೆ
ತಿನ್ನಲೇನು ತಡೆ?
ನಮ್ಮೂರಿನ ತಿನಿಸು
ತಿನ್ನಲಿಕ್ಕೆ ಸೊಗಸು[೧೩]

ನಾವು ಇಂದು ತಿನ್ನುವ ಆಹಾರದ ಬಗ್ಗೆ ಹೆಚ್ಚಿನ ಕಾಳಜಿ ವಹಿಸಬೇಕಾದ ಅಗತ್ಯವಿದೆ. ಹಸಿವಾದರೆ ಪಿಜ್ಜಾ - ಬರ್ಗರ ತಿನ್ನುವ ರೂಢಿ ಇಂದಿನ ಯುವ - ಪೀಳಿಗೆಯಲ್ಲಿ ಚಾಲ್ತಿಯಲ್ಲಿದೆ.

ದಾಹವಾದರೆ ನೀರು, ಹಾಲು, ಮಜ್ಜಿಗೆ ಕುಡಿಯುವ ಹವ್ಯಾಸವಿದ್ದ ಭಾರತೀಯ ಆಹಾರ ಸಂಸ್ಕೃತಿಯಲ್ಲಿ ಪೆಪ್ಸಿ, ಕೋಲಾದಂತಹ ಬಣ್ಣದ ಪಾನೀಯಗಳು ದಾಂಗುಡಿ ಇಟ್ಟಿವೆ. ಇವುಗಳಿಂದ ದೇಶಿಯ ಆರೋಗ್ಯದಾಯಕ ನಿಸರ್ಗ ಸಹಜ ಪಾನೀಯವೆನಿಸಿದ ಎಳನೀರಿಗೆ ಇಂದು ಮಾರುಕಟ್ಟೆಯಲ್ಲಿ ಪ್ರತಿಸ್ಪರ್ಧಿಯ ಚಿಂತೆ ಎದುರಾಗಿದೆ. ಹಿಂದೆ ನೆಂಟರ ಮನೆಗೆ ಬಾಳೇಹಣ್ಣು, ಮಾವಿನಹಣ್ಣು, ದ್ರಾಕ್ಷಿ, ದಾಳಿಂಬೆ, ಸಪೋಟಾದಂತಹ ವಿಧ ವಿಧ ಹಣ್ಣುಗಳನ್ನು ಕೊಂಡೊಯ್ಯುತ್ತಿದ್ದರೆ ಇಂದು ಅವುಗಳ ಬದಲಿಗೆ ಕುರುಕುರೆಯಂತಹ ಮಸಾಲೆ, ಜಂಕಫುಡ್ ಪದಾರ್ಥಗಳನ್ನು ತಿನ್ನುವ ವ್ಯಸನಕ್ಕೆ ಮಕ್ಕಳು ಬಲಿಯಾಗುತ್ತಿದ್ದಾರೆ. ಶುಂಠಿಬಿಲ್ಲೆ ನಿಂಬೆಹುಳಿ, ಪೆಪ್ಪರಮೆಂಟಿನ ಜಾಗಕ್ಕೆ ಮಿಂಟೋ ಫ್ರೆಶ್, ಬಬಲ್‌ಗಮ್‌ಗಳು ಕಾಲಿಟ್ಟಿವೆ.

ಹೊಲದಲ್ಲಿ ಬೆಳೆಯುತ್ತಿದ್ದ ಹೆಸರಕಾಳು, ಮಡಿಕೆಕಾಳು, ಅವರೆಕಾಳು, ಬಟಾಣಿಕಾಳು, ಅಕ್ಕರಿಕೆಸೊಪ್ಪು, ಮೆಂತೆಸೊಪ್ಪು, ಪುದೀನಾ ಸೊಪ್ಪು, ಸಬ್ಬಸಿಗೆ ಸೊಪ್ಪು, ರಾಜಗಿರಿ ಸೊಪ್ಪುಗಳನ್ನು ಆಹಾರದಲ್ಲಿ ಬಳಸುವ ಮೂಲಕ ಹಾಗೂ ಕೊಬ್ಬರಿ, ಬೆಲ್ಲ, ಉತ್ತತ್ತಿ, ಅಂಟುಗಳಿಂದ ಮಾಡಿದ ಅಂಟಿನುಂಡೆ ಅಥವಾ ಕೊಬ್ಬರಿಖಾರದ ಉಂಡೆಗಳನ್ನು ತಿನ್ನುವ ಮೂಲಕ ಪೌಷ್ಟಿಕಾಂಶದ ಕೊರತೆಯನ್ನು ನೀಗಿಸಿ ಮಕ್ಕಳನ್ನು ಹೆಚ್ಚು ಸದೃಢರನ್ನಾಗಿಸುವ ಹೊಸ್ತಿಲಿನಿಂದಾಚೆ ನಿಂತ ಬಹುಪಾಲು ಪೋಷಕರು ಹಾರ್ಲಿಕ್ಸ್, ಕಾಂಪ್ಲೇನ್, ಬೂಸ್ಟ್‌ಗಳನ್ನು ಮಕ್ಕಳಿಗೆ ನೀಡುತ್ತಿದ್ದಾರೆ.

ಪ್ರಸ್ತುತ ಪದ್ಯದಲ್ಲಿನ ಪಿಜ್ಜಾ, ಬಣ್ಣದ ಪಾನೀಯಗಳಂತಹ ಪದ ಬಳಕೆ ಕೆಲವು ಉದಾಹರಣೆ ಗಳಷ್ಟೇ ಆಗಿವೆ. ಆದರೆ ಅದರಾಚೆ ಆಹಾರ ಸಂಸ್ಕೃತಿಯ ಅನಾರೋಗ್ಯಕರ ಬೆಳವಣಿಗೆಯ ಸೂಕ್ಷ್ಮಗಳನ್ನು ಈ ಪದ್ಯ ತನ್ನೊಳಗೆ ಅಡಕಗೊಳಿಸಿಕೊಂಡಿದೆ. ಜೊತೆಗೆ ಈ ಮೂಲಕ ಮಕ್ಕಳು ಏನನ್ನು ತಿನ್ನಬೇಕು, ಏನನ್ನು ತಿನ್ನಬಾರದು ಎಂಬ ಎಚ್ಚರದ ಸಂಗತಿಗಳನ್ನು ಇದು ತೆರೆದಿಟ್ಟಿದೆ. ತಿಂಡಿಗೆ ನೂಡಲ್ಸ್‌ನಂತಹ ಪದಾರ್ಥಗಳನ್ನು ಬಿಟ್ಟು ನಮ್ಮೂರಿನ ತಿನಿಸುಗಳಾದ ದೋಸೆ, ಇಡ್ಲಿ, ವಡೆಗಳನ್ನು ತಿನ್ನುವಂತೆ ಅಭಿಮಾನದಿಂದ ಹೇಳುವಲ್ಲಿ ದೇಶಿಯ ಆಹಾರ ಪದ್ಧತಿಯ ಬಗೆಗಿನ ಹೆಮ್ಮೆಯನ್ನು ಮಕ್ಕಳಲ್ಲಿ ಮೂಡಿಸುವಲ್ಲಿ ಇದು ಉಪಕಾರಿಯಾಗಿದೆ.

ಬಹುಮುಖಿ ಆಯಾಮಗಳನ್ನು ಹೊಂದಿರುವ ವೈಚಾರಿಕತೆಯು ಅಂಧಶ್ರದ್ಧೆ, ಮೂಢನಂಬಿಕೆ ಗಳನ್ನು ವಿರೋಧಿಸುತ್ತದೆ. ಜಂಬುನಾಥ ಕಂಚ್ಯಾಣಿಯವರ 'ನಮ್ಮೂರ ಜನರು' ಕವಿತೆ ಶುದ್ಧ ವೈಚಾರಿಕತೆಯ ರಚನೆಯಾಗಿದೆ. ಅಂಧಶ್ರದ್ಧೆಗಳ ಹಲವು ಮುಖಗಳನ್ನು ಇದು ತೆರೆದು ತೋರಿಸಿದೆ.

ನಮ್ಮ ಊರಿನಲಿ ದೊಡ್ಡ
ದಡ್ಡ ಜನರು ಇರುವರು
ಅಂಧ ಶ್ರದ್ಧೆಯಿಂದಲವರು
ಅಡ್ಡ ದಾರಿ ತುಳಿವರು

ಮಡಿಯನುಟ್ಟು ಭಜನೆ ಮಾಡಿ
ಮಳೆಯ ಕರೆದು ಕುಣಿವರು
ಕಾಡು ನಾಶದಿಂದ ಮಳೆಯು
ಬಾರದೆಂದು ಅರಿಯರು

ಚಂದ್ರನನ್ನು ದೇವರೆಂದು
ನಿತ್ಯ ಪೂಜೆಗೈವರು
ದೈವವಲ್ಲ ಉಪಗ್ರಹ
ಎನಲು ಹುಚ್ಚ ಎನುವರು

ಹಲ್ಲಿ ನುಡಿವ ಭಾಷೆಗೊಂದು
ಅರ್ಥ ಹಚ್ಚಿ ಬಿಡುವರು
ನಾಳೆ ದಿನದ ಆಗು - ಹೋಗು
ಬಗೆಗೆ ಶಕುನ ನುಡಿವರು

ದಾರಿಗಡ್ಡ ಬೆಕ್ಕು ಬರಲು
ಪಯಣವನ್ನು ತಡೆವರು
ದೇವರನ್ನು ಒಲಿಸಲೆಂದು
ಕುರಿಯ ಬಲಿಯ ಕೊಡುವರು

ಅರಿತು ಅರಿತು ತಪ್ಪು ಮಾಡಿ
ಹಣೆಯ ಬರಹ ಎನುವರು
ನೀತಿಯಲ್ಲಿ ನಾಕವಿಹುದು
ಎಂಬ ಮರ್ಮ ತಿಳಿಯರು

ಇವರುಗಳನು ತಿದ್ದುವಂಥ
ದಾರಿ ಬೇರೆ ಕಾಣೆನು
ಯಾರು ಬಂದು ತಿದ್ದಬೇಕು
ಬುದ್ಧಿ ಇಲ್ಲದವರನು"

ಬದುಕಲು ನಂಬಿಕೆ ಬೇಕು. ಆದರೆ ದುರಾದೃಷ್ಟವಶಾತ್ ಕೆಲ ಮೂಢನಂಬಿಕೆಗಳು ಸಹ ಇಂದು ಜನರ ಬದುಕನ್ನು ಸುತ್ತುವರೆದಿವೆ.

ಮೂಢನಂಬಿಕೆಯ ಬೇರುಗಳು ಎಷ್ಟು ಗಟ್ಟಿಯಾಗಿವೆ ಎಂಬುದಕ್ಕೆ ಪ್ರಸ್ತುತ ಪದ್ಯದ ಕೊನೆಯ ನಾಲ್ಕು ಸಾಲುಗಳು ಸಾಕ್ಷಿಯಾಗಿವೆ. ತಮ್ಮ ಸ್ವಾರ್ಥಕ್ಕಾಗಿ ಕಾಡನ್ನು ಕಡಿದ ಮಾನವ ಸಂಕುಲ ಕತ್ತೆ ಮೆರವಣಿಗೆ ಮಾಡುವುದು, ಮಡಿಯುಟ್ಟು ಭಜನೆ ಮಾಡುವುದು ಹೀಗೆ

ಒಂದೊಂದು ಪ್ರದೇಶದಲ್ಲಿ ಒಂದೊಂದು ಅಂಧಶ್ರದ್ಧೆಗಳಿವೆ. ಹಲ್ಲಿಯ ಲೊಚಗುಟ್ಟುವಿಕೆಗೆ ಶಕುನ ಎಂತಲೂ ಪ್ರಯಾಣದ ಸಂದರ್ಭದಲ್ಲಿ ಬೆಕ್ಕು ದಾರಿಗಡ್ಡ ಬರುವುದು ಅಪಶಕುನವೆಂತಲೂ, ಹಬ್ಬ-ಹರಿದಿನಗಳಲ್ಲಿ ಕುರಿ, ಕೋಳಿ, ಕೋಣಗಳ ಬಲಿ ಕೊಡುವುದು- ಹೀಗೆ ಇನ್ನೂ ಹತ್ತು-ಹಲವು ಅರ್ಥವಿಲ್ಲದ ಅಂಧಶ್ರದ್ಧೆಗಳನ್ನು ಮಾಡುತ್ತ ಮೂಢನಂಬಿಕೆಗಳ ದಾಸರಾಗಿದ್ದಾರೆ ನಮ್ಮ ಜನ. ಸಮಾಜದಿಂದ ಇವುಗಳನ್ನು ನಿರ್ಮೂಲನೆ ಮಾಡಬೇಕಾದರೆ ನಾಳಿನ ಬಾಳಿನ ಬೆಳಕಿನ ಕುಡಿಗಳಾದ ಮಕ್ಕಳಿಗೆ ಎಳೆತನದಿಂದಲೇ ವೈಚಾರಿಕತೆಯ ಪಾಠಗಳನ್ನು ಕಲಿಸಬೇಕಾಗಿದೆ. ಈ ನಿಟ್ಟಿನಲ್ಲಿ ಮಕ್ಕಳ ಕಾವ್ಯವು ಸಕ್ರಿಯವಾಗಿದೆ.

ವೈಚಾರಿಕತೆಯ ಮೂಲ ಕುತೂಹಲ ಅಥವಾ ಅರಿವ ಬೆರಗು. ಈ ಕುತೂಹಲದ ಗುಣ ಮಕ್ಕಳಲ್ಲಿ ಇರುವುದರಿಂದಲೇ ಮಕ್ಕಳು ಎಲ್ಲ ವಸ್ತು-ವಿಷಯಗಳ ಕುರಿತು ಪ್ರಶ್ನೆಗಳ ಸುರಿಮಳೆಯನ್ನೇ ಸುರಿಸುತ್ತಾರೆ. ದೊಡ್ಡವರಾದ ಹಾಗೆ ಈ ಕುತೂಹಲದ ಗುಣ ಕಾಣೆಯಾಗಿ ವ್ಯಕ್ತಿ ನಿರ್ಲಿಪ್ತತೆಯಿಂದ ಸಮಾಜ ಹೇಗೆ ಇರುವುದೋ ಹಾಗೆಯೇ ತನ್ನ ಬದುಕಿನ ಚಲನೆಯ ದಿಕ್ಕನ್ನು ಬದಲಿಸಿಕೊಳ್ಳುತ್ತಾನೆ. ಇದು ಅಪಾಯಕಾರಿ ಸಂಗತಿ. ಪ್ರಶ್ನಿಸುವ, ಪ್ರತಿಭಟಿಸುವ ಗುಣ ಇಲ್ಲದೇ ಹೋದರೆ ಸಾಮಾಜಿಕ ಬದಲಾವಣೆ ಅಸಾಧ್ಯ. ಹೀಗಾಗಿಯೇ ಪಳಕಳ ಸೀತಾರಾಮ ಭಟ್ಟರ 'ರಿಕ್ಷಾ ಮಾಮನಿಗೆ' ಎಂಬ ಕವಿತೆಯಲ್ಲಿ ರಿಕ್ಷಾ ಚಾಲಕನ ನಿರ್ಲಕ್ಷ್ಯ ಚಾಲನೆ ಹಾಗೂ ಇನ್ನಿತರ ಅವ್ಯವಸ್ಥೆಯ ಸಂಗತಿಗಳ ಬಗೆಗೆ ಪ್ರಶ್ನೆ ಮಾಡುವುದನ್ನು ತಣ್ಣಗೆ ಪ್ರತಿಭಟಿಸುವುದನ್ನು ನಾವು ಕಾಣಬಹುದು.

ರಿಕ್ಷಾ ಮಾಮ ಕೇಳ್ತಿಯೇನೂ
ಪ್ರಶ್ನೆ ಒಂದು ಈಗ
ಸಟ್ಟ ಅಂತ ಉತ್ರಾ ನೀನು
ಹೇಳ್ತಿಯೇನೂ ಬೇಗ?

ಇಂಗ್ಲಿಷ್ ಸ್ಕೂಲ್ನಾ ಮಕ್ಳು ನಾವು
ನಿಂದೇ ರಿಕ್ಷಾನಂಬಿ,
ಬರ್ತೇವಂತ್ಲೇ ಓಡಿಸ್ತೀಯಾ
ಲೆಕ್ಕಾ ಇಲ್ದೆ ತುಂಬಿ?

ಕಾಲಿಡ್ಲಿಕ್ಕೂ ಜಾಗಾ ಇಲ್ಲ
ನಿಲ್ಲೋದೆಲ್ಲಿ ಹೇಗೆ?
ಉಸಿರಾಡ್ಲಿಕ್ಕೂ ಆಗೋದಿಲ್ಲ
ಯಾಕ್ ತುಂಬಿಸ್ತಿ ಹೀಗೆ?

ಸೈಕಲ್, ಕಾರೂ, ಬಸ್ಸೂ, ಲಾರೀ
ಮಂದೀ ನಡುವೆ ತೂರಿ

ಗಡ್ ಬಡ್ ರಿಕ್ಷಾ ಒಡ್ಸೇ ಬಿಡ್ತಿ
ನೀ ತೋರಿದ್ದೇ ದಾರಿ

ರಸ್ತೆ ಮೇಸೇ ಇತ್ತೂ ಅಂದ್ರೆ
ವೇಗ ತಡೆಯೋ "ಹಂಪು"
ನಿನ್ನ ರಿಕ್ಷಾ ಮಾಡೋದುಂಟು
ಒಂದಾಳೆತ್ರs "ಜಂಪು"

ಆಗ್ಲೇ ಸ್ಕೂಲ್ ಬ್ಯಾಗ್ ಬುತ್ತಿ ರೂಲರ್
ಅಕ್ಕs ಪಕ್ಕ ಕುಕ್ಕಿ,
ರಿಕ್ಷಾದೊಳ್ಗೇ ಹೊಡ್ಕೊಳ್ತಾವೆ
ಮಂಡೇ ಮಂಡೇ ಡಿಕ್ಕಿ

ನೋವಿಗೆ ನಾವೇ ಬೊಬ್ಬಿಡ್ತೇವೆ
'ಅಯ್ಯೋ ಅಮ್ಮಾ ಸತ್ತೆ',
ಗಕ್ಕನೆ ಗಾಡಿs ನಿಲ್ಸಿ ನೋಡಿ
ಓಡಿಸ್ತೀಯಾ ಮತ್ತೆ

ಮೆಲ್ಲಗೆ ಓಡ್ಸೋ ಓ ಮಾರಾಯ
ತಲೆ ಬಾಗ್ತೇವೆs ನಿನ್ಗೆ
ಕೈಕಾಲ್ ಮಂಡೆ ಸರಿಯಾಗಿದ್ದೇ
ಮನೆ ಸೇರ್ಬೇಕೂ ನಮ್ಗೆ[೧೫]

ಪದ್ಯದಲ್ಲಿನ ಚಿತ್ರಣ ಕಲ್ಪಿತವಲ್ಲ. ಇಂತಹ ಪ್ರಸಂಗಗಳು ಆಗಾಗ ಸುತ್ತಮುತ್ತಲಿನ ಶಾಲಾ ವಾಹನಗಳಿಂದ ಜರುಗುತ್ತಲೇ ಇರುತ್ತವೆ. ಅಂತಹ ಘಟನೆಗಳಿಂದ ಪ್ರೇರಣೆ ಪಡೆದೇ ರಚಿತವಾದಂತ ಹಾಗೂ ಮಕ್ಕಳ ಮೇಲಿನ ದೌರ್ಜನ್ಯಗಳ ಪ್ರತಿಭಟನೆಯ ಧ್ವನಿಯಾದಂತಹ ಮಕ್ಕಳ ಕಾವ್ಯ ಇದಾಗಿದೆ. ಇತ್ತೀಚೆಗೆ ದಿನಾಂಕ ೨೯.೧೧.೨೦೧೩ರಂದು ಬೆಳಿಗ್ಗೆ ಸಮಯ ೭.೩೦ಕ್ಕೆ ಬೆಂಗಳೂರಿನ ರಿಚ್‌ಮಂಡ್‌ಟೌನ್ ರಸ್ತೆಯಲ್ಲಿ ಶಾಲಾ ಮಕ್ಕಳನ್ನು ತುಂಬಿಕೊಂಡ ಆಟೋವೊಂದು ರಸ್ತೆ ಬದಿಯಲ್ಲಿ ನಿಂತಿದ್ದ ಕಾರಿಗೆ ಡಿಕ್ಕಿ ಹೊಡೆದ ಪರಿಣಾಮ ಆಟೋದಲ್ಲಿದ್ದ ೭ ಜನ ಮಕ್ಕಳಿಗೆ ಗಾಯ ಸಂಭವಿಸಿದೆ. ಅಪಘಾತ ಸಂಭವಿಸಲು ಕಾರಣ ಅಗತ್ಯಕ್ಕಿಂತ ಹೆಚ್ಚು ಮಕ್ಕಳನ್ನು ತುಂಬಿರುವುದು ಹಾಗೂ ವೇಗದ ಚಾಲನೆಯಿಂದ ಹಠಾತ್ತನೆ ಚಾಲಕನ ನಿಯಂತ್ರಣ ತಪ್ಪಿದ ಆಟೋ ಕಾರಿಗೆ ಡಿಕ್ಕಿ ಹೊಡೆದಿದೆ ಎನ್ನುವುದಾಗಿದೆ. ಟಿ.ವಿ.ನಲ್ಲಿ ಇದು ಪ್ರಸಾರವಾದ ಮರುದಿನದಿಂದಲೇ ಎಚ್ಚೆತ್ತ ರಸ್ತೆ ಸಾರಿಗೆ ಸಂಸ್ಥೆ (R.T.O.) ಅಧಿಕಾರಿಗಳು ಬೆಂಗಳೂರಿನ ಬೇರೆ ಬೇರೆ ಭಾಗಗಳಲ್ಲಿ, ಬೇರೆ ಬೇರೆ ಸಂಸ್ಥೆಗಳ ಶಾಲಾ ವಾಹನಗಳ ತಪಾಸಣೆ ನಡೆಸಿದಾಗ,

ಬಹುತೇಕ ವಾಹನಗಳಲ್ಲಿ ಅಗತ್ಯಕ್ಕಿಂತಲೂ ಹೆಚ್ಚು ಮಕ್ಕಳನ್ನು ತುಂಬುವುದು ಹಾಗೂ ಕೆಲ ಸುರಕ್ಷತಾ ನಿಯಮಗಳನ್ನು ಪಾಲಿಸದೇ ಇರುವ ಅಂಶ ಬೆಳಕಿಗೆ ಬಂದಿದೆ. ದಿನಾಂಕ ೬.೧೨.೨೦೧೩ರಂದು ಸಹ ಅಧಿಕಾರಿಗಳು ಬೆಂಗಳೂರಿನ ಬಿಷಪ್ ಶಾಲೆ ಸೇರಿದಂತೆ ಹಲವು ಶಾಲಾ ವಾಹನಗಳ ಸಂಸ್ಥೆಗಳಿಗೆ ನೋಟೀಸ್ ಜಾರಿಗೊಳಿಸಿದ್ದಾರೆ. ಸುಪ್ರಿಂಕೋರ್ಟ್ ಪ್ರಕಾರ ೧೨ ವರ್ಷದ ಮೇಲ್ಪಟ್ಟ ಮಕ್ಕಳಾದರೆ ೩ ಜನ ಹಾಗೂ ೧೨ ವರ್ಷದ ಒಳಗಿನ ಮಕ್ಕಳಾದರೆ ೬ ಜನರನ್ನು ಮಾತ್ರ ಆಟೋವೊಂದು ಮಕ್ಕಳನ್ನು ತುಂಬ ಬೇಕೆಂಬ ನಿಯಮವಿದೆ.

ಬೆಂಗಳೂರಿನಲ್ಲಾದ ಈ ಘಟನೆಯಲ್ಲಿ ಮಕ್ಕಳಿಗೆ ಗಾಯ ಸಂಭವಿಸಿದ್ದು, ಹೆಚ್ಚು ಮಕ್ಕಳನ್ನು ತುಂಬಿಸಿದ್ದು, ವೇಗವಾಗಿ ಆಟೋ ಓಡಿಸಿದಂತಹ ಎಲ್ಲಾ ಸಂಗತಿಗಳು ಪಳಕಳ ಸೀತರಾಮಭಟ್ಟರ ಕಾವ್ಯದ ವಸ್ತುಗಳಾಗಿವೆ ಹಾಗೂ ವಿಶೇಷವೆಂದರೆ ಆಟೋಗಳ ಈ ಅವ್ಯವಸ್ಥೆಯ ವಿರುದ್ಧ ಮಕ್ಕಳೇ ಬಂಡಾಯವೆದ್ದಿರುವುದು. ಹೀಗೆ ಪ್ರಶ್ನಿಸುವ ಮತ್ತು ಪ್ರತಿಭಟಿಸುವ ಮೂಲಕ ವ್ಯವಸ್ಥೆಯನ್ನು ಸರಿಪಡಿಸುವ ವೈಚಾರಿಕ ಧೋರಣೆಯನ್ನು ಮಕ್ಕಳು ಬೆಳೆಸಿಕೊಳ್ಳುವಲ್ಲಿ ಮಕ್ಕಳ ಕಾವ್ಯ ಸಹಕಾರಿ ಯಾಗಿದೆ ಎನ್ನಬಹುದು.

**ಭಾವೈಕ್ಯತೆ**

ಭಾರತ ದೇಶವು ತನ್ನೊಡಲಲ್ಲಿ ಸಾವಿರಾರು ಜಾತಿ - ಧರ್ಮಗಳನ್ನು, ಸಾಂಸ್ಕೃತಿಕ ಭಿನ್ನತೆಗಳನ್ನು ಒಳಗೊಂಡಿದ್ದರೂ ಭಾವೈಕ್ಯತೆಯ ಬದುಕಿನ ಉದಾಹರಣೆಗಳಿಗೇನೂ ಕೊರತೆಯಿಲ್ಲ. ಮೊಹರಂನಂತಹ ಹಬ್ಬವನ್ನು ಹಿಂದೂ - ಮುಸ್ಲಿಂರು ಸೇರಿಯೇ ಸಂಭ್ರಮಿಸುತ್ತಾರೆ. ಯಮನೂರ ನಂತಹ ಉರುಸ್ಸುಗಳಲ್ಲಿ ಧರ್ಮಾಂಧತೆಯ ಸಣ್ಣ ಸುಳಿವು ಸಿಕ್ಕದೇ ಇರುವುದು ಕನ್ನಡಿಗರ ಸಾಮರಸ್ಯದ ಬದುಕಿಗೆ ಕನ್ನಡಿಯಾಗಿವೆ. ಸಾಮರಸ್ಯದ ಈ ಪರಂಪರೆಯನ್ನು ತಲೆಮಾರಿನಿಂದ ತಲೆಮಾರಿಗೆ ಹೊತ್ತೊಯ್ಯುವ ಜವಾಬ್ದಾರಿಯು ಹಿಂದೆಂದಿಗಿಂತಲೂ ಇಂದು ಅತಿಯಾಗಿದೆ. ಮಕ್ಕಳಿಗೆ ಈ ಪಾಠಗಳನ್ನು ನಾವು ಎಳೆತನದಲ್ಲಿ ಕೊಡದಿದ್ದರೆ ಮುಂದೆ ಸಮಾಜ ಕೋಮುವಾದ, ಮೂಲಭೂತವಾದಗಳಿಂದ ಹೊತ್ತಿ ಉರಿಯುವ ಸಾಧ್ಯತೆಗಳೇ ಹೆಚ್ಚು. ಈ ಹಿನ್ನೆಲೆಯಲ್ಲಿ ಶಂ.ಗು. ಬಿರಾದಾರ 'ನಮ್ಮ ಕನಸು' ಪದ್ಯ ಸಾರ್ವಕಾಲಿಕವಾದುದಾಗಿದೆ.

ನಾವು ಎಳೆಯರು ನಾವು ಗೆಳೆಯರು
ಹೃದಯ ಹೂವಿನ ಹಂದರ
ನಾಳೆ ನಾವೇ ನಾಡ ಹಿರಿಯರು
ನಮ್ಮ ಕನಸದು ಸುಂದರ

ಹಿಂದು ಮುಸ್ಲಿಂ ಕ್ರೈಸ್ತರೆಲ್ಲರಿಗೊಂದೆ
ಭಾರತ ಮಂದಿರ
ಶಾಂತಿದಾತನು ಗಾಂಧಿ ತಾತನು
ಎದೆಯ ಬಾನಿನ ಚಂದಿರ

ಜಾತಿ ರೋಗದ ಭೀತಿ ಕಳೆಯುತ
ನೀತಿ ಮಾರ್ಗದಿ ನಡೆವೆವು
ಒಂದೆ ಮಾನವ ಕುಲವು ಎನ್ನುತ
ವಿಶ್ವ ಧರ್ಮವ ಪಡೆವೆವು[೧೬]

ಭಾವೈಕ್ಯತೆಯ ಬೇರುಗಳು ಗಟ್ಟಿಯಾಗಿದ್ದಾಗಲೂ ಸಹ ಕೋಮುವಾದ ಅಲ್ಲಲ್ಲಿ ಹೊತ್ತಿ ಉರಿದ ಉದಾಹರಣೆಗಳು ಉಂಟು. "ಗುಜರಾತದ ಬೀದಿಯೊಂದರಲ್ಲಿ ಮುಸ್ಲಿಂ ಗರ್ಭಿಣಿಯ ಹೊಟ್ಟೆಯನ್ನು ಸೀಳಿ, ಭ್ರೂಣವನ್ನು ತ್ರಿಶೂಲಕ್ಕೆ ಸಿಕ್ಕಿಸಿ, ಆಕೆಯನ್ನು ರಸ್ತೆಯಲ್ಲಿ ಜೀವಂತವಾಗಿ ಸುಟ್ಟು ಪ್ರಕರಣವು, ಕೋಮುವಾದದ ಹೀನಾಯ ಕೃತ್ಯಕ್ಕೆ ಹಿಡಿದ ಕನ್ನಡಿಯಾಗಿದೆ. ೧೯೫೨ರಲ್ಲಿ, ೧೯೬೯ರಲ್ಲಿ ಹಾಗೂ ೧೯೮೪ರಲ್ಲಿ ದೆಹಲಿಯಲ್ಲಿ ಕೋಮುಗಲಭೆಗಳು ನಡೆದಿವೆ. ಆದರೆ ಫೆಬ್ರವರಿ ೨೦೦೨ರಲ್ಲಿ ಗುಜರಾತದಲ್ಲಿ ನಡೆದ ಕೋಮುಗಲಭೆ ಇವೆಲ್ಲಾ ಗಲಭೆಗಳನ್ನು ಮೀರಿಸಿ ರಕ್ತದ ಹೊಳೆ ಹರಿಸಿದೆ. ಕಣ್ಣೀರಿನ ಕೋಡಿಕಟ್ಟಿದೆ. ಅನೇಕ ಮುಸ್ಲಿಂ ಮಹಿಳೆಯರ ಮೇಲೆ ಅತ್ಯಾಚಾರ ಮಾಡಿದ್ದಾರೆ, ಕೂಸು-ಕಂದಮ್ಮಗಳನ್ನು ಸುಟ್ಟು ಹಾಕಿದ್ದಾರೆ."[೧೭]

"೧೯೯೩ರ ಏಪ್ರಿಲ್ ೧ ರಂದು ಭಟ್ಕಳದಲ್ಲಿ ಪ್ರಾರಂಭವಾದ ಕೋಮುಗಲಭೆ ಒಂದಿಲ್ಲೊಂದು ರೀತಿಯಲ್ಲಿ ವರ್ಷದುದ್ದಕ್ಕೂ ಮುಂದುವರಿಯಿತು. ಅಂದು ಶ್ರೀರಾಮ ನವಮಿ. ಆ ನಿಮಿತ್ಯ ಭಟ್ಕಳದ ಪ್ರಸಿದ್ಧ ಹನುಮಂತ ದೇವರ ರಥಯಾತ್ರೆ. ಅಂದು ಸಂಜೆ ರಥಯಾತ್ರೆ ಮುಗಿದು ಇನ್ನೇನು ಮಂದಿರ ತಲುಪುವ ಸಂದರ್ಭದಲ್ಲಿ ರಥದ ಮೇಲೆ ಮೂರು ಕಲ್ಲುಗಳು ಬಿದ್ದವು ಎಂಬ ವದಂತಿ ಎಲ್ಲೆಡೆ ಹರಡಿತು. ಅಂದೇ ರಾತ್ರಿ ಮುಸ್ಲಿಮರ ಮೇಲೆ ಹಲ್ಲೆಗಳು ಪ್ರಾರಂಭವಾದವು. ಪ್ರತಿ ಹಲ್ಲೆಗಳೂ ನಡೆದವು. ಇಡೀ ಭಟ್ಕಳಪಟ್ಟಣ ಮತ್ತು ಸುತ್ತಮುತ್ತಲಿನ ಗ್ರಾಮಗಳು ದುಷ್ಕರ್ಮಿಗಳ ಆಡುಂಬೊಲಗಳಾದವು."[೧೮]

ಈ ಹೊತ್ತಿನಲ್ಲೂ ಕೋಮು ಗಲಭೆ ತಡೆ ವಿಧೇಯಕ ಕುರಿತು ಚರ್ಚೆಗಳನ್ನು ನಡೆಯುತ್ತಿರುವುದನ್ನು ನೋಡಬಹುದು. ಪ್ರಧಾನಿ ಮನಮೋಹನಸಿಂಗ್ ಕೋಮು ವಿಧೇಯಕ ಜಾರಿಗೆ ತರಲು ಆಸಕ್ತಿ ಹೊಂದಿದ್ದರೆ ಪ್ರತಿಪಕ್ಷಗಳು ಈ ಕುರಿತು ಕೆಲ ಆರೋಪಗಳನ್ನು ಮಾಡಿರುವ ಸುದ್ದಿಗಳನ್ನು ಪತ್ರಿಕೆಗಳಲ್ಲಿ ನೋಡಬಹುದು.

ಶಂ.ಗು. ಬಿರಾದಾರ ಅವರ 'ನಮ್ಮ ಕನಸು' ಪದ್ಯದ ಸಾಲುಗಳು ಕೋಮುಗಲಭೆಯಂತಹ ಮನೋವಿಜ್ಞಾನದ ಕೃತ್ಯಗಳಿಂದ ಮಕ್ಕಳನ್ನು ಪಾರು ಮಾಡಲು ಸಹಕಾರಿಯಾಗಲಿದೆ ಎಂದು ಹೇಳಬಹುದು. ಮಕ್ಕಳು ನಿಜಕ್ಕೂ ಹೂವಿನ ಮನಸುಳ್ಳವರು. ಇಂತಹ ಹೂಮನಸಿನ ಮಕ್ಕಳಿಗೆ ಗಾಂಧೀಜಿಯಂತಹ ಮಹಾತ್ಮರು ಆದರ್ಶವಾಗಬೇಕಿದೆ ಎಂಬ ಆಶಯ ಹಾಗೂ ಸಾಮಾಜಿಕ ಪಿಡುಗುಗಳಲ್ಲಿ ಒಂದಾದ ಜಾತಿ ವ್ಯವಸ್ಥೆಯನ್ನು ಧಿಕ್ಕರಿಸಿ ವಿಶ್ವಮಾನವ ಕುಲದ ಬಗೆಗಿನ ಸಾಲುಗಳು ಮಕ್ಕಳಲ್ಲಿ ಭಾವೈಕ್ಯತೆಯ ಹಣತೆಯನ್ನು ಹಬ್ಬುವಂತಿವೆ.

**ಆತ್ಮವಿಶ್ವಾಸ**

ದಿನಪತ್ರಿಕೆಗಳಲ್ಲಿ ಓದಿದ ಸೂಕ್ತಿಯೊಂದನ್ನು ಇಲ್ಲಿ ಉದಾಹರಿಸಬಹುದು. "ಆಕಾಶವೇನು ಕುಸಿದು ಬೀಳುವುದಿಲ್ಲ. ಆದರೆ ಅದು ಒಮ್ಮೊಮ್ಮೆ ಬಿದ್ದರೂ ಬೀಳಬಹುದು. ನಮ್ಮೊಳಗಿನ ಆತ್ಮವಿಶ್ವಾಸವನ್ನು ಕಳೆದುಕೊಂಡಾಗ". ಬದುಕಲು ಆತ್ಮವಿಶ್ವಾಸ ಬೇಕು. ಆತ್ಮವಿಶ್ವಾಸ ಇದ್ದವರು ಮಾತ್ರ ಬದುಕಿನ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬಲ್ಲರು. ಮಕ್ಕಳು ಇಂದು ಅಧೀರರಾಗುತ್ತಿದ್ದಾರೆ. ಪರೀಕ್ಷೆಗಳಲ್ಲಿ ಫೇಲಾಗುವುದಿರಲಿ, ನಿರೀಕ್ಷೆಗಿಂತ ಒಂದು ಅಥವಾ ಎರಡು ಅಂಕಗಳು ಕಡಿಮೆ ಬಂದರೂ ಸಹ ಆತ್ಮಹತ್ಯೆಯ ಹಾದಿ ತುಳಿಯುತ್ತಿದ್ದಾರೆ. ಆತ್ಮಹತ್ಯೆ ನಮ್ಮ ಎಲ್ಲ ಸಮಸ್ಯೆಗಳಿಗೆ ಪರಿಹಾರವಾಗಲಾರದು 'ಈಸಬೇಕು, ಇದ್ದು ಜಯಿಸಬೇಕು' ಎಂಬ ತತ್ವವನ್ನು ನಮ್ಮ ಮಕ್ಕಳಿಗೆ ತಿಳಿಸಬೇಕಾಗಿದೆ ಹಾಗೂ ಅಂತಹ ಬದುಕನ್ನು ಬದುಕುಬೇಕಾಗಿದೆ. ಮಕ್ಕಳು ಸೋತಾಗ ಅವರನ್ನು ನಿಂದಿಸದೇ ಅವರು ಸೋತಿರುವುದು ಎಲ್ಲಿ? ಅದರ ಕಾರಣಗಳೇನು? ಎಂಬುದನ್ನು ಶೋಧಿಸಿ ತಿಳಿಸಿ ಆ ಹಿನ್ನೆಲೆಯಲ್ಲಿ ಒಂದಿಷ್ಟು ಪರಿಶ್ರಮಗಳನ್ನು, ಪ್ರಯತ್ನಗಳನ್ನು ಮಕ್ಕಳು ಮಾಡಲು ಪ್ರೇರೇಪಿಸಬೇಕಾಗಿದೆ. ಆಗ ಆತ್ಮವಿಶ್ವಾಸದ ಚಿಲುಮೆ ಮಕ್ಕಳಲ್ಲಿ ತನ್ನತಾನೇ ಚಿಮ್ಮುತ್ತದೆ. ಬದುಕೆಂದರೆ ಕೇವಲ ಗೆಲ್ಲುವ ಕುದುರೆಯಲ್ಲ, ಅಲ್ಲಿ ಸೋಲು ಇದೆ ಹಾಗೂ ಆ ಸೋಲಿನಿಂದಲೂ ಕೆಲ ಪಾಠಗಳನ್ನು ನಾವು ಕಲಿಯುವುದಿರುತ್ತದೆ ಹಾಗೂ ಸೋಲನ್ನೇ ಗೆಲುವಿನ ಮೆಟ್ಟಿಲನ್ನಾಗಿ ಮಾಡಿಕೊಳ್ಳುವುದೇ ಆತ್ಮವಿಶ್ವಾಸದ ಪ್ರತೀಕವಾಗಿರುತ್ತದೆ. ಎದೆಯಲ್ಲಿ ಅದಮ್ಯ ಆತ್ಮವಿಶ್ವಾಸವನ್ನು ತುಂಬುವ ಮಕ್ಕಳ ಕಾವ್ಯವೊಂದು ಹೀಗಿದೆ. ಕವಿತೆಯ ಶೀರ್ಷಿಕೆ "ಹಿಂದಿನ ಸಾಲಿನ ಹುಡುಗರು".

ಹಿಂದಿನ ಸಾಲಿನ ಹುಡುಗೆರು ಎಂದರೆ
ನಮಗೇನೇನೂ ಭಯವಿಲ್ಲ!
ನಮ್ಮಿಂದಾಗದು ಶಾಲೆಗೆ ತೊಂದರೆ
ನಮಗೆಂದೆಂದೂ ಜಯವಿಲ್ಲ!

ನೀರಿನ ಜೋರಿಗೆ ತೇಲದು ಬಂಡೆ;
ಅಂತೆಯೆ ನಾವೀ ತರಗತಿಗೆ!
ಪರೀಕ್ಷೆ ಎಂದರೆ ಹೂವಿನ ಚೆಂಡೆ?
ಚಿಂತಿಸಬಾರದು ದುರ್ಗತಿಗೆ

ಗೆದ್ದವರೆಲ್ಲಾ ನಮ್ಮವರೇ ಸರಿ;
ಗೆಲ್ಲುವಾತುರವೆ ನಮಗಿಲ್ಲ.
ಸೋತವರಿಗೆ ನಾವಿಲ್ಲವೆ ಮಾದರಿ?
ಕೆರೆಗೆ ಬೀಳುವುದು ತರವಲ್ಲ."[೯]

ಇಲ್ಲಿ ಕವಿ ಕೆ.ಎಸ್. ನರಸಿಂಹಸ್ವಾಮಿಯವರು ಸೋಲುವ ಮಕ್ಕಳಿಗೆ ಆತ್ಮಸ್ಥೈರ್ಯವನ್ನು ತುಂಬುವ ಕೆಲಸ ಮಾಡಿದ್ದಾರೆ. ಮುಂದುವರಿದು,

ತರಗತಿಗೇನೋ ನಾವೇ ಹಿಂದು;
ಹಿಂದುಳಿದವರೇ ನಾವಿಲ್ಲಿ!
ಆಟದ ಬಯಲಲಿ ನೋಡಲಿ ಬಂದು
ಆಂಜನೇಯರೇ ನಾವಲ್ಲಿ![೨೦]

ಎಂಬ ಸಾಲುಗಳು ಮಕ್ಕಳನ್ನು ನಮ್ಮ ಸಾಮಾಜಿಕ ಸ್ಥಾನಮಾನದ ಕಾರಣಕ್ಕೆ ಬಲಪಶುಗಳನ್ನಾಗಿ ಮಾಡದೇ ಅವರ ಆಸಕ್ತಿಯ ಕ್ಷೇತ್ರಗಳಲ್ಲೇ ಅವರನ್ನು ಮುನ್ನಡೆಸುವುದು ಸಹ ಆತ್ಮವಿಶ್ವಾಸವನ್ನು ಹೆಚ್ಚಿಸಿಕೊಳ್ಳಲು ನೆರವಾಗುತ್ತದೆ ಎಂಬುದನ್ನು ತಿಳಿಸುತ್ತವೆ.

**ಪರಂಪರೆ ಪ್ರಜ್ಞೆ**

ನಮ್ಮ ದೇಶ, ನಮ್ಮ ನಾಡು ಭಗತ್‌ಸಿಂಗ್, ಸಂಗೊಳ್ಳಿ ರಾಯಣ್ಣನಂತಹ ಕವಿಗಳ ವೀರ ಪರಂಪರೆಯನ್ನು, ಗಾಂಧಿಯಂತಹ ಶಾಂತಿಧೂತರ ಅಹಿಂಸಾ ಪರಂಪರೆಯನ್ನು, ಅಜಂತಾ ಎಲ್ಲೋರಾ, ತಾಜಮಹಲ್‌ನಿಂದ ಹಂಪಿ, ಬಿಜಾಪುರ, ಬಾದಾಮಿ, ಐಹೊಳೆ, ಪಟ್ಟದಕಲ್ಲುಗಳಲ್ಲಿನ ಅದ್ಭುತ ಎನಿಸುವ ಸುಂದರ ವಾಸ್ತುಶಿಲ್ಪ ಪರಂಪರೆಯನ್ನು, ಸಮೃದ್ಧ ಮೌಖಿಕ ಪರಂಪರೆಯ ಜೊತೆಗೆ ರವೀಂದ್ರನಾಥ ಟ್ಯಾಗೋರರಿಂದ ಪಂಪಾದಿ ಶರಣರ ಕುವೆಂಪುರವರೆಗೆ ಲಿಖಿತ ಸಾಹಿತ್ಯ ಪರಂಪರೆಯನ್ನು ಒಳಗೊಂಡಿವೆ. ಹೀಗೆ ಪರಂಪರೆಯ ಆಯಾಮಗಳು ಒಂದೆರಡಲ್ಲ. ಕಾಲೇಜು ವಿದ್ಯಾರ್ಥಿಗಳಿಗಾಗಿ 'ಪರಂಪರಾಕೂಟ'ಗಳನ್ನು ಹಮ್ಮಿಕೊಳ್ಳುವ ಮೂಲಕ ಯುವಕ-ಯುವತಿಯರಿಗೆ ಪರಂಪರೆಯ ಅರಿವು ಮೂಡಿಸುವ ಕೆಲಸ ಈಗಾಗಲೇ ನಡೆಯುತ್ತಿದೆ. ಇತಿಹಾಸ ಅಕಾಡೆಮಿಗಳಿಂದ 'ಐತಿಹಾಸಿಕ ಸಪ್ತಾಹ'ದಂತಹ ಕಾರ್ಯಕ್ರಮಗಳನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಆದರೆ ಮಕ್ಕಳಿಗಾಗಿ ಶಾಲೆಗಳಲ್ಲಿ ಶೈಕ್ಷಣಿಕ ಪ್ರವಾಸವೊಂದನ್ನು ಬಿಟ್ಟರೆ ಪರಂಪರೆಯ ಅರಿವು ಮೂಡಿಸಲು ಇರುವ ದಾರಿ ಎಂದರೆ ಅದು ಮಕ್ಕಳ ಕಾವ್ಯ ಮಾತ್ರ. ಸಂಗಮೇಶ ಬಾಗಲಕೋಟರ ರಚನೆಯೊಂದನ್ನು ಇಲ್ಲಿ ಉದಾಹರಿಸಬಹುದು.

**ಗೋಲಗುಮ್ಮಟ**

ನಿಂತು ಕೆಳಗೆ ನೋಡು ಮೇಲೆ
ಗೋಲಗುಮ್ಮಟ ।
ಬಾನಿನಗಲ ಗೋಲ ತಲೆಯು
ಎಂಥ ಅದ್ಭುತ ॥

ಮೆಟ್ಟಿಲೇರು, ತಿರುಗು ದಾರಿ
ಮೇಲೆ ಕರೆವುದು ।

ದಣಿವು ಕಳೆಯೆ ಕೂಡುವಾಸನ
ಅಲ್ಲಿ ಇರುವುದು ॥

ಒಂದೆ ಕೂಗು ಏಳು ಸಲವು
ಕೇಳಿ ಬರುವುದು ।
ಎದುರು ಗೋಡೆಯಲ್ಲಿ ನುಡಿದ
ಮಾತು ಕೇಳ್ವುದು ॥

ಜಗದಚ್ಚರಿ ನೋಡು ತಮ್ಮ
ಗೋಲಗುಮ್ಮಟ ।
ಜನರ ಮನವ ಸೂರೆಗೊಂಡ
ಕಲೆಯ ಕಮ್ಮಟ ॥[೨೧]

ಗೋಲಗುಮ್ಮಟದ ಬಗೆಗಿನ ಈ ಸಾಲುಗಳು ನಮ್ಮ ಪೂರ್ವಿಕರು ವಾಸ್ತುಶಿಲ್ಪಕ್ಕೆ ನೀಡಿದ ಮಹತ್ವ ಏನೆಂಬುದನ್ನು ತಿಳಿಸುತ್ತ ಪರಂಪರೆಯ ಅರಿವು ಮೂಡಿಸುತ್ತವೆ. ಒಂದು ಸಲ ಕೂಗಿದರೆ ಏಳು ಸಲ ಕೇಳಿ ಬರುವುದು ಮಕ್ಕಳಿಗೆ ಅಚ್ಚರಿಯ ಸಂಗತಿಯ ಜತೆಗೆ ಮನೋರಂಜನೆ ಯನ್ನು ನೀಡುತ್ತದೆ. ವ್ಯಕ್ತಿ ವಿಷಯಕ್ಕೆ 'ಗಾಂಧಿ ತಾತ' ಪದ್ಯದ ಕೆಲ ಸಾಲುಗಳನ್ನು ನೋಡಬಹುದು.

ಕಾಲಲಿ ಜೋಡು ಕೈಯಲಿ ಕೋಲನು
ಹಿಡಿಯುತ ಜಗವನು ಸುತ್ತಿದನು
ಭಾರತ ಜನತೆಗೆ ಅಂಟಿದ ಸುಂಕಿನ
ಬೇರು ಸಹಿತ ಅವಕಿತ್ತಿದನು

ಪಂಚೆಯ ಉಟ್ಟನು ಪಂಜೆಯ ಹೊದ್ದನು
ಬಾರತ ಮಾತೆಯ ಬಿಡುಗಡೆಗೆ
ಉಪವಾಸದಲಿ ಸೆರೆಮನೆ ಸೇರುತ
ಬಹುಪರಿ ನೊಂದನು ಅಡಿಗಡಿಗೆ[೨೨]

ಎ.ಕೆ. ರಾಮೇಶ್ವರ ಅವರು ಇಲ್ಲಿ 'ಪಂಜೆಯ ಉಟ್ಟನು' ಎನ್ನುವಲ್ಲಿ ಗಾಂಧೀಜಿಯವರ ಉಡುಗೆ-ತೊಡುಗೆಯಲ್ಲಿ ಅವರ ಸರಳ ವ್ಯಕ್ತಿತ್ವ ಅಡಗಿರುವುದನ್ನು ಸೂಚಿಸಿದ್ದಾರೆ. ಸ್ವಾತಂತ್ರ್ಯಕ್ಕಾಗಿ ಸೆರೆಮನೆ ಸೇರಿ ಉಪವಾಸ ಮಾಡಿದ್ದು ಗಾಂಧೀಜಿಯವರಿಗೆ ಇದ್ದ ದೇಶಪ್ರೇಮವನ್ನು ಎತ್ತಿತೋರಿ ಸುತ್ತದೆ.

ಕರಿಯರು ಬಿಳಿಯರು ಎನುವುದೇತಕೆ
ಮಾನವ ಜಾತಿಯು ಒಂದಿರಲು
ಸತ್ಯ ಅಹಿಂಸೆಯ ಪಾಲಿಸಬೇಕೆಲೋ
ನೀತಿಯ ಜನ್ಮಕೆ ಬಂದಿರಲು"[೨೩]

ಗಾಂಧೀಜಿಯವರ ಅಹಿಂಸಾತತ್ವ ಮಕ್ಕಳಿಗೆ ಆದರ್ಶವಾಗಬೇಕಿದೆ. ವರ್ತಮಾನದ ಆಧುನಿಕ ಜೀವನಶೈಲಿಗಳ ಕುರಿತು ತಿಳಿದುಕೊಂಡಷ್ಟು ನಮ್ಮ ಮಕ್ಕಳು ನಮ್ಮ ಪರಂಪರೆಯ ಬಗ್ಗೆ ತಿಳಿದುಕೊಂಡಿಲ್ಲ. ಈ ಹಿನ್ನೆಲೆಯಲ್ಲಿ ಮಕ್ಕಳ ಕಾವ್ಯವು 'ಪರಂಪರೆ'ಯನ್ನು ಪರಿಚಯಿಸುವ ಕೆಲಸ ಮಾಡುತ್ತಿದೆ.

**ಪ್ರಾಮಾಣಿಕತೆ**

ಮಗುವಿನ ವ್ಯಕ್ತಿತ್ವ ವಿಕಸನದ ಅಂಶಗಳಲ್ಲಿ 'ಪ್ರಾಮಾಣಿಕತೆ'ಯು ಒಂದು. ಪ್ರಾಮಾಣಿಕತೆಯ ಕೊರತೆ ಬದುಕಿನ ಶೈಲಿಗಳಲ್ಲಿ ಇಂದು ಎದ್ದು ತೋರುತ್ತಿವೆ. ಅನ್ಯರಿಗೆ ವಂಚನೆ ಮಾಡುವುದು, ಕೊಟ್ಟ ವಚನ ಪಾಲಿಸದೇ ವಚನ ಭ್ರಷ್ಟರಾಗುವುದು, ತನ್ನದಲ್ಲದ ವಸ್ತುವನ್ನು ಬಯಸುವುದು. ಹೀಗೆ ಅಪ್ರಾಮಾಣಿಕತನದ ಸಂಗತಿಗಳು ನೂರೆಂಟು. ಇವು ವ್ಯಕ್ತಿಯ ವೈಯಕ್ತಿಕ ಜೀವನವನ್ನು ಅಧಃಪತನದತ್ತ ಕೊಂಡೊಯ್ಯುವುದಲ್ಲದೆ, ಅನ್ಯರ ಬದುಕನ್ನು ಹಾಳು ಮಾಡುತ್ತವೆ. ಕಂಚ್ಯಾಣಿ ಶರಣಪ್ಪನವರ ಪದ್ಯವೊಂದನ್ನು 'ಪ್ರಾಮಾಣಿಕತೆ'ಗೆ ಉದಾಹರಣೆಯಾಗಿ ನೋಡಬಹುದು. ಕವಿತೆಯ ಶೀರ್ಷಿಕೆ 'ಸತ್ಯ ಸಂದ ಮಾದ'.

ಹಿಂದೆ ಇದ್ದನೊಬ್ಬ ಬಡವ
ಹೆಸರು ಮಾದನೆಂಬುವ
ಕಾಡಿನಲ್ಲಿ ಸೌದೆ ಕಡಿದು
ದುಡಿದು ಹೊಟ್ಟೆ ಹೊರೆಯುವ

ಮಾದನಂದು ಕೆರೆಯ ದಡದಿ
ಕಡಿಯುತ್ತಿದ್ದ ಕಟ್ಟಿಗೆ
ಕಡಿವ ಕೊಡಲಿ ಜಾರಿ ಬಿತ್ತು
ಆಳವಾದ ನೀರಿಗೆ

ಕೊಡಲಿ ಹೋಯಿತಯ್ಯೋ! ದೇವ
ಎಂದು ಅಳುತ ಕುಳಿತನು
ಅವನ ಮೊರೆಯ ಕೇಳಿ ದೇವ
ಇಳಿದು ಬಳಿಗೆ ಬಂದನು

"ಯಾರು ನೀನು? ಏಕೆ ಅಳುವೆ?
ಏನು ಎಂಥ ಸಂಕಟ?
ನಾನು ನಿನ್ನ ನೆರವಿಗಿರುವೆ
ಬಂದದೇನು ಕಂಟಕ?"

ದೇವನೆಂದು ತಿಳಿಯ ಮಾದ
ನಡೆದುದನ್ನು ಹೇಳಿದ

"ನನ್ನ ಕೊಡಲಿ ನನಗೆ ಬೇಕು!"
ಎಂದು ಅಳುತ ಬೇಡಿದ

ದೇವ ನೀರಿನಲ್ಲಿ ಮುಳುಗಿ
ಕೊಡಲಿಯೊಂದ ತಂದನು
ಬೆಳ್ಳಿ ಕೊಡಲಿ ಕಂಡ ಮಾದ
"ನನ್ನದಲ್ಲವೆಂದನು".

ಚಿನ್ನದೊಂದು ಕೊಡಲಿಯನ್ನು
ದೇವ ತಂದು ತೋರಿದ
ಅದಕು ಆಶೆಪಡೆದ ಮಾದ
ಅಲ್ಲವೆಂದೆ ಹೇಳಿದ

ಕಬ್ಬಿಣದ ಕೊಡಲಿಯನ್ನು
ಅವನ ಕೈಗೆ ಇತ್ತನು
ಮಾದನದನು ಅಪ್ಪಿಕೊಂಡು
ಹಿಗ್ಗಿನಿಂದ ಕುಣಿದನು

ಬಡವನಾದರೇನು ಮಾದ
ಆಶೆ ಮೋಸವರಿಯನು
ಕನಸಿನಲ್ಲೂ ಸುಳ್ಳು ಹೇಳ-
ದಂಥ ಸತ್ಯವಂತನು

ದೇವನವನ ಒಳ್ಳೆಗುಣಕೆ
ಮೆಚ್ಚಿ ತಲೆಯ ತೂಗಿದ
ಚಿನ್ನ-ಬೆಳ್ಳಿ ಕೊಡಲಿಗಳನು
ಅವಗೆ ಇತ್ತು ಕಳುಹಿದ

ನೆರೆಯ ಮನೆಯ ಅವನ ಗೆಳೆಯ
ಈರನಿದನು ತಿಳಿದನು
ನಾನು ಅಂತೆ ಪಡೆವೆನೆಂದು
ಕಾಡಿನತ್ತ ನಡೆದನು

ಹೊತ್ತು ತಂದ ಕೊಡಲಿಯನ್ನು
ಕೆರೆಗೆ ಚೆಲ್ಲಿಬಿಟ್ಟನು
"ಅಯ್ಯೋ ಕೊಡಲಿ ಹೋಯಿತೆಂದು"
ಬಿಡದೆ ಬೊಬ್ಬೆ ಇಟ್ಟನು

ಮೊದಲಿನಂತೆ ದೇವ ಬಂದು
ಅವನ ಮೊರೆಯ ಕೇಳಿದ
ಕೆರೆಗೆ ಹಾರಿ ಚಿನ್ನದೊಂದು
ಕೊಡಲಿಯನ್ನು ತೋರಿದ

ಆಶೆ ಬುರುಕ ಈರ ತನ್ನ-
ದೆಂದು ಕೈಯ ಚಾಚಿದ
ಕೊಡಲಿಯನ್ನು ಕೊಡದೆ ದೇವ
ಸಿಟ್ಟುಗೊಂಡ ಹೇಳಿದ

"ಈರ ನೀನು ಮೋಸಗಾರ"
ಎಂದು ಮಾಯವಾದನು
ಇದ್ದ ಕೊಡಲಿ ಕಳೆದುಕೊಂಡು
ಮನೆಯ ದಾರಿ ಹಿಡಿದನು.[೨೪]

ಇಲ್ಲಿ ಆಕಸ್ಮಿಕವಾಗಿ ಕೊಡಲಿ ಕಳೆದುಕೊಂಡ ಮಾದ ಬಡವನಾದರೂ ಸಹ ಅವನೊಬ್ಬ ಪ್ರಾಮಾಣಿಕ ವ್ಯಕ್ತಿ ಎಂಬುದು ಚಿನ್ನ-ಬೆಳ್ಳಿಗಳ ಕೊಡಲಿಯ ನಿರಾಕರಣೆಯಿಂದ ತಿಳಿದುಬರುತ್ತದೆ. ನೆರೆಮನೆಯ ಈರ ಕಪಟ ಬುದ್ಧಿಯಿಂದ, ದುರಾಸೆಯಿಂದ ತನ್ನದಲ್ಲದ ಚಿನ್ನ, ಬೆಳ್ಳಿ ಕೊಡಲಿಗಳನ್ನು ಬಯಸಿ ಮಾದನಂತೆ ಮಾಡ ಹೋಗಿದ್ದಕ್ಕೆ ತನ್ನಲ್ಲಿದ್ದ ಕಬ್ಬಿಣದ ಕೊಡಲಿಯನ್ನು ಕಳೆದುಕೊಳ್ಳುವುದು ಮಾಡಿದ ತಪ್ಪಿಗೆ ದಂಡ ತೆರುವಂತಾಯಿತು. ಮಾದನ ಸತ್ಯ ಸಂಧತೆ ಮಕ್ಕಳನ್ನು ಆದರ್ಶ ಜೀವನದ ಕಡೆಗೆ ಮನಸ್ಸು ಮಾಡುವಂತೆ ಮಾಡಿದರೆ, ಈರನ ದುರಾಸೆ, ವಂಚನೆ, ಅದರಿಂದ ಅವನಿಗಾದ ಅಪಮಾನ ನಷ್ಟಗಳು ಮಕ್ಕಳನ್ನು ಎಚ್ಚರದಿಂದ ಇರುವಂತೆ ಮಾಡುತ್ತವೆ. ಈ ಬಗೆಯ ಪದ್ಯಗಳ ಮೂಲಕ ಪ್ರಾಮಾಣಿಕತನದ ಪಾಠಗಳನ್ನು ಮಕ್ಕಳಿಗೆ ಕೊಡಬೇಕಾಗಿದೆ.

### ಸ್ನೇಹ ಪರತೆ

ಕಷ್ಟಗಳು ಬದುಕಿನ ಒಂದು ಭಾಗವೇ ಆಗಿವೆ. ಅವುಗಳಾಚೆ ನಿಂತು ಬರಿ ಸುಖವನ್ನೇ ನಾವು ಕಲ್ಪಿಸಿಕೊಳ್ಳುವುದು ಸಾಧ್ಯವಿಲ್ಲದ ಮಾತು. ಕಷ್ಟ-ಸುಖಗಳು ಬದುಕಿನ ಒಂದೇ ನಾಣ್ಯ ಎರಡು ಮುಖಗಳು. ಆಪತ್ಕಾಲದಲ್ಲಿ ಆಸರೆಯಾಗಿ ನಿಲ್ಲುವುದು ಸಂಬಂಧಗಳೇ. ಸಂಬಂಧಗಳಲ್ಲಿ ಸ್ನೇಹ ಸಂಬಂಧವೂ ಒಂದು. ಗೆಳೆತನದ ಪ್ರಸಂಗವೊಂದನ್ನು ಕುರಿತ ಕಂಚ್ಯಾಣಿ ಶರಣಪ್ಪನವರ ಕವಿತೆಯೊಂದು ಹೀಗಿದೆ.

ಕೋಲನೂರಿ ಬಾಗಿ ಬಾಗಿ
ಕುಂಟ ನಡೆದು ಬಂದನು
ಅತ್ತ ಇತ್ತ ಕಾಲು ಸವರಿ
ಕುರುಡ ನಡೆಯುತ್ತಿದ್ದನು

ಹಾದಿಗುಂಟ ಕುರುಡು ಕುಂಟ
ಕೂಡಿಕೊಂಡು ನಡೆದರು
ಮನಸ್ಸು ಬಿಚ್ಚಿ ಮಾತನಾಡಿ
ಗೆಳೆಯರಾಗಿ ಬಿಟ್ಟರು

ಕೆಟ್ಟ ಬಿಸಿಲು, ಕಲ್ಲು ಮುಳ್ಳು
ದಾರಿ ತುಳಿಯುತ್ತಿದ್ದರು
ಹೊಟ್ಟೆ ಹಸಿವು ದೇಹ ದಣಿವು
ಎಲ್ಲವನ್ನು ಮರೆತರು

ಮಾರ್ಗ ಮಧ್ಯದಲ್ಲಿ ಹಳ್ಳ
ತುಂಬಿ ಹರಿಯುತ್ತಿದ್ದಿತು
ಅದನು ದಾಟಿ ನಡೆವುದೆಂತು?
ಪಯಣ ನಿಂತೆ ಹೋಯಿತು

ಅವರು ಆಗ ಕುಳಿತುಕೊಂಡು
ಮಾಡುತಿಹರು ಯೋಚನೆ
ಮಿಂಚಿನಂತೆ ಹೊಳೆಯಿತಾಗ
ಯುಕುತಿಯೊಂದು ಥಟ್ಟನೆ

ಕುಂಟನನ್ನು ಕುರುಡ ಹೆಗಲ
ಮೇಲೆ ಹೊತ್ತು ನಡೆದನು
ಮೇಲೆ ಕುಳಿತ ಕುಂಟ ಅವಗೆ
ಹಾದಿ ಹೇಳುತ್ತಿದ್ದನು

ಕುಂಟ ಆಗ ಕಣ್ಣು ಆದ
ದಾರಿ ತೋರಿ ಕುರುಡಗೆ
ಕುರುಡ ತಾನೆ ಕಾಲು ಆದ
ಮೇಲೆ ಕುಳಿತ ಕುಂಟಗೆ

ಕುರುಡ - ಕುಂಟ ಕೂಡಿಕೊಂಡು
ಹಳ್ಳ ದಾಟಿ ಬಿಟ್ಟರು
ಒಬ್ಬರೊಬ್ಬರಲ್ಲಿ ನೆರವು
ಪಡೆದು ಮುಂದೆ ನಡೆದರು[39]

ಆಕಸ್ಮಿಕವಾಗಿ ದಾರಿಯಲ್ಲಿನ ಕುರುಡ - ಕುಂಟರಿಬ್ಬರ ಭೇಟಿ ಗೆಳೆತನಕ್ಕೆ ನಾಂದಿ ಹಾಡುತ್ತದೆ. ಮಾರ್ಗ ಮಧ್ಯದಲ್ಲಿ ಬಂದ ಹಳ್ಳ ದಾಟುವ ಸಮಸ್ಯೆಯನ್ನು ಪರಸ್ಪರ ಸ್ನೇಹ ಸಹಕಾರದಿಂದ

ಮೆಟ್ಟಿ ನಿಂತರು. ಒಳ್ಳೆಯ ಸ್ನೇಹ ಹೀಗೆ ಬದುಕಿಗೆ ಭರವಸೆ ತುಂಬುವ ಕೆಲಸ ಮಾಡುತ್ತದೆ. ಆದರೆ ದುಷ್ಟರ ಗೆಳೆತನ ಮಾಡಿದರೆ ಅದು ಯಾವ ಸಂದರ್ಭದಲ್ಲಾದರೂ ಸಂಚಕಾರ ತರಬಹುದು ಎಂಬ ಸಂದೇಶವು ಕಂಚ್ಯಾಣಿ ಶರಣಪ್ಪನವರ "ದುಷ್ಟರ ಗೆಳೆತನ" ಕವಿತೆಯಲ್ಲಿ ವ್ಯಕ್ತವಾಗಿದೆ.

ರಾಜನ ಮಂಚದ
ಮೇಗಡೆ ಮೆತ್ತಗೆ
ಹಾಸಿಗೆ ಹಾಸಿತ್ತು

ಅಲ್ಲಿಯೇ ಅಂದದ
ಬೆಳ್ಳಿಯ ಬಣ್ಣದ
ಕೂರಿಯು ಇರುತ್ತಿತ್ತು

ರಾಜನ ಮೈಯನು
ಕಚ್ಚದೆ ಕೂರಿಯು
ಕೊಬ್ಬನು ತಿನುತಿತ್ತು

ಸದ್ದನು ಮಾಡದೆ
ಗದ್ದಲು ಇಲ್ಲದೆ
ಚಂದದಿ ಇರುತ್ತಿತ್ತು

ಕೂಳನು ಕಾಣದ
ತಗಣಿಯು ತಿರುಗುತೆ
ಅಲ್ಲಿಗೆ ಬಂದಿತ್ತು

ಕೂರಿಯ ಗೆಳೆತನ
ಮಾಡುತ ಮೆಲ್ಲಗೆ
ಮಂಚವ ಸೇರಿತ್ತು

ಮಲಗಿದ ರಾಜನ
ಮೈಯನು ಕಚ್ಚುತೆ
ರಕ್ತವ ಹೀರಿತ್ತು

ಯಾರಿಗು ಕಾಣದ
ತೆರದಲಿ ಮಂಚದ
ಸಂದಿಯ ಸೇರಿತ್ತು

ತಗಣಿಯ ಕಾಟವ
ತಾಳದೆ ರಾಜನು

ಆಳನು ಕೂಗಿದನು

ಕಚ್ಚಿದ ಕ್ರಿಮಿಯನು
ಹುಡುಕಿಸಿ ಕೊಲ್ಲಲು
ಅಪ್ಪಣೆ ಮಾಡಿದನು

ಹುಡುಕಲು ತಗಣಿಯ
ಬದಲಿಗೆ ಕೂರಿಯು
ಕಣ್ಣಿಗೆ ಬಿದ್ದಿತ್ತು

ದುಷ್ಟರ ಗೆಳೆತನ[೨೨]
ಮಾಡಿದ ತಪ್ಪಿಗೆ
ಮರಣವೆ ಕಾದಿತ್ತು![೨೬]

ತನ್ನಷ್ಟಕ್ಕೆ ತಾನು ಹಾಯಾಗಿದ್ದ ಕೂರಿಯು ತಗಣಿಯ ಸ್ನೇಹದಿಂದ ಮರಣದ ಶಿಕ್ಷೆಯನ್ನು ಅನುಭವಿಸಿದ್ದು ಮನ ಕಲಕುವಂತಿದೆ. 'ದುಷ್ಟರ ಕಂಡು ದೂರ ಇರು' ಎಂಬ ಗಾದೆ ಇಲ್ಲಿ ನೆನಪಾಗುತ್ತದೆ. ಸಾಮಾಜಿಕ ಪರಿಸರದಲ್ಲಿ ಸ್ನೇಹ ಸಂಬಂಧಗಳು ಯಾರ ಜೊತೆ ಹೇಗಿರಬೇಕೆಂಬ ಸೂಕ್ಷ್ಮವನ್ನು ಮಕ್ಕಳಿಗೆ ಹೇಳಬಯಸುತ್ತವೆ ಇಲ್ಲಿನ ಮಕ್ಕಳ ಕಾವ್ಯಗಳು.

**ಸಂಸ್ಕೃತಿ**

'ಸಂಸ್ಕೃತಿ' ಪದದ ಅರ್ಥವ್ಯಾಪ್ತಿ ತುಂಬಾ ವಿಶಾಲವಾದುದು. ಆದರೆ ಸಾಮಾನ್ಯ ಅರ್ಥದಲ್ಲಿ ನಮ್ಮ ನಡೆ-ನುಡಿ, ಆಚಾರ-ವಿಚಾರವೆಲ್ಲವನ್ನು ನಾವು ಸಂಸ್ಕೃತಿ ಎಂದೇ ಪರಿಭಾವಿಸುತ್ತೇವೆ. ಸಂಸ್ಕೃತಿಯಲ್ಲಿ ಒಳ್ಳೆಯದು ಮತ್ತು ಕೆಟ್ಟದ್ದು ಎಂಬ ಸಂಗತಿಗಳಿವೆ. ಕೆಟ್ಟ ಸಂಸ್ಕೃತಿಗೆ ವಿದಾಯ ಹೇಳಿ ಒಳ್ಳೆಯ ಸಂಸ್ಕೃತಿಯ ಅರಿವನ್ನು ಮಕ್ಕಳಲ್ಲಿ ಮೂಡಿಸಬೇಕಿದೆ. ಜಾತ್ರೆ, ಹಬ್ಬಗಳೆಲ್ಲವೂ ಸಂಸ್ಕೃತಿಯ ಪರಿಧಿಯಲ್ಲಿಯೇ ಬರುವಂತವುಗಳಾಗಿವೆ. ಹಬ್ಬಗಳ ಸಂದರ್ಭದಲ್ಲಿ ಪ್ರಾಣಿ ಬಲಿಯಂತಹ ಹಿಂಸೆಯ ಸಂಸ್ಕೃತಿಯನ್ನು ಕಾಣಬಹುದು ಇದನ್ನು ವಿರೋಧಿಸುವುದನ್ನು ಈ ಹಿಂದೆ ಮಕ್ಕಳ ಪದ್ಯಗಳಲ್ಲಿ ನೋಡಿದ್ದೇವೆ. ಜಾತ್ರೆಯಲ್ಲಿನ ಕೆಲ ಸಾಂಸ್ಕತಿಕ ವಿವರಗಳನ್ನು ಜಿ.ಎಸ್. ಯಳ್ಳೂರ ಅವರ 'ಜಾತ್ರೆಗೆ ಹೋಗೋಣ' ಪದ್ಯದಲ್ಲಿ ಕಾಣಬಹುದು.

ಅಜ್ಜನ ಕೂಡ, ಸಜ್ಜಾಗಿ ನಾವು
ಜಾತ್ರೆಯ ನೋಡಲು
ಹೋಗೋಣ
ಅಮ್ಮನು ಕಟ್ಟಿದ ಬುತ್ತಿಗಂಟು
ನೆಂಟರ ಮನೆಗೆ
ಒಯ್ಯೋಣ

ಬಂಧುಬಳಗ, ಅಕ್ಕಮಾವ
ಎಲ್ಲರ ಕೂಡ
ಬೆರೆಯೋಣ
ನೋವು-ನಲಿವು ಹೇಳುತ - ಕೇಳುತ
ಬೇಸರವೆಲ್ಲ ಮರೆಯೋಣ

ಜಾತ್ರೆಗೆ ಹೋಗಿ, ತೇರನು ಜಗ್ಗಿ
ಹೂವು - ಹಣ್ಣು
ಹಾರಿಸೋಣ
ಭಕ್ತಿ - ಭಾವ, ತುಂಬಿದ ಮನದಿ
ದೇವರ ಪಾದಕೆ
ನಮಿಸೋಣ

ಆಡಲು ಗೊಂಬೆ, ಊದಲು ಪೀಪಿ
ಬಗೆ ಬಗೆ ಆಟಿಕೆ
ಕೊಳ್ಳೋಣ
ಬೆಂಡು ಬೆತ್ತಾಸ, ಲಡಕಿ ಉಂಡಿ
ಉಬ್ಬಿ - ಉಬ್ಬಿ
ತಿನ್ನೋಣ

ಜಾತ್ರೆ ಮುಗಿಸಿ, ಸಂಜೆ ಸಮಯ
ಮನೆಯ ನಾವು
ಸೇರೋಣ
ಯಾತ್ರೆ ಸಡಗರ, ಅಕ್ಕನ ನಲ್ನುಡಿ
ಅಮ್ಮನ ಮುಂದೆ ಹೇಳೋಣ[೨೭]

ಈ ಕವಿತೆಯಲ್ಲಿ ಜಾತ್ರೆಗೆ ಹೋಗುವ, ತೇರನು ಎಳೆಯುವ, ಹೂವು-ಹಣ್ಣು ಎಸೆಯುವ, ದೇವರಿಗೆ ನಮಿಸುವ, ಜಾತ್ರೆಯಲ್ಲಿ ಗೊಂಬೆ, ಪೀಪಿಯಂತಹ ಬಗೆ ಬಗೆ ಆಟಿಕೆ ಕೊಳ್ಳುವ, ಬೆಂಡು ಬೆತ್ತಾಸ, ಉಂಡಿ ಇತ್ಯಾದಿಗಳನ್ನು ತಿನ್ನುವ ವಿವರಗಳೆಲ್ಲವೂ ನಮ್ಮ ಸಂಸ್ಕೃತಿಯನ್ನೇ ತೆರೆದಿಡುತ್ತವೆ. ಮಕ್ಕಳು ಜಾತ್ರೆಗಳಲ್ಲಿ ಭಾಗವಹಿಸುವ ಮೂಲಕ, ಈ ಬಗೆಯ ಮಕ್ಕಳ ಕಾವ್ಯ ಮಕ್ಕಳೊಳಗಿನ ಸಾಂಸ್ಕೃತಿಕ ಪ್ರಜ್ಞೆಯನ್ನು ಎಚ್ಚರವಾಗಿರಿಸಿ ಕ್ರಮೇಣ ಅವರನ್ನು ಒಂದು ಸಂಸ್ಕೃತಿಯ ಚೌಕಟ್ಟಿನೊಳಗೆ ಬದುಕುವಂತೆ ಪ್ರೇರೇಪಿಸುತ್ತದೆ. ನಮ್ಮ ನಾಡಿನ ಹಬ್ಬಗಳು ಒಂದಕ್ಕಿಂತ ಒಂದು ವೈಶಿಷ್ಟ್ಯ ಪೂರ್ಣವಾಗಿವೆ. ಪಂಚಮಿ ಹಬ್ಬ ತರಹೇವಾರಿ ಉಂಡಿಗಳ ಹಬ್ಬವಾಗಿದ್ದು, ಜೋಕಾಲಿ ಆಡುವುದು ಪಂಚಮಿಯ ನಾಗದೇವರಿಗೆ ಹಾಲು ಎರೆಯುವುದು ವಿಶೇಷ. ಯುಗಾದಿಗೆ ಹಸಿರು

ತೋರಣ, ಎಳ್ಳು ಬೆಲ್ಲಗಳ ತಿನಿಸು, ದೀಪಾವಳಿಯಲ್ಲಿ ದೀಪಗಳದ್ದೇ ಸಂಭ್ರಮ, ಮಕ್ಕಳಂತೂ ಪಟಾಕಿಗಳನ್ನು ಹಚ್ಚುವ ಸಂಭ್ರಮದಲ್ಲಿ ತಲ್ಲೀನರಾಗಿರುತ್ತಾರೆ. ಮನೆತುಂಬ ದೀಪಗಳ ಸಾಲು. ಹೀಗೆ ಹಬ್ಬ-ಹರಿದಿನ, ಆಚಾರ-ವಿಚಾರ, ಉಡುಗೆ-ತೊಡುಗೆ ಎಲ್ಲ ನಮ್ಮ ಸಂಸ್ಕೃತಿಯ ಸಂಕೇತವೇ ಆಗಿವೆ. ಮಕ್ಕಳಿಗೆ ನಮ್ಮ ನೆಲದ ಸಂಸ್ಕೃತಿಯನ್ನು ಪರಿಚಯಿಸುವ ಕೆಲಸವನ್ನು ಮಕ್ಕಳ ಕಾವ್ಯ ತಪ್ಪದೇ ಮಾಡುತ್ತ ಬಂದಿದೆ.

**ಪರಿಸರ ಪ್ರಜ್ಞೆ**

ಪರಿಸರ ಪ್ರಜ್ಞೆ ಎನ್ನುವಲ್ಲಿ ನಾವು ಮುಖ್ಯವಾಗಿ ಎರಡು ಅಂಶಗಳನ್ನು ನೋಡಬಹುದು.

೧. ಕೆಲ ಸಾಮಾನ್ಯ ವಸ್ತು-ವಿಷಯಗಳ ಕುರಿತ ತಿಳುವಳಿಕೆ

೨. ಪರಿಸರ ಕಾಳಜಿ

ಮೊದಲನೆಯದಾಗಿ ಕೆಲ ಸಾಮಾನ್ಯ ವಸ್ತು-ವಿಷಯಗಳ ಕುರಿತ ತಿಳುವಳಿಕೆಗೆ ಸಂಬಂಧಪಟ್ಟಂತೆ ಹೇಳುವುದಾದರೆ ಎಷ್ಟೋ ಮಕ್ಕಳಿಗೆ ಮಳೆ ಬರುವುದು ಹೇಗೆ? ಎಂಬುದರಿಂದ ನಮ್ಮ ಬದುಕಿನ ಮೂಲಭೂತ ಅವಶ್ಯಕತೆಗಳಲ್ಲಿ ಒಂದಾದ 'ಆಹಾರ'ಗಳ ಮೂಲ . ಏನು? ಅಂದರೆ ಅದನ್ನು ಎಲ್ಲಿ ಬೆಳೆಯುತ್ತಾರೆ. ಹೇಗೆ ಬೆಳೆಯುತ್ತಾರೆ? ಯಾರು ಬೆಳೆಯುತ್ತಾರೆ? ಇತ್ಯಾದಿ ಈ ಬಗೆಯ ತಿಳುವಳಿಕೆ ಇಲ್ಲ. ಇಂತಹ ತಿಳುವಳಿಕೆಗಳಿಂದ ವಂಚಿತರಾದ ಮಕ್ಕಳು ಎಲ್ಲವನ್ನು ಹಣದ ಹಿನ್ನೆಲೆಯಲ್ಲಿ ವ್ಯಾಖ್ಯಾನಿಸಲು ಪ್ರಯತ್ನಿಸುತ್ತಾರೆ. ಹಣ ಕೊಟ್ಟರೆ ಎಲ್ಲವೂ ಸಿಗುತ್ತದೆಂಬ ಭ್ರಮಾ ಮೂಲ ಲಹರಿಯಲ್ಲಿ ಬದುಕಲು ಅಣಿಯಾಗುತ್ತಾರೆ. ಈ ಹಿನ್ನೆಲೆಯಲ್ಲಿ ನಾವು ಮಕ್ಕಳಿಗೆ ಮಕ್ಕಳ ಕಾವ್ಯದ ಮೂಲಕ ಕೆಲ ತಿಳುವಳಿಕೆಗಳನ್ನು ನೀಡಬಹುದು. ಅಣ್ಣಾರಾಯ ಸಾಲಿಮನಿಯವರ 'ನೀರು, ಅನ್ನ, ಹವೆ' ಕವಿತೆಯಲ್ಲಿ ಮಳೆಯ ಕುರಿತ ಮಾಹಿತಿಗಳಿರುವುದನ್ನು ಕಾಣಬಹುದು.

ಆವಿಯಾಗಿ ಮೋಡದಿಂದ
ಮಳೆಯು ಸುರಿಯುತ್ತಿರುವುದು
ಮಳೆಯ ನೀರು ಹಳ್ಳ - ಕೊಳ್ಳ
- ಗಳಲಿ ಬೇಗ ಹರಿವುದು

ಮತ್ತೆ ಬಾವಿ ಕೆರೆಗಳಲ್ಲಿ
ನೀರು ನಿಲ್ಲುತಿರುವುದು
ನದಿಗಳಲ್ಲಿ ಸೇರಿ ಸಾಗ -
ರವನು ಕೂಡುತಿರುವುದು

ಸೂರ್ಯ ಶಾಖದಿಂದ ಕಾಯ್ದು
ನೀರು ಮತ್ತೆ ಆವಿಯು

ಮೋಡವಾಗಿ ವರುಷಕ್ಕೊಮ್ಮೆ
ಸುರಿವುದಿಲ್ಲಿ ಸೋನೆಯು[೨೮]

ಆವಿಯಿಂದ ಮೋಡ, ಮೋಡದಿಂದ ಮಳೆ, ಮಳೆಯಿಂದ ಭರ್ತಿಯಾಗುವ ಹಳ್ಳ-ಕೊಳ್ಳ, ನದಿ-ಸಾಗರಗಳು, ಪುನಃ ಸೂರ್ಯನ ಶಾಖದಿಂದ ಕಾದು ನೀರು ಮತ್ತೆ ಆವಿಯಾಗುವುದು ಈ ಎಲ್ಲ ಪ್ರಕ್ರಿಯೆಗಳನ್ನು ಮಕ್ಕಳಿಗೆ ಸರಳವಾಗಿ ತಿಳಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಅಮೃತೇಶ ತಂಡರ ಅವರ 'ಮಳೆ ಬಂತು ಮಳೆ' ಪದ್ಯದಲ್ಲಿ ಮಳೆ ಮತ್ತು ರೈತನಿಗಿರುವ ಸಂಬಂಧ ಕುರಿತ ಚಿತ್ರಣಗಳನ್ನು ನಾವಿಲ್ಲಿ ನೋಡಬಹುದು.

ಗುಡು ಗುಡು ಎಂದು ಗುಡುಗುತ ಬಂದನು
ಭೂಮಿಗೆ ಮಳೆರಾಯ
ಹೊಲಗದ್ದೆಗಳಲಿ ಹರಿದಾಡುತ್ತ
ತುಂಬಿದನು ಕೆರೆಯ

ಹಸಿಯಾಗಿರುವ ಹೊಲವನು ಕಂಡು
ರೈತನು ಖುಷಿಯಾದ
ಬೀಜವ ಬಿತ್ತಿ ಬೆಳೆಯನು ತೆಗೆಯಲು
ಕೂಡಲೆ ಅಣಿಯಾದ[೨೯]

ಹಾಗೆಯೇ ಮುಂದುವರೆದು ಎಂ.ಡಿ. ಗೋಗೇರಿಯವರ 'ಗ್ರಾಮದ ಗೆಳೆಯರು' ಕವಿತೆಯಲ್ಲಿ;

ಉಳುವ ರೈತನು ಬೆಳೆದು ಕೊಡವನು
ಜೋಳ ಕಾಳನು ಉಣ್ಣಲು
ಹಳ್ಳಿ ಪಟ್ಟಣಕಿವನೆ ದಾತನು
ಬಾಳ ಸೌಖ್ಯವ ಪಡೆಯಲು[೩೦]

ಹಾಗೆಯೇ ಸತ್ಯಾರ್ಥಿ ಚೆನ್ನಬಸಪ್ಪ ಹೊಸಮನಿಯವರ 'ಅನ್ನದಾತ' ಕವಿತೆಯಲ್ಲಿ.

ರೈತ ನಮ್ಮ ಅನ್ನದಾತ
ಹೊಲದಿ ದುಡಿದೆ ದುಡಿವನು
ನಾಡ ಜನರು ಬದುಕಲೆಂದು
ದವಸ ಧಾನ್ಯ ಬೆಳೆವೆನು

ಮಳೆಯ ಗುಡುಗು, ಚಳಿಯ ನಡುಗು
ಬಿಸಿಲ ಬೇಗೆ ಸಹಿಸುತ
ಬೆವರು ಸುರಿಸಿ ಕಷ್ಟ ಸಹಿಸಿ
ಒಂದೇ ಸಮನೆ ದುಡಿಯುತ

ಎತ್ತು ಎರಡು ಅವನ ಜೋಡು
ಕೂಡಿ ದುಡಿವ ಗೆಳೆಯರು
ಹಿಗ್ಗು ಕುಗ್ಗು ಏನೇಯಿರಲಿ
ಹೊಂದಿಕೊಂಡು ನಡೆವರು.[೨೧]

ಇಲ್ಲಿ ಉದಾಹರಿಸಿದ ಮೂರು ಕವಿತೆಗಳಲ್ಲೂ ಮಳೆಯಿಂದ ಭೂಮಿ ಹಸಿಯಾಗುವುದು, ಹಸಿಯಾದ ಭುವಿಯಲ್ಲಿ ಬೀಜ ಬಿತ್ತಿ ಬೆಳೆಯನು ತೆಗೆವುದು. ರೈತನ ಕಾರ್ಯಕ್ಕೆ ಎತ್ತುಗಳೆರಡು ಹೆಗಲಾಗಿ ನಿಲ್ಲುವುದು, ಚಳಿ, ಮಳೆ, ಬಿಸಿಲ ಬೇಗೆ ಸಹಿಸುವುದು ಮೊದಲಾದ ಅಂಶಗಳು ಒಂದು ಅಗುಳು ಅನ್ನದ ಹಿಂದೆ ಇರುವ ರೈತನ ಶ್ರಮದ ಬದುಕು ಅರ್ಥವತ್ತಾಗಿ ಚಿತ್ರಿತವಾಗಿವೆ. 'ಮಣ್ಣ ಪ್ರೀತಿ' ಎಂಬ ಕವಿತೆಯಲ್ಲಿ ಕವಿ ಅಕ್ಬರ್ ಸಿ. ಕಾಲಿಮಿರ್ಚಿಯವರು ಹೀಗೆ ಹೇಳುತ್ತಾರೆ.

ತುತ್ತು ಅಗುಳ ಉಣ್ಣುವಾಗ
ಕಣ್ಣು ಹಣೆ ಒತ್ತುವನು
ಭಾವ ಉಕ್ಕಿ ಸಂತಸದಿ
ನೆಮ್ಮದಿಯನು ಕಾಣುವನು[೨೨]

ರೈತ ಮತ್ತು ಅವನ ಸಹ ಪರಿವಾರದ ಶ್ರಮದಿಂದ ಬಂದ ಫಲದ ಅನ್ನದ ಅಗುಳನ್ನು ಬಾಯಿಯೊಳಗೆ ಇಟ್ಟುಕೊಳ್ಳುವ ಮೊದಲು ಆ ಅಗುಳನ್ನು ಕಣ್ಣಿಗೆ ಮತ್ತು ಹಣೆಗೆ ಒತ್ತಿಕೊಳ್ಳುವುದು ಅನ್ನದ ಮಹತ್ವವನ್ನು ಏಕಕಾಲಕ್ಕೆ ಶ್ರಮಕ್ಕೆ ಸಿಕ್ಕ ಪ್ರತಿಫಲದ ಧನ್ಯತಾ ಭಾವವನ್ನು ಸೂಚಿಸುವುದರ ಸಂಕೇತವಾಗಿದೆ. ಇಂತಹ ತಿಳುವಳಿಕೆ ಪಡೆದ ಮಕ್ಕಳ್ಯಾರು ರೈತನನ್ನು, ಅನ್ನವನ್ನು ಕೀಳಾಗಿ ಕಾಣುವುದಿಲ್ಲವೆಂಬ ನಂಬಿಕೆ ಮಕ್ಕಳ ಕವಿತೆಗಳ ಹಿಂದಿರುವ ಆಶಯವೆನಿಸುತ್ತದೆ.

'ಪರಿಸರ ಪ್ರಜ್ಞೆ'ಗೆ ಸಂಬಂಧಿಸಿದಂತೆ ಎರಡನೆಯ ಅಂಶವಾಗಿ 'ಪರಿಸರ ಕಾಳಜಿ' ಮುಖ್ಯವಾಗುತ್ತದೆ. ಆಧುನಿಕ ಜೀವನ ಶೈಲಿಯ ಅಳವಡಿಕೆಗಳಿಂದ ನಮ್ಮ ದೈನಂದಿನ ಚಟುವಟಿಕೆಗಳಲ್ಲಿ ಪ್ಲಾಸ್ಟಿಕ್ ಚೀಲದ ಬಳಕೆ ಅತಿಯಾಗಿದೆ. ಇದರಿಂದ ಆಗುವ ಅನಾಹುತ ಹಾಗೂ ಒಂದು ಬಗೆಯ ಎಚ್ಚರವನ್ನು ಸೂಗಯ್ಯ ಹಿರೇಮಠ ಅವರು ತಮ್ಮ 'ಪ್ಲಾಸ್ಟಿಕ್ ಚೀಲ ಬಂತಮ್ಮ' ಕವಿತೆಯಲ್ಲಿ ತಿಳಿಸಿದ್ದಾರೆ.

ನೀರಿಗೆ ನೆನೆಯದ
ಬಿಸಿಲಿಗೆ ಬಾಡದ
ಪ್ಲಾಸ್ಟಿಕ್ ಚೀಲ ಬಂತಮ್ಮ

ಹೆಗಲಿಗೆ ಹಾಕದ
ಬಗಲಲಿ ನಿಲ್ಲದ
ಪ್ಲಾಸ್ಟಿಕ್ ಚೀಲ ಬಂತಮ್ಮ

ಬೆಣ್ಣೆಯ ತುಂಬಿದ
ಎಣ್ಣೆಯ ತುಂಬಿದ
ಬಣ್ಣದ ಚೀಲವು ಬಂತಮ್ಮ

ಹಿಟ್ಟನು ತುಂಬಲು
ತರಕಾರಿ ಕೊಳ್ಳಲು
ಪ್ಲಾಸ್ಟಿಕ್ ಚೀಲವೆ ಬೇಕಮ್ಮ

ಎಸೆದ ನೆಲದಲ್ಲಿ
ಬೆಳೆಯೆ ಬಾರದು
ಪ್ಲಾಸ್ಟಿಕ್ ಬಳಕೆ ಸಾಕಮ್ಮ

ಮನೆಗೆ ತಾರದೆ
ಬೀದಿಗೆ ಹಾಕದೆ
ಸುಟ್ಟು ಪರಿಸರ ಉಳಿಸಮ್ಮ[೩೩]

ಮೊದಲಿಗೆ ರಂಜನೀಯವಾಗಿ 'ಪ್ಲಾಸ್ಟಿಕ್ ಚೀಲ'ದ ಕುರಿತು ಹೇಳುವ ಕವಿ ಕ್ರಮೇಣ ಪ್ಲಾಸ್ಟಿಕ್ ಚೀಲ ನೆಲದಲ್ಲಿ ಎಸೆದರೆ ಬೆಳೆ ಬಾರದೆಂಬ ಎಚ್ಚರವನ್ನು, ಪ್ಲಾಸ್ಟಿಕ್ ಅನ್ನು ಸುಟ್ಟು ಹಾಕುವುದರ ಮೂಲಕ ಪರಿಸರ ಸಂರಕ್ಷಣೆ ಮಾಡಬೇಕೆನ್ನುವ ಕವಿಯ ಆಶಯ ಪರಿಸರ ಪ್ರೀತಿಯ ಮಕ್ಕಳ ವ್ಯಕ್ತಿತ್ವವನ್ನು ರೂಪಿಸುವಲ್ಲಿ ನೆರವಾಗುತ್ತೆದನ್ನಬಹುದು. 'ವನ ಮೋಹತ್ಸವ'ದಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮೂಲಕ ಗಿಡಗಳನ್ನು ನೆಡುವ ಮೂಲಕ ಪರಿಸರ ಕಾಳಜಿಯನ್ನು ಹೆಚ್ಚಿಸಬಹುದು. ನಿಂಗಣ್ಣ ಕುಂಟಿಯವರ 'ವನ ಮಹೋತ್ಸವ' ಪದ್ಯದಲ್ಲಿ ಇದು ವ್ಯಕ್ತವಾಗಿದೆ.

ಮಕ್ಕಳು ಬಂದರು ಮುದದಿಂದ
ಗುರುಗಳು ಹಿರಿಯರು ಹಿಂದಿಂದ

ಬಗೆ ಬಗೆ ಸಸಿಗಳ ಕೈಯಲಿ ಹಿಡಿದು
ಊರಿನ ಸುತ್ತ ಬಂದರು ನಡೆದು

ವನ ಮಹೋತ್ಸವ ಆಚರಿಸಿ
ಸಸಿಗಳ ನೆಡುವುದು ಬಹಳ ಖುಷಿ

ಗಿಡಗಳ ಬಳಗವ ಬೆಳೆಸುವರು
ನಾಡಿನ ಸೊಬಗನು ಉಳಿಸುವರು

ಗಿಡಗಳು ಬೆಳೆವವು ಎತ್ತರಕೆ
ಮಳೆಯನು ತರುವವು ಒಣನೆಲಕೆ

ಗಿಡದಲಿ ಅಡಗಿದೆ ತಾಕತ್ತು
ಗಿಡವೇ ನಾಡಿನ ಸಂಪತ್ತು

ಕಡಿದರೆ ಒಂದು ಗಿಡವನ್ನು
ಹಚ್ಚಿರಿ ಎರಡು ಸಸಿಗಳನು"

ಇಂದು ಕಟ್ಟಗಳ ನಿರ್ಮಾಣಕ್ಕೆ, ರಸ್ತೆಗಳ ಅಗಲೀಕರಣಕ್ಕೆ ಇನ್ನು ಹಲವಾರು ಕಾರಣಗಳಿಗಾಗಿ ಮರಗಳನ್ನು ಕಡಿದು ಪರಿಸರ ಮಾಲಿನ್ಯ ಮಾಡುತ್ತಿರುವ ನಾವು ಪರಿಸರ ಸಂರಕ್ಷಣೆಗಾಗಿ ಎಷ್ಟು ಸಸಿಗಳನ್ನು ನೆಟ್ಟಿದ್ದೇವೆ ಎಂಬುದನ್ನು ಆತ್ಮಾವಲೋಕನ ಮಾಡಿಕೊಳ್ಳಬೇಕಿದೆ. ಇಂತಹ ಸಂಗತಿಗಳನ್ನು ಮಕ್ಕಳಿಗೆ ಮನದಟ್ಟು ಮಾಡುವಲ್ಲಿ ನಿಂಗಣ್ಣನವರ ಕವಿತೆ ಸಮರ್ಥ ಅಭಿವ್ಯಕ್ತಿಯಾಗಿದೆ ಎಂದು ಹೇಳಬಹುದು.

**ಸಮಯ ಪ್ರಜ್ಞೆ**

ಮನುಷ್ಯ ಎಲ್ಲವನ್ನು ಶಕ್ತಿಯಿಂದಲೇ ಗೆಲ್ಲಲು ಸಾಧ್ಯವಿಲ್ಲ. ಕೆಲವನ್ನು ಯುಕ್ತಿಯಿಂದ ಗೆಲ್ಲಬೇಕಾಗುತ್ತದೆ. ಶಕ್ತಿ ಆಗಲಿ ಅಥವಾ ಯುಕ್ತಿ ಆಗಲಿ ಅದು ಆಯಾ ಸಂದರ್ಭಗಳನ್ನು ಅವಲಂಬಿಸಿರುತ್ತದೆ. ಸಿದ್ಧಯ್ಯ ಪುರಾಣಿಕ ಅವರು 'ಸೆಟ್ಟಿಯ ಯುಕ್ತಿ' ಕವಿತೆಯಲ್ಲಿ. ಸೆಟ್ಟಿಯ ಪ್ರಸಂಗವೊಂದನ್ನು ನೋಡಬಹುದು.

ಟೊಪ್ಪಿಗೆ ಮಾರುವ
ವ್ಯಾಪಾರಿ
ಬಂದನು ಮರದಡಿ
ಬಾಯಾರಿ
ಟೊಪ್ಪಿಗೆ ಗಂಟು
ಕೆಳಗಿರಿಸಿ
ಮಲಗಿದ ನೆಲದಲಿ
ಕಸ ಸರಿಸಿ

ಗಡದ್ದು ನಿದ್ದೆ
ಹತ್ತಿತ್ತು ಬೇಗ
ಮಂಗಗಳಿಳಿದವು
ಹಾಕುತ ಲಾಗ
ಎಲ್ಲ ಕೋತಿಗಳ
ತಲೆ ಮೇಲೆ
ಟೊಪ್ಪಿಗೆ ಮೆರೆದವು
ನಿಮಿಷದಲೆ !

ಟೊಪ್ಪಿಗೆ ಧರಿಸಿ
ಬಾಲವ ತುರಿಸಿ
ಜಿಗಿದವು ರೆಂಬೆಗೆ
ಚೆಚ್ಚರಿಸಿ

ಸೆಟ್ಟಿಯು ಎದ್ದನು
ಟೊಪ್ಪಿಗೆ ಜಲ್ಲಿ
ಖಾಲಿಯಾಗಿರಲು
ಬದಿಯಲ್ಲಿ

ಸುತ್ತಲು ನೋಡಿದ
ಸುಳಿವೇ ಇಲ್ಲ
ಮೇಲಕೆ ನೋಡಿದ
ಮಂಗಗಳೆಲ್ಲ

ಟೊಪ್ಪಿಗೆ ಹಾಕಿ
ಮಾಡುತ ಷೋಕಿ
ಅಣಕಿಸುತ್ತಿದ್ದವು
ತುಸು ಜೀಕಿ

ಸೆಟ್ಟಿಯು ಏರಿದ
ಸರಸರ ಮರವನು
ಮಂಗ ಏರಿದವು
ತುದಿಗಳನು

ರೆಂಬೆ ರೆಂಬೆಗೆ
ನೆಗೆದವು ಕೆಲವು
ಜೋತು ಬಿದ್ದವು
ಬಳ್ಳಿಗೆ ಹಲವು

ಏನು ಮಾಡಿದರು
ಸೆಟ್ಟಿಯ ಕೈಗೆ
ಸಿಕ್ಕದಿರಲು ಅವ
ನಿಳಿದನು ಕೆಳಗೆ

ಶಕ್ತಿಗಿಂತಲೂ
ಯುಕ್ತಿಯು ಮೇಲು

ಎಂಬುದ ನೆನೆದು
ಮಾಡಿದ ಮಸಲು

ತನ್ನಯ ತಲೆಯ
ಟೊಪ್ಪಿಗೆಯನ್ನು
ಕಿತ್ತು ಎಸೆದನು
ನೋಡಿದನೇನನು!

ಕೋತಿಗಳೆಲ್ಲವು
ಎಸೆದವು ತಮ್ಮ
ತಲೆಯ ಟೊಪ್ಪಿಗೆ ಸೆಟ್ಟಿಯ ಸೊಮ್ಮ
ಹಿಗ್ಗಿದ ಸೆಟ್ಟಿ

ಆಯ್ದನು ಟೊಪ್ಪಿಗೆ
ಜಲ್ಲಿಯ ಹೊತ್ತು
ನಡೆದನು ತೆಪ್ಪಗೆ![೫]

ಇಡೀ ಪದ್ಯದಲ್ಲಿ ಶಕ್ತಿಯ ಪ್ರಯತ್ನಕ್ಕಿಂತ ಯುಕ್ತಿಯ ಪ್ರಯತ್ನ ಫಲ ಕೊಟ್ಟಿದ್ದನ್ನು ನೋಡಬಹುದು. ಸಮಯ ಸಂದರ್ಭಕ್ಕೆ ಅನುಗುಣವಾಗಿ ನಮ್ಮ ಯೋಚನೆಗಳು ಇರಬೇಕು ಹಾಗೂ ನಮ್ಮ ಪ್ರಜ್ಞೆ ಕೆಲಸ ಮಾಡಬೇಕು ಎಂಬ ತಿರುಳನ್ನು ಇಲ್ಲಿ ಕಾಣಬಹುದು. ಈ ಬಗೆಯ ಪದ್ಯಗಳು, ಮಕ್ಕಳಿಗೆ ಮನೋರಂಜನೆ ನೀಡುವುದರ ಜೊತೆಗೆ 'ಸಮಯ ಪ್ರಜ್ಞೆ'ಯಂತಹ ಅಂಶಗಳನ್ನು ಜಾಗೃತಗೊಳಿಸಿ ಮಕ್ಕಳ ವ್ಯಕ್ತಿತ್ವ ವಿಕಸನಕ್ಕೆ ನಾಂದಿ ಹಾಡುತ್ತದೆನ್ನಬಹುದು.

**ಕೊನೆ ಟಿಪ್ಪಣಿಗಳು**

೧. ಹೊಸತು(ಪತ್ರಿಕೆ) ಏಪ್ರಿಲ್ ೨೦೦೧, ಪುಟ ೪೨.
೨. ಚಂದ್ರನ ಶಾಲೆ; ಲೇ: ಟಿ.ಎಸ್. ನಾಗರಾಜಶೆಟ್ಟಿ; ಪುಟ ೪೪.
೩. ತಟ್ಟು ಚಪ್ಪಾಳೆ ಪುಟ್ಟ ಮಗು; ಸಂ: ಬೊಳುವಾರು ಮಹಮದ್ ಕುಂಞ್; ಪುಟ ೨೧೪.
೪. ಎಚ್ಚೆಸ್ವಿ ಸಮಗ್ರ ಮಕ್ಕಳ ಸಾಹಿತ್ಯ; ಲೇ: ಎಚ್.ಎಸ್. ವೆಂಕಟೇಶಮೂರ್ತಿ; ಪುಟ ೫.
೫. ತಟ್ಟು ಚಪ್ಪಾಳೆ ಪುಟ್ಟ ಮಗು; ಸಂ: ಬೊಳುವಾರು ಮಹಮದ್ ಕುಂಞ್; ಪುಟ ೨೦೨.
೬. ನಂದನದಲಿ ಚಂದನ, ಲೇ: ಫ.ಗು. ಸಿದ್ದಾಪುರ; ಪುಟ ೪೮.
೭. ಜನಪದ ಸಾಹಿತ್ಯ ಸಂಗ್ರಹ; ಸಂ: ಎಚ್. ಕಾಮಶೆಟ್ಟಿ; ಪುಟ ೭.
೮. ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷರ ಭಾಷಣಗಳು; ಸಂಪುಟ-೫; ಸಂ: ಚನ್ನಬಸಪ್ಪ (ಗೊ.ರು.); ಪುಟ ೧೨೫.
೯. ಕ್ರೈಂ ಸ್ಟೋರಿ ಪಾಕ್ಷಿಕಪತ್ರಿಕೆ, ಜುಲೈ-೫, ೨೦೧೨; (೫೩ನೇ ಸಂಚಿಕೆ); ಪುಟ ೨.
೧೦. ಉಪನಾಯಕನಹಳ್ಳಿಯ ಈರಮ್ಮಜ್ಜಿಯಿಂದ ಕೇಳಿದ್ದು; ಬಳ್ಳಾರಿ ಜಿಲ್ಲೆ; ಹಗರಿಬೊಮ್ಮನಹಳ್ಳಿ ತಾಲೂಕು.

೧೧. ಜನಪದ ಸಾಹಿತ್ಯ ಸಂಗ್ರಹ; ಸಂ: ಎಚ್. ಕಾಮಶೆಟ್ಟಿ; ಪುಟ ೬.

೧೨. ಅದೇ; ಪುಟ ೮.

೧೩. ಮಕ್ಕಳ ಸಾಹಿತ್ಯ-೨೦೦೬, ಸಂ: ಆನಂದ ಪಾಟೀಲ; ಪುಟ ೧೩.

೧೪. ನಂದನವನ; ಲೇ: ಜಂಬುನಾಥ ಕಂಚ್ಯಾಣಿ; ಪುಟ ೩೫-೩೬.

೧೫. ಮಕ್ಕಳ ಸಾಹಿತ್ಯ-೧೯೯೭; ಸಂ: ಪಳಕಳ ಸೀತಾರಾಮಭಟ್ಟ, ಪುಟ ೬೧.

೧೬. ನನ್ನ ಹಾಡು; ಲೇ: ಶಂ.ಗು. ಬಿರಾದಾರ; ಪುಟ ೨೪ - ೨೫.

೧೭. ಆಯ್ದ ವೈಚಾರಿಕ ಪ್ರಬಂಧಗಳು; ಸಂ: ಸುರೇಂದ್ರಕುಮಾರ ಕೆರಮಗಿ ಡಾ.; ಪುಟ ೨೧.

೧೮. ಅದೇ; ಪುಟ ೬೩.

೧೯. ತಟ್ಟು ಚಪ್ಪಾಳೆ ಪುಟ್ಟ ಮಗು; ಸಂ: ಬೊಳುವಾರು; ಪುಟ ೨೭೨.

೨೦. ಅದೇ; ಪುಟ ೨೭೩.

೨೧. ಪತಂಗ; ಲೇ: ಸಂಗಮೇಶ ಬಾಲಕೋಟ; ಪುಟ ೬.

೨೨. ವಸಂತಬಂದ; ಲೇ: ಎ.ಕೆ. ರಾಮೇಶ್ವರ; ಪುಟ ೧೮.

೨೩. ಅದೇ; ಪುಟ ೧೯.

೨೪. ಆಯ್ದ ನೂರೊಂದು ಕವಿತೆಗಳು; ಲೇ: ಕಂಚ್ಯಾಣಿ ಶರಣಪ್ಪ; ಪುಟ ೭೪.

೨೫. ಅದೇ; ಪುಟ ೧೬೮.

೨೬. ಅದೇ; ಪುಟ ೧೪೮.

೨೭. ಮಕ್ಕಳ ಸಾಹಿತ್ಯ; ಸಂ: ರಾಜೇಂದ್ರ ಗಡಾದ; ೨೦೦೦; ಪುಟ ೬೦.

೨೮. ಬಟ್ಟಲ ತುಂಬ ಬಾರಿಕಾಯಿ; ಲೇ: ಪ್ರೊ. ಟಿ.ಕೆ. ಹಿರೇಗಂಗೆ; ಪುಟ ೧೨೦.

೨೯. ಮಕ್ಕಳ ಸಾಹಿತ್ಯ; ಸಂ: ರಾಜೇಂದ್ರ ಗಡಾದ; ೨೦೦೦; ಪುಟ ೩.

೩೦. ಬಟ್ಟಲ ತುಂಬ ಬಾರಿಕಾಯಿ; ಲೇ: ಪ್ರೊ. ಟಿ.ಕೆ. ಹಿರೇಗಂಗೆ; ಪುಟ ೧೦೦.

೩೧. ತಟ್ಟು ಚಪ್ಪಾಳೆ ಪುಟ್ಟ ಮಗು; ಸಂ: ಬೊಳುವಾರು; ಪುಟ ೧೪೪.

೩೨. ರೈಲುಗಾಡಿ; ಲೇ: ಅಕ್ಬರ್ ಸಿ. ಕಾಲಿಮಿರ್ಚಿ; ಪುಟ ೪೨.

೩೩. ಮಕ್ಕಳ ಸಾಹಿತ್ಯ; ಸಂ: ರಾಜೇಂದ್ರ ಗಡಾದ; ೨೦೦೦; ಪುಟ ೯೬.

೩೪. ಬಟ್ಟಲ ತುಂಬ ಬಾರಿಕಾಯಿ; ಲೇ: ಪ್ರೊ. ಟಿ.ಕೆ. ಹಿರೇಗಂಗೆ; ಪುಟ ೭೮.

೩೫. ಭಾರತವೆಲ್ಲಕೆ ಬಾವುಟವೊಂದೇ; ಲೇ: ಸಿದ್ಧಯ್ಯ ಪುರಾಣಿಕ; ಪುಟ ೨೫.

•••

ಅಧ್ಯಾಯ : ಏಳು

# ಸಮಕಾಲೀನ ಸಂದರ್ಭದಲ್ಲಿ ಮಕ್ಕಳ ಕಾವ್ಯ

ಅಧ್ಯಾಯ : ಏಳು

# ಸಮಕಾಲೀನ ಸಂದರ್ಭದ ಕನ್ನಡ ಮಕ್ಕಳ ಕಾವ್ಯ

## ೭.೧. ಮಕ್ಕಳ ಸಾಹಿತ್ಯದ ಅಗತ್ಯತೆ

ಮಕ್ಕಳಿಗಾಗಿ ಬೇರೆ ಬೇರೆ ಕ್ಷೇತ್ರಗಳಲ್ಲಿ ಗಮನಾರ್ಹ ಬದಲಾವಣೆಗಳಾಗಿವೆ.

**ಮಕ್ಕಳಿಗಾಗಿ ಸಾಮಾಜಿಕವಾಗಿ :**

ಮಕ್ಕಳ ಉದ್ಯಾನವನಗಳು
ಮಕ್ಕಳ ಆಸ್ಪತ್ರೆಗಳು
ಮಕ್ಕಳ ಬಟ್ಟೆ ಅಂಗಡಿಗಳು
ಮಕ್ಕಳ ತಿನಿಸುಗಳು, ಪೇಯಗಳು
ಮಕ್ಕಳ ಆಟಿಕೆಗಳು
ಮಕ್ಕಳ ಟಿ.ವಿ. ಛಾನಲ್‌ಗಳು
ಮಕ್ಕಳ ಪತ್ರಿಕೆಗಳು
ಮಕ್ಕಳ ದಿನಾಚರಣೆಗಳು
ಮಕ್ಕಳ ಅಕಾಡೆಮಿಗಳು

**ಮಕ್ಕಳಿಗಾಗಿ ಸಾಂಸ್ಕೃತಿಕವಾಗಿ :**

ಮಕ್ಕಳ ಫ್ಯಾಷನ್ನ ಮೇಳಗಳು
ಮಕ್ಕಳ ಸಿನೆಮಾಗಳು

**ಮಕ್ಕಳಿಗಾಗಿ ಧಾರ್ಮಿಕವಾಗಿ :**

ಬಾಲ ಏಸು, ಭಕ್ತ ಪ್ರಹ್ಲಾದ, ಬಾಲಶಿವ, ಬಾಲ ಗಣಪ, ಬಾಲ ಮುರುಳಿ, ಬಾಲಾಂಜನೇಯ ಕಲ್ಪನೆಗಳು.

**ಮಕ್ಕಳಿಗಾಗಿ ಶೈಕ್ಷಣಿಕವಾಗಿ :**

ಚಿಣ್ಣರ ಮೇಳಗಳು, ಶೈಕ್ಷಣಿಕ ಪ್ರವಾಸಗಳು, ಕ್ಷೀರಭಾಗ್ಯ ಯೋಜನೆ, ಬಿಸಿಯೂಟದ ವಿತರಣೆ

**ಮಕ್ಕಳಿಗಾಗಿ ಮನೋವಿಜ್ಞಾನದಲ್ಲಿ :**

ಮಗುವಿನ ಮನೋವಿಜ್ಞಾನ

ವಿಕಾಸ ಮನೋವಿಜ್ಞಾನ

ಇವುಗಳನ್ನು ನೋಡಿದಾಗ ಸಾಹಿತ್ಯಿಕವಾಗಿ ನಾವು ಮಕ್ಕಳಿಗಾಗಿ ನೀಡಿರುವುದಾದರೂ ಏನು ಎಂಬ ಪ್ರಶ್ನೆಗೆ ಥಟ್ಟನೆ ನೆನಪಾಗುವುದು ಮಕ್ಕಳ ಸಾಹಿತ್ಯ, ಮಕ್ಕಳ ಸಾಹಿತ್ಯ ಸಮ್ಮೇಳನಗಳು. ಮಕ್ಕಳ ಸರ್ವತೋಮುಖ ಬೆಳವಣಿಗಾಗಿ ಬೇರೆ ಬೇರೆ ಕ್ಷೇತ್ರಗಳಲ್ಲಿ ಆದ ಬದಲಾವಣೆಗಳಿಗಿಂತ ಬಹಳ ಮುಖ್ಯವಾದುದು ಮಕ್ಕಳ ಬೌದ್ಧಿಕ ವಿಕಸನಕ್ಕೆ ಬೇಕಾದ ಪೌಷ್ಠಿಕ ಆಹಾರದ್ದು. ಬೌದ್ಧಿಕ ದಾರಿದ್ರ್ಯದಿಂದ ಮಕ್ಕಳಿಗೆ ಮುಕ್ತಿ ನೀಡಲು ಸಹಕಾರಿ ಆಗುವುದು ಈ ಮಕ್ಕಳ ಸಾಹಿತ್ಯವೆಂಬ ಪೌಷ್ಠಿಕ ಆಹಾರ. ಈ ಹಿನ್ನೆಲೆಯಲ್ಲಿ ಮಕ್ಕಳ ವ್ಯಕ್ತಿತ್ವ ವಿಕಸನ ಆಗುವುದರ ಜೊತೆಗೆ ಸುಭದ್ರ ಸಮಾಜದ ನಿರ್ಮಾಣಕ್ಕೆ ನಾಂದಿ ಹಾಡಬಹುದು.

### ೭.೨. ಮಕ್ಕಳ ಸಾಹಿತ್ಯದ ಕೃಷಿಯ ಕೊರತೆ ಮತ್ತು ಪ್ರೋತ್ಸಾಹದ ಅಗತ್ಯತೆ

ಮಕ್ಕಳ ಸಾಹಿತ್ಯ ಇದೊಂದು ವಿಶಿಷ್ಟ ವಯೋಮಾನದ ವಿಶಿಷ್ಟ ಅನುಭವಗಳಿಗೆ ಹಿಡಿದ ಕನ್ನಡಿ. ಇದು ಕೇವಲ ಕನ್ನಡದಲ್ಲಿ ಅಲ್ಲ. ವಿಶ್ವ ಸಾಹಿತ್ಯ ಕಣಜದಲ್ಲಿಯೇ ಇದರ ಸ್ಥಾನ ಪ್ರತ್ಯೇಕ. ಸಹಜವಾಗಿ ಸಾಹಿತ್ಯ ಎಂಬುದು ಎಲ್ಲರಿಗೂ ತಿಳಿದಿರುವಂತದ್ದೇ ಆಗಿದೆ. ಆದರೆ ಸಾಮಾನ್ಯ ಸಾಹಿತ್ಯಕ್ಕೆ ಹೋಲಿಸಿದರೆ ಇದರ ಕೃಷಿ ಅಷ್ಟಾಗಿ ನಡೆದಿಲ್ಲ. ಮಕ್ಕಳ ಸಾಹಿತ್ಯದ ಕೃಷಿಯ ಕೊರತೆಗೆ ಕೆಲ ಅಂಶಗಳನ್ನು ಗುರುತಿಸಬಹುದು.

ದೈನಂದಿನ ಬದುಕಿನ ಅನುಭವಗಳೇ ಸಾಹಿತ್ಯದ ಮೂಲ ಪರಿಕರಗಳು. ಸಾಹಿತ್ಯದಲ್ಲಿ ಕಲ್ಪನೆಯು ಸೇರಿದೆ ಎಂಬುದು ಎರಡನೇ ಸಂಗತಿ. ಮೂಲ ಆಕರ ಮಾತ್ರ ಅನುಭವವೇ. ಈ ಹಿನ್ನೆಲೆಯಲ್ಲಿಯೇ ನಾವು 'ಅನುಭವದ ಅಭಿವ್ಯಕ್ತಿಯೇ ಸಾಹಿತ್ಯ' ಎಂಬ ಸಾಹಿತ್ಯದ ವ್ಯಾಖ್ಯಾನಗಳನ್ನು ಕಾಣುವುದು. ಅನುಭವದ ಹಿನ್ನೆಲೆಯಲ್ಲಿ ಒಡಮೂಡಿದ ಸಾಹಿತ್ಯ ಬದುಕಿನ ವಸ್ತುನಿಷ್ಠ ಸಂಗತಿಗಳ ಕಡೆಗೆ ನಮ್ಮನ್ನು ಕರೆದೊಯ್ಯುತ್ತದೆ. 'ಅನುಭವದ ಅಭಿವ್ಯಕ್ತಿಯೇ ಸಾಹಿತ್ಯ' ಎಂಬ ಉಕ್ತಿ ಇದು ಹೆಚ್ಚು ಸಾಮಾನ್ಯ ಸಾಹಿತ್ಯಕ್ಕೆ ಅನ್ವಯವಾಗುತ್ತದೆ. ಆದರೆ ಮಕ್ಕಳ ಸಾಹಿತ್ಯದ ವಿಷಯದಲ್ಲಿ ಅನುಭವಕ್ಕಿಂತಲೂ ಕಲ್ಪನೆಗೆ ಹೆಚ್ಚು ಪ್ರಾಶಸ್ತ್ಯವಿದೆ. ಕಲ್ಪನೆಯೆಂದರೆ ಅವು ಅಂತಿಂತಹ ಕಲ್ಪನೆಗಳಲ್ಲ. ಸಾಮಾನ್ಯ ಕಲ್ಪನೆಗಳು ಮಕ್ಕಳ ಮನಸ್ಸನ್ನು ತಲುಪಲಾರವು. ಅಲ್ಲಿ ಏನಿದ್ದರೂ ಅದ್ಭುತ ರಮಣೀಯ ಕಲ್ಪನೆಗಳಿಗೆ ಮಾತ್ರ ಅವಕಾಶ. ಹೇಳುವುದು ರಂಜನೀಯ ವಾಗಿಯೇ ಇರಬೇಕಾಗುತ್ತದೆ. 'ಪಂಚತಂತ್ರ' ಕೃತಿ ಮಕ್ಕಳ ಸಾಹಿತ್ಯ ಲೋಕದಲ್ಲಿ ಅಷ್ಟು ಪ್ರಸಿದ್ಧಿ ಪಡೆದದ್ದು ಪ್ರಾಣಿ-ಪಕ್ಷಿಗಳು ಅಲ್ಲಿ ಮಾತನಾಡುವ ಕಲ್ಪನೆಯೇ ಮಕ್ಕಳಿಗೆ ರೋಮಾಂಚನ ವುಂಟು ಮಾಡುವಂತದ್ದಾಗಿದೆ ಎಂಬ ಕಾರಣದ ಹಿನ್ನೆಲೆಯಲ್ಲಿ.

ಆದರೆ ಈ ಬಗೆಯ ಅದ್ಭುತ ಎನಿಸುವ ರಮಣೀಯವೆನಿಸುವ ಕಲ್ಪನೆಗಳ ಸೃಷ್ಟಿ ಸಾಹಿತಿಗಳಿಗೊಂದು ದೊಡ್ಡ ಸವಾಲಾಗಿ ಪರಿಣಮಿಸಿದೆ. ಈ ಸವಾಲನ್ನು ಸ್ವೀಕರಿಸದ ಸಾಹಿತಿಗಳೇ

ನಮ್ಮಲ್ಲಿ ಅಧಿಕವಾಗಿರುವುದು ಶೋಚನೀಯ ಸಂಗತಿಯಾಗಿದೆ. ಮಕ್ಕಳ ಸಾಹಿತ್ಯ ರಚಿಸುವುದು ಘನ ಕಾರ್ಯವೇನಲ್ಲ ಎಂಬ ಉಡಾಫೆ ಮಾತುಗಳು ಕೇಳಿ ಬರುವುದುಂಟು. ವಾಸ್ತವ ಎಂದರೆ ಸಾಮಾನ್ಯ ಸಾಹಿತ್ಯ ಸೃಷ್ಟಿಗಿಂತಲೂ ಮಕ್ಕಳ ಸಾಹಿತ್ಯ ಸೃಷ್ಟಿ ತುಂಬಾ ಕಠಿಣವಾದದ್ದು. ಕಾರಣ ಮಕ್ಕಳ ಮನಸಿನ ಎತ್ತರಕ್ಕೆ ಏರುವುದು ಸುಲಭದ ಸಂಗತಿಯೇನಲ್ಲ. ಈ ಬಗೆಯ ಬೌದ್ಧಿಕ ಸವಾಲುಗಳು (ಅದ್ಭುತ ರಮ್ಯ ಕಲ್ಪನಾ ಸೃಷ್ಟಿ, ಮಕ್ಕಳ ಮನಸ್ಸಿನ ಎತ್ತರಕ್ಕೆ ಏರುವ ಸಾಹಸ ಇತ್ಯಾದಿ) ಒಂದು ಕಡೆ ಮಕ್ಕಳ ಸಾಹಿತ್ಯ ಸೃಷ್ಟಿಗೆ ಹಿನ್ನೆಡೆ ಉಂಟು ಮಾಡಿದರೆ ಇನ್ನೊಂದು ಕಡೆ ಜೈವಿಕ ಸವಾಲುಗಳು ಕೂಡ ಈ ಸಾಹಿತ್ಯದ ನೇಪಥ್ಯಕ್ಕೆ ಕಾರಣವಾಗಿವೆ. ಅದನ್ನು ಹೀಗೆ ವಿವರಿಸಬಹುದು. ಮಕ್ಕಳ ಮನೋಲೋಕದಲ್ಲಿ ಮಗುವಿಗೆ ತಾನು ಕಾಣುವ ಎಲ್ಲ ವಸ್ತುಗಳ ಬಗೆಗೂ ಒಂದು ಬೆರಗಿದೆ. ಬೆರಗಿನ ಹಿಂದೆ ಒಂದು ಬಹುದೊಡ್ಡ ಕುತೂಹಲವಿದೆ. ಕುತೂಹಲದ ಜೊತೆಗೊಂದಿಷ್ಟು ಏನು, ಏಕೆ, ಹೇಗೆ ಎಂಬ ಪ್ರಶ್ನೆಗಳಿವೆ. ಈ ಬಗೆಯ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳುವ ನಿಟ್ಟಿನಲ್ಲಿಯೇ ಜಗತ್ತನ್ನು ಅರಿಯುವ, ಜಗತ್ತಿನೊಂದಿಗೆ ಬೆರೆಯುವ, ಬದುಕನ್ನು ಹಂತ ಹಂತವಾಗಿ ಕಟ್ಟಿಕೊಳ್ಳುವ ಪ್ರಯತ್ನವಿದೆ. ಇದು ಪ್ರತಿಯೊಬ್ಬ ಆರೋಗ್ಯಕರ ಮಗುವಿನ ಬೆಳವಣಿಗೆಯೂ ಹೌದು. ಆದರೆ ಕಾಲಕ್ರಮೇಣ ಮಗು ಬೆಳೆದು ದೊಡ್ಡವರ ಪ್ರಪಂಚಕ್ಕೆ ಕಾಲಿಡುವಷ್ಟರಲ್ಲಾಗಲೇ ತನ್ನೊಳಗಿನ ಬೆರಗು ಕುತೂಹಲ, ಪ್ರಶ್ನೆ ಮತ್ತು ಜಗತ್ತನ್ನು ಅರಿಯುವ ಪ್ರಯತ್ನಗಳಲ್ಲಿ ಅನೇಕ ಬದಲಾವಣೆಗಳಾಗಿ ಯಾವುದೋ ಒಂದು ಸಿದ್ಧ ಮಾದರಿಯ ಬದುಕನ್ನು ಅಳವಡಿಸಿಕೊಳ್ಳುವ ಮನೋಸ್ಥಿತಿಗೆ ಶರಣಾಗುತ್ತದೆ. ಈ ಸಿದ್ಧ ಮಾದರಿಯ ಬದುಕು ತುಂಬಾ ಅಪಾಯಕಾರಿಯಾದುದು. ಇದು ಯಾವ ವ್ಯಕ್ತಿಯನ್ನಾಗಲೀ ಒಂದು ಸೀಮಿತ ಆಲೋಚನಾ ಕ್ರಮಗಳ ಚೌಕಟ್ಟಿನಲ್ಲಿ ಕೆಲಸ ಮಾಡುವಂತೆ ಪ್ರೇರೇಪಿಸುವ ಸಾಧ್ಯತೆಗಳೇ ಹೆಚ್ಚು. ವ್ಯಕ್ತಿಯ ಸೃಜನಶೀಲತೆಗೆ, ಕ್ರಿಯಾಶೀಲತೆಗೆ ಇದು ಧಕ್ಕೆಯನ್ನುಂಟು ಮಾಡುವಂತದ್ದಾಗಿದ್ದು, ಪರಾವಲಂಬಿ ಬದುಕಿಗೂ ದಾರಿ ಮಾಡಿಕೊಡುವಂತದ್ದಾಗಿದೆ.

ಹೀಗೆ ಮಗುವಾದಾಗಿನಿಂದ ಬೆಳೆದು ದೊಡ್ಡವನಾಗುವ ಹಂತದಲ್ಲಾದ ಅನೇಕ ಸ್ಥಿತ್ಯಂತರ ಗಳೆಲ್ಲವೂ ಮಗುವನ್ನು ವ್ಯಕ್ತಿಯನ್ನಾಗಿ ಮಾಡಿ ಮಕ್ಕಳ ಮನೋಲೋಕದಿಂದ ದೂರವೇ ಉಳಿಯುವಂತೆ ಮಾಡಿರುತ್ತವೆ. ಇಂತಹ ಸಂಕೀರ್ಣ ಸಂದರ್ಭದಲ್ಲಿ ವ್ಯಕ್ತಿಯೊಬ್ಬ ಪುನಃ ಮಗುವಾಗಿ, ಮಗುವಿನ ಮನಸ್ಸನ್ನು ಹೊಂದಿ, ಮಕ್ಕಳ ಮನಸಿನಾಳಕ್ಕಿಳಿದು ಮಕ್ಕಳ ಸಾಹಿತ್ಯ ರಚಿಸುವ ಸಾಹಸಕ್ಕಿಳಿಯುವುದು ನಮ್ಮ ಸಾಹಿತಿಗಳಿಗೆ ಇನ್ನೊಂದು ಬಗೆಯ ಸವಾಲು.

ನಾನು ಕ್ಷೇತ್ರಕಾರ್ಯಕ್ಕೆ ಹೋದ ಸಂದರ್ಭದಲ್ಲಿ ಸಾಹಿತಿಯೊಬ್ಬರನ್ನು ಮಕ್ಕಳ ಸಾಹಿತ್ಯದ ಕೊರತೆಗೆ ಕಾರಣ ಕೇಳಿದಾಗ ಅವರು ಉತ್ತರಿಸಿದ್ದು ಹೀಗೆ. "ವಿವಾಹ ಕಾರ್ಯಕ್ರಮವೊಂದು ಒಬ್ಬರಿಂದ ಯಶಸ್ವಿಯಾಗುವಂತದ್ದಲ್ಲ. ಅದೊಂದು ಮನೆಮಂದಿ, ಊರ ಜನರು, ನೆಂಟರೆಲ್ಲರು ಸಹಭಾಗಿತ್ವದಲ್ಲಿ ನಡೆಯುವ ಕಾರ್ಯಕ್ರಮ (ನಾನಿಲ್ಲಿ ಸಾಮಾನ್ಯವಾಗಿ ನಡೆಯುವ ವಿವಾಹದ

ಸ್ವರೂಪ ಕುರಿತು ಹೇಳುತ್ತಿದ್ದೇನೆ. ಅಂತರ್ಜಾತಿಯ ಪ್ರೇಮ ವಿವಾಹಗಳಲ್ಲಿ ಈ ಪ್ರಶ್ನೆಯೇ ಉದ್ಭವಿಸುವುದಿಲ್ಲ) ಆಗಿರುವುದರಿಂದ ಅಲ್ಲಿ ಅವರವರ ಆಸಕ್ತಿಯ ಮೇರೆಗೆ ಒಬ್ಬರಿಗೆ ಅಡುಗೆ ಕೆಲಸದ ಜವಾಬ್ದಾರಿಯನ್ನು, ಇನ್ನೂ ಕೆಲವರಿಗೆ ಅತಿಥಿಗಳನ್ನು ಆಹ್ವಾನಿಸುವ ಕೆಲಸವನ್ನು, ಇನ್ನು ಹಲವರಿಗೆ ವೇದಿಕೆಯ ನಿರ್ವಹಣೆಯ ಉಸ್ತುವಾರಿಯನ್ನು ಹೀಗೆ ಒಬ್ಬೊಬ್ಬರು ಒಂದೊಂದು ಜವಾಬ್ದಾರಿಯನ್ನು ಅವರವರ ಕೆಲಸಕಾರ್ಯಗಳನ್ನು ಹಂಚಿಕೊಂಡಾಗ ಮದುವೆ ಕಾರ್ಯಕ್ರಮ ಸುಸೂತ್ರವಾಗಿ ನಡೆಯುತ್ತದೆಯೋ ಹಾಗೆಯೇ ಸಾಹಿತ್ಯವನ್ನು ಒಂದು ವಿವಾಹ ಸಂಭ್ರಮ ಎಂದು ಭಾವಿಸುವುದಾದರೆ ಎಲ್ಲರೂ ಎಲ್ಲ ಪ್ರಕಾರದಲ್ಲಿ ಕೃಷಿ ಮಾಡಲು ಸಾಧ್ಯವಿಲ್ಲ. ಅವರವರ ಆಸಕ್ತಿಯ ಮೇರೆಗೆ ಕೆಲವರು, ಕಥೆ ಮತ್ತೆ ಕೆಲವರು ಕವಿತೆ, ಇನ್ನು ಹಲವರು, ನಾಟಕ, ಜೀವನ ಚರಿತ್ರೆ, ವಿಮರ್ಶೆ ಸಂಶೋಧನೆ ಎಂದು ಕೃಷಿ ಮಾಡಬಲ್ಲರೇ ವಿನಾ ಸಾಹಿತಿಯಾದವರು ಮಕ್ಕಳ ಸಾಹಿತ್ಯ ಪ್ರಕಾರದಲ್ಲಿ ಕೆಲಸ ಮಾಡಲೇಬೇಕೆಂಬ ನಿರೀಕ್ಷೆ ಸರಿಯಲ್ಲ. ಅದು ಅವರವರ ವೈಯಕ್ತಿಕತೆಗೆ ಸಂಬಂಧಪಟ್ಟಿದ್ದು" ಎಂಬ ಈ ಬಗೆಯ ಧೋರಣೆಗಳು ಮಕ್ಕಳ ಸಾಹಿತ್ಯದ ಹಿನ್ನಡೆಗೆ ಕಾರಣವಾಗಿವೆ. ಅದರಲ್ಲೂ ವಿಶೇಷವಾಗಿ ಇಂಗ್ಲೀಷ್ ಮಾಧ್ಯಮದ ಶಿಕ್ಷಣದಿಂದಾಗಿ ಕನ್ನಡ ಮಕ್ಕಳ ಕಾವ್ಯಕ್ಕೆ ಹೆಚ್ಚು ವ್ಯಾಪ್ತಿಯಿಲ್ಲವೇನು ಎಂದು ಅನಿಸಿರುವುದುಂಟು. ಕಾನ್ವೆಂಟ್ ಸಂಸ್ಕೃತಿಯಿಂದಾಗಿ ಸ್ಥಳೀಯ ಸಾಹಿತ್ಯ, ಸ್ಥಳೀಯ ಸಂಸ್ಕೃತಿಯಿಂದ ನಮ್ಮ ಮಕ್ಕಳು ಬಹಳ ದೂರ ಉಳಿಯುವ ಅಪಾಯಗಳು ಹೆಚ್ಚಾಗಿವೆ. ಒಂದು ನಿರ್ದಿಷ್ಟ ತರಗತಿಯ ಹಂತದವರೆಗೆ ಮಾತೃಭಾಷೆಯ ಕಲಿಕಾ ಶಿಕ್ಷಣ ಕಡ್ಡಾಯ ನೀತಿ ಜಾರಿಗಳು ಮಾತ್ರ ಇದಕ್ಕೆ ಪರಿಹಾರ ಆಗಬಲ್ಲವು ಜೊತೆಗೆ ಕನ್ನಡ ಕಾವ್ಯದ ದೃಷ್ಟಿಯಿಂದ ತಕ್ಕಮಟ್ಟಿಗೆ ಚೈತನ್ಯ ತುಂಬಬಲ್ಲವು ಎಂದು ಹೇಳಬಹುದು.

ಬಹುಶಃ ಈ ಬಗೆಯ ಸಮಸ್ಯೆಗಳಿಗೆ ಪರಿಹಾರ ನೀಡಲೆಂದೋ ಏನೋ ಅಮೇರಿಕ ಮತ್ತು ಗ್ರೇಟ್ ಬ್ರಿಟನ್‌ಗಳಂತಹ ರಾಷ್ಟ್ರಗಳಲ್ಲಿ ಮಕ್ಕಳ ಸಾಹಿತ್ಯ ರಚನೆಗೆ ಹಾಗೂ ಅವುಗಳಿಗಾಗಿ ಚಿತ್ರಗಳನ್ನು ಬಿಡಿಸಿಕೊಡುವವರಿಗೆ ಸುವರ್ಣ ಪದಕಗಳನ್ನು ಕೊಡುವ ಸಂಪ್ರದಾಯ ರೂಢಿಯಲ್ಲಿರುವುದು ಮಕ್ಕಳ ಸಾಹಿತ್ಯದ ಬೆಳವಣಿಗೆಯ ದೃಷ್ಟಿಯಿಂದ ಆಶಾದಾಯಕ ವಾದದ್ದೆನ್ನಬಹುದು ನಮ್ಮ ಭಾರತ ದೇಶದಲ್ಲೂ ಈಚೀನ ಕೆಲ ವರ್ಷಗಳಿಂದ ಕೇಂದ್ರ ಸಾಹಿತ್ಯ ಅಕಾಡೆಮಿ ಕೊಡ ಮಾಡುತ್ತಿರುವ 'ಕೇಂದ್ರ ಬಾಲ ಸಾಹಿತ್ಯ ಪುರಸ್ಕಾರ' ಪ್ರಶಸ್ತಿ ಸಹ ಒಂದು ಆರೋಗ್ಯಕರ ಹೆಜ್ಜೆ ಎಂದೇ ಹೇಳಬಹುದು. ಕರ್ನಾಟಕ ಸರ್ಕಾರವು ಸಹ 'ಕರ್ನಾಟಕ ಬಾಲ ವಿಕಾಸ ಅಕಾಡೆಮಿ'ಯಿಂದ ಮಕ್ಕಳ ಸಾಹಿತ್ಯ ರಚನೆಗಾಗಿ ಹಲವಾರು ಕಮ್ಮಟ(ಮಕ್ಕಳ ಕಾವ್ಯ, ಕಥೆ ಇತ್ಯಾದಿ)ಗಳನ್ನು ಈಗಾಗಲೇ ವಿಭಾಗವಾರು, ಜಿಲ್ಲಾವಾರು, ತಾಲೂಕುವಾರು ಹಂತದಲ್ಲಿ ಹಮ್ಮಿಕೊಳ್ಳುತ್ತ ಬಂದಿದ್ದು ಮಕ್ಕಳ ಕಾವ್ಯದ ಬೆಳವಣಿಗೆಗೆ ಉತ್ತೇಜನ ನೀಡುತ್ತ ಬಂದಿರುವುದು ಸಹ ಸ್ಮರಣೀಯವೆನಿಸಿದೆ.

## ೭.೩. ಸಾಹಿತ್ಯ ಚರಿತ್ರೆಯಲ್ಲಿ ಮಕ್ಕಳ ಸಾಹಿತ್ಯದ ನೆಲೆ - ಬೆಲೆ

ಕನ್ನಡ ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದ ಕೃತಿಗಳನ್ನು ಅಧ್ಯಯನ ಮಾಡಿದಾಗ ತಿಳಿದುಬಂದ ಸಂಗತಿಯೆಂದರೆ, ಸಾಹಿತ್ಯ ಚರಿತ್ರೆಯಲ್ಲಿ ಮಕ್ಕಳ ಸಾಹಿತ್ಯಕ್ಕೆ ಸಿಗಬೇಕಾದ ಸ್ಥಾನಮಾನಗಳು ಇನ್ನೂ ಸಿಕ್ಕಿಲ್ಲವೆಂಬುದು. ಸಾಮಾನ್ಯ ಸಾಹಿತ್ಯಕ್ಕಿರುವಂತೆ ವಿಶೇಷವಾಗಿ ಮಕ್ಕಳ ಸಾಹಿತ್ಯಕ್ಕೂ ತನ್ನದೇ ಆದ 'ಪ್ಲಾಟ್ ಫಾರಂ' ಇದೆ. ಆದರೂ ಇದನ್ನು ಯಾಕೆ ನಿರ್ಲಕ್ಷಕ್ಕೆ ಈಡು ಮಾಡಲಾಗಿದೆ ಎಂಬುದೇ ಯಕ್ಷ ಪ್ರಶ್ನೆಯಾಗಿದೆ. ರಂ.ಶ್ರೀ ಮುಗಳಿಯವರ 'ಸಾಹಿತ್ಯ ಚರಿತ್ರೆ' ಹಾಗೂ ಎಲ್.ಎಸ್. ಶೇಷಗಿರಿರಾವ್‌ರ 'ಹೊಸಗನ್ನಡ ಸಾಹಿತ್ಯ ಚರಿತ್ರೆ' ಕೃತಿಗಳನ್ನು ಗಮನಿಸಿದರೆ ಈ ಅಂಶ ಸ್ಪಷ್ಟವಾಗುತ್ತದೆ. ಈ ಕೃತಿಗಳನ್ನೇ ನಾನಿಲ್ಲಿ ವಿಶೇಷವಾಗಿ ಪ್ರಸ್ತಾಪಿಸಿದ ಕಾರಣವೇನೆಂದರೆ, ರಂ.ಶ್ರೀ ಮುಗಳಿಯವರ 'ಕನ್ನಡ ಸಾಹಿತ್ಯ ಚರಿತ್ರೆ', ಕೃತಿಯು 'ವಿದ್ಯಾರ್ಥಿ ಆವೃತ್ತಿ' ಎಂಬ ಹಣೆಪಟ್ಟಿಯನ್ನೂ ಹಾಗೆಯೇ 'ಆಚಾರ್ಯ ಕೃತಿ' ಎಂಬ ಹೆಗ್ಗಳಿಕೆಯನ್ನು ಹೊಂದಿದೆ. ಮೇಲಾಗಿ ಪದವಿ ಕಾಲೇಜುಗಳ ವಿದ್ಯಾರ್ಥಿಗಳು ಸಾಹಿತ್ಯ ಚರಿತ್ರೆಯ ಪಠ್ಯಕ್ರಮದ ಓದಿಗಾಗಿ ಯೇಥೆಚ್ಛವಾಗಿ ಬಳಸುವ ಬಹಳ ದೊಡ್ಡ ಆಕರಗ್ರಂಥವಾಗಿದೆ. ಪ್ರಸ್ತುತ ಕೃತಿಯಲ್ಲಿ ಸಾಹಿತ್ಯದ ಹಲವು ಪ್ರಕಾರಗಳನ್ನು ಪರಿಚಯಿಸಲಾಗಿದ್ದು ಮಕ್ಕಳ ಸಾಹಿತ್ಯದ ಪ್ರಕಾರದ ಕುರಿತಾಗಿ ಕಿಂಚಿತ್ತು ಪ್ರಸ್ತಾಪವಿಲ್ಲ. ಸಾಹಿತ್ಯ ಚರಿತ್ರೆಯ ಮೂಲ ಉದ್ದೇಶ ಕನ್ನಡ ಸಾಹಿತ್ಯದ ಪರಂಪರೆಯನ್ನು ವರ್ತಮಾನದ ಹಾಗೂ ಭವಿಷತ್ತಿನ ಪೀಳಿಗೆಗೆ ಪರಿಚಯಿಸುವುದು ಹಾಗೂ ಈ ಹಿನ್ನೆಲೆಯಲ್ಲಿ ಲೇಖಕರು ಹಳಗನ್ನಡ, ನಡುಗನ್ನಡದ ಪ್ರಕಾರಗಳ ಬಗ್ಗೆ ತಿಳಿಸಿದ್ದಾರೆ. ಕೊನೆಯದಾಗಿ ಹೊಸಗನ್ನಡದ ಸಾಹಿತ್ಯ ಪ್ರಕಾರಗಳ ಬಗ್ಗೆ ಮಾತನಾಡುವಾಗಲೂ ಕೇವಲ ಕತೆ, ಕಾದಂಬರಿ, ನಾಟಕ, ಪ್ರಬಂಧ, ಸಾಹಿತ್ಯ ವಿಮರ್ಶೆ, ಪ್ರವಾಸ ಸಾಹಿತ್ಯ, ಪತ್ರರೂಪ ಸಾಹಿತ್ಯ, ಶಾಸ್ತ್ರೀಯ ಸಾಹಿತ್ಯಗಳ ಬಗ್ಗೆ ಚೆನ್ನಾಗಿಯೇ ಪ್ರಸ್ತಾಪ ಮಾಡಿದ ಲೇಖಕರು ಮಕ್ಕಳ ಸಾಹಿತ್ಯದ ಕುರಿತು ವಿಸ್ತೃತವಾಗಿ ಅಲ್ಲದಿದ್ದರೂ ಕಿಂಚಿತ್ತದಾರೂ, ಸಂಕ್ಷಿಪ್ತವಾಗಿಯಾದರೂ ಹೆಸರಿಸದೇ ಇರುವುದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಕ್ಕಳ ಸಾಹಿತ್ಯಕ್ಕೆ ಇರುವ ಸ್ಥಾನಮಾನಗಳ ಬಗ್ಗೆ ಗಂಭೀರವಾಗಿ ಆಲೋಚಿಸುವಂತೆ ಮಾಡಿದೆ. ಪದವಿ ಕಾಲೇಜಿನ ವಿದ್ಯಾರ್ಥಿಗಳಿಗೆ ಮಕ್ಕಳ ಸಾಹಿತ್ಯದ ಪ್ರಕಾರ ಗೊತ್ತಾಗದೇ ಹೋದರೆ, ಒಂದು ಸಾಹಿತ್ಯ ಪ್ರಕಾರ ನೇಪಥ್ಯಕ್ಕೆ ಸರಿಯಲು ಪರೋಕ್ಷವಾಗಿ ಈ ಅಂಶವು ಕಾರಣವಾಗಬಲ್ಲುದು. ಸ್ನಾತಕೋತ್ತರದ ಪಠ್ಯಕ್ರಮದಲ್ಲೂ ಸಹ ಕತೆ, ಕವಿತೆ, ವಿಮರ್ಶೆ, ನಾಟಕ, ಕಾದಂಬರಿ, ಪ್ರಬಂಧಗಳ ಪ್ರಕಾರಗಳಿಗೆ ಹೆಚ್ಚು ಒತ್ತು ನೀಡಲಾಗಿದೆ. ಮಕ್ಕಳ ಸಾಹಿತ್ಯದ ಕುರಿತಾಗಿ ಇಲ್ಲೂ ನ್ಯಾಯ ಒದಗಿಸಲಾಗಿಲ್ಲ.

ಕನ್ನಡ ಸಾಹಿತ್ಯದ ಪಂಥಗಳಿಗೆ ಸಂಬಂಧಿಸಿದಂತೆ ನಾವು ನೋಡುವುದಾದರೆ, ನವೋದಯದ ನಂತರ ಬಂದ ಪ್ರಗತಿಶೀಲರ ಹುಟ್ಟಿಗೆ ಕಾರಣ ನವೋದಯದವರ ಇತಿಮಿತಿಗಳು. ಹಾಗೆಯೇ ಪ್ರಗತಿಶೀಲರ ಇತಿಮಿತಿಗಳು ನವ್ಯದ ಹುಟ್ಟಿಗೆ ಕಾರಣವಾಯಿತು. ೭೦ರ ದಶಕದಲ್ಲಿ ಚಳುವಳಿಗಳು,

ಹೊಸ ಬಗೆಯ ಸಂವೇದನೆಗಳು ರೂಪತಾಳಿದ್ದು ಹೀಗೆಯೇ. ಈಗಾಗಲೇ ದಲಿತ ಬದುಕಿನ ಜೀವನಾನುಭವದ ಚಿತ್ರಣಗಳು, 'ಮುಸ್ಲಿಂ' ಸಮುದಾಯದ ಬದುಕಿನ ಕ್ರಮಗಳ ಒಳನೋಟಗಳು, ಮಹಿಳಾ ಲೋಕದ ತಲ್ಲಣಗಳು, ಒಳಬೇಗುದಿಗಳು ಅಭಿವ್ಯಕ್ತವಾಗಿದ್ದರೂ, ಮುಖ್ಯವಾಗಿ ಮತ್ತೆ ಪರ್ಯಾಯವಾಗಿ, ಸ್ವತಂತ್ರವಾಗಿ, ಹೊಸದೊಂದು ರೂಪದಲ್ಲಿ ೭೦ರ ದಶಕದಲ್ಲಿ ಮಹಿಳಾ ಸಂವೇದನೆ, ದಲಿತ ಸಂವೇದನೆ, ಮುಸ್ಲಿಂ ಸಂವೇದನೆಗಳು ಅಸ್ತಿತ್ವಕ್ಕೆ ಬಂದಿದ್ದು ಈ ಹಿಂದೆ ಸಂಬಂಧಪಟ್ಟ ಸಂವೇದನೆಗಳ ಅಭಿವ್ಯಕ್ತಿಯಲ್ಲಿ ಪರಿಪೂರ್ಣ ನ್ಯಾಯ ಸಿಗದೇ ಇದ್ದ ಕಾರಣಕ್ಕಾಗಿಯೇ ಎಂಬುದು ಗಮನಾರ್ಹ ಸಂಗತಿಯಾಗಿದೆ.

ಸಾಹಿತ್ಯ ಚರಿತ್ರೆಯಲ್ಲಿ ಮಕ್ಕಳ ಸಾಹಿತ್ಯಕ್ಕೆ ಸೂಕ್ತ ನೆಲೆ-ಬೆಲೆ ಸಿಗದೇ ಇರುವ ಹಿನ್ನೆಲೆಯಲ್ಲಿ ಹಾಗೂ ಸಾಮಾನ್ಯ ಸಾಹಿತ್ಯದಲ್ಲಿರುವಂತೆ ಮಕ್ಕಳ ಸಾಹಿತ್ಯದ ಒಳಗಡೆಯೇ ಮಕ್ಕಳಿಗಾಗಿ ಪ್ರತ್ಯೇಕವಾಗಿ ಕಾದಂಬರಿ ಕಥೆ, ಕವಿತೆ, ಪ್ರಬಂಧಗಳ ಪ್ರಕಾರಗಳು ಇರುವ ಹಿನ್ನೆಲೆಯಲ್ಲಿ ಮಕ್ಕಳ ಸಾಹಿತ್ಯಕ್ಕೆ ಒಂದು ಪ್ರತ್ಯೇಕ ಸಾಹಿತ್ಯ ಚರಿತ್ರೆಯ ತುರ್ತು ಇಂದೆಂದಿಗಿಂತಲೂ ಜೋರಾಗಿಯೇ ಇದೆ. ಮಹಿಳಾ ಸಾಹಿತ್ಯ ಚರಿತ್ರೆಯ ಕೃತಿಗಳು ರಚನೆಯಾಗಿದ್ದು ಸಹ ಪರ್ಯಾಯ ಸಾಹಿತ್ಯ ಚರಿತ್ರೆಗೆ ಇರುವ ಸ್ಪಷ್ಟ ನಿರ್ದೇಶನದಂತೆ ನಮಗೆ ಗೋಚರಿಸುತ್ತದೆ ಹಾಗೂ ಈ ನೆಲೆಯಲ್ಲಿ ಮಾತ್ರ ಬಹುಶಃ ಮಕ್ಕಳ ಸಾಹಿತ್ಯಕ್ಕೆ ಒಂದು ಸೂಕ್ತ ಸ್ಥಾನಮಾನ ನೀಡಲು ಸಾಧ್ಯವಾಗ ಬಹುದೆನಿಸುತ್ತದೆ.

## ೭.೪. ಮಕ್ಕಳ ಕಾವ್ಯ ಕ್ಷೇತ್ರದಲ್ಲಾದ ಪಲ್ಲಟಗಳು

ಯಾವುದೇ ಕಾವ್ಯ ಸಂದರ್ಭನುಸಾರ ಭೂತವನ್ನು, ಭವಿಷ್ಯತ್ತನ್ನು ಒಳಗೊಳ್ಳಬಹುದೆನ್ನುವ ಸಂಗತಿಯು ಕಾವ್ಯಕ್ಕಿರುವ ಕಾಲಾತೀತ ಶಕ್ತಿ ಅಥವಾ ಕಾವ್ಯದ ಸಾರ್ವಕಾಲಿಕ ಸತ್ಯದ ಪ್ರತಿಪಾದನೆಯ ಗುಣ ಎಂತದ್ದು ಎಂಬುದನ್ನು ಸೂಚಿಸುವಂತದ್ದಾಗಿದೆ. ಆದರೆ ಯಾವುದೇ ಕಾಲದ ಕಾವ್ಯವು ಭೂತ-ಭವಿಷ್ಯತ್ತುಗಳನ್ನು ಸಂಧಿಸದೇ ಹೋದರೂ ಚಿಂತೆಯಿಲ್ಲ. ಆದರೆ ಅದು ಅಂತಿಮವಾಗಿ ತನ್ನ ಕಾಲದ ವರ್ತಮಾನದ ಅನುಸಂಧಾನಕ್ಕಾಗಿ ಮಾತ್ರ ಸದಾ ತುದಿಗಾಲಲ್ಲಿ ನಿಂತು ಕಾಯುತ್ತಿರಬೇಕಾಗುತ್ತದೆ. ವರ್ತಮಾನದಿಂದ ದೂರವೇ ನಿಲ್ಲುವ ಕಾವ್ಯ ಅದು ಕಾವ್ಯವೇ ಅಲ್ಲ. ಬದಲಾವಣೆ ಲೋಕದ ಸಹಜ ನಿಯಮ. ಕಾವ್ಯವು ಕೂಡ ಅದರಿಂದ ಹೊರತಾದುದಲ್ಲ. ಕನ್ನಡ ಮಕ್ಕಳ ಕಾವ್ಯವು ಸಹ ಕಾಲದ ಗತಿಗೆ ಅನುಗುಣವಾಗಿ ವಸ್ತು-ವಿಷಯ, ಭಾಷೆಯ ಬಳಕೆಗಳಲ್ಲಿ ಸ್ಥಿತ್ಯಂತರಗಳನ್ನು ಪಡೆದುಕೊಂಡಿದೆ. ಈ ಅಂಶಗಳನ್ನು ಕುರಿತು ಇಲ್ಲಿ ವಿವೇಚಿಸಲಾಗುವುದು.

### ೭.೪.೧. ಕಾವ್ಯದ ವಸ್ತುವಿಷಯದಲ್ಲಾದ ಪಲ್ಲಟಗಳು

ಸ್ವಾತಂತ್ರ್ಯಪೂರ್ವ ಮಕ್ಕಳ ಕಾವ್ಯದಲ್ಲಿ ಆ ಕಾಲದ ತುರ್ತುಗಳಲ್ಲಿ ಒಂದಾಗಿದ್ದ ದೇಶಪ್ರೇಮದ ಕುರಿತಾಗಿಯೋ, ಆಕಾಶದ ಸೂರ್ಯ-ಚಂದ್ರರ ಕುರಿತಾಗಿಯೋ, ತನ್ನ ಸುತ್ತಲಿನ ಪ್ರಾಣಿ-ಪಕ್ಷಿಗಳ

ಕುರಿತಾಗಿಯೋ, ತಂದೆ-ತಾಯಿ-ಬಂಧು-ಬಳಗ, ಶಾಲೆ, ಪರಿಸರ, ಊರು-ಕೇರಿಗಳ ಅಭಿವ್ಯಕ್ತಿಯೇ ಎದ್ದು ತೋರುತ್ತಿತ್ತು. ಸಮಕಾಲೀನ ಸಂದರ್ಭದ ಕನ್ನಡ ಮಕ್ಕಳ ಕಾವ್ಯವು ಇದೆಲ್ಲವನ್ನು ಒಳಗೊಳ್ಳುವುದರ ಜೊತೆಯಲ್ಲಿಯೇ ತನ್ನ ಕಾಲದ ವಸ್ತು-ವಿಷಯಗಳ ಅಭಿವ್ಯಕ್ತಿಗೆ ಎಡೆ ನೀಡಿದೆ. ಅದಕ್ಕೆ ಉದಾಹರಣೆಯಾಗಿ ಮಕ್ಕಳ ಕಾವ್ಯದಲ್ಲಿ ತಮ್ಮನ್ನು ಗಂಭೀರವಾಗಿಯೇ ತೊಡಗಿಸಿಕೊಂಡ ಕವಿ ಚಂದ್ರೇಗೌಡ ಕುಲಕರ್ಣಿಯವರ ರಚನೆಯೊಂದನ್ನು ಇಲ್ಲಿ ಗಮನಿಸಬಹುದು.

### ಬಣ್ಣದ ಟಿ.ವಿ.

ಬಣ್ಣದ ಚಿತ್ರದ
ಟಿ.ವಿ. ಪೆಟ್ಟಿಗೆ
ಮೌನವ ತಂದಿತು ಮನೆಗೆಲ್ಲ
ಅಪ್ಪ ಅಮ್ಮನಿಗೆ
ಏನೇ ಕೇಳಲು
ನನ್ನಯ ಮಾತಿಗೆ ಬೆಲೆಯಿಲ್ಲ

ಪುಟ್ಟ ತಂಗಿ
ತೊಟ್ಟಿಲಲತ್ತರು
ಅಮ್ಮ ಎದ್ದು ನೋಡೋಲ್ಲ
ಬೆಕ್ಕು ಬಂದು
ಹಾಲು ಕುಡಿದರು
ಯಾರು, ಈಗ ಕೇಳೊಲ್ಲ

ನೆಂಟರು ಬಂದರು
ತುಂಟರು ಕಲೆತರು
ಹರಟೆಯ ಮಾತು ನಡೆಯೊಲ್ಲ

ಯಾರೆ ಇರಲಿ
ಕುಳಿತೇ ಬಿಡುವರು
ತುಟಿಗಳ ಹೊಲಿಗೆ ಬಿಚ್ಚೊಲ್ಲ

ಹೂವಿನ ತೋಟಕೆ
ನೀರನು ಹಾಕಲು
ಯಾರೂ ಈಗ ದಿಕ್ಕಿಲ್ಲ

ಕತೆಯನು ಹೇಳುವ
ಪ್ರೀತಿಯ ತೋರುವ
ಅಜ್ಜಿಗೆ ಈಗ ಬಿಡುವಿಲ್ಲ

ಬೆಳಗು ಬೈಗು
ನೋಡುತ ಕುಳಿತರು
ಎನಿತು ಇವರಿಗೆ ದಣಿವಿಲ್ಲ

ಮಾತೆ ಇಲ್ಲ
ಮೌನವೆ ತುಂಬಿದೆ
ಏಕೊ ಏನೊ ಗೊತ್ತಿಲ್ಲ[੧]

ಆಧುನಿಕ ಯುಗದ ಆವಿಷ್ಕಾರಗಳಲ್ಲಿ ಟಿ.ವಿ.ಯು ಸಹ ಒಂದಾಗಿದೆ. ಇದು ಇಂದು ಬಡವ-ಬಲ್ಲಿದನೆಂಬ ಭೇದ-ಭಾವವಿಲ್ಲದ ಎಲ್ಲರ ಮನೆ ಮನಗಳನ್ನು ಆವರಿಸಿದೆ. ಯಾವುದೇ ಆವಿಷ್ಕಾರದ ಒಟ್ಟು ಫಲಿತದಲ್ಲಿ ಒಳ್ಳೆಯದು ಮತ್ತು ಕೆಟ್ಟದ್ದು ಎರಡೂ ಇರುತ್ತದೆ. ಅದು ಬಳಸುವವರನ್ನು ಅವಲಂಬಿಸಿರುತ್ತದೆ. ಟಿ.ವಿ.ಯಿಂದ ಮನೋರಂಜನೆ, ಜ್ಞಾನ ಎರಡೂ ದೊರಕುತ್ತದೆಯಾದರೂ ಜನ ಅದನ್ನಿಂದು ಮನೋರಂಜನೆಗೆ ಹೆಚ್ಚು ಬಳಸುತ್ತಿರುವುದು ದುರಂತವೇ ಸರಿ. ಟಿ.ವಿ. ನೋಡಲು ಸಮಯ ಮಿತಿಯೊಂದು ಇಲ್ಲದೆ ನಿರಂತರವಾಗಿ ಅದನ್ನು ಬಳಸುವುದರಿಂದ ಕೌಟುಂಬಿಕ ಪರಿಸರದಲ್ಲಾದ ಅವಾಂತರ, ಸಂಬಂಧಗಳ ಬಿರುಕು ಹಾಗೂ ಈ ಕೌಟುಂಬಿಕ ಪರಿಸರದಲ್ಲಿ ಘಟಿಸಿದ ಬದಲಾವಣೆಗಳಿಂದಾದ ಸಾಮಾಜಿಕ ವಿಘಟನೆಯ ದುಷ್ಪರಿಣಾಮಗಳನ್ನು, ಮಗುವೊಂದನ್ನು ಸಂಕೇತವಾಗಿಟ್ಟುಕೊಂಡು ಅವನ ಒಳಬೇಗುದಿಗಳ ಚಿತ್ರಣವನ್ನು ಅತ್ಯಂತ ಸೂಕ್ಷ್ಮವಾಗಿ ಚಿತ್ರಿಸುವಲ್ಲಿ ಕವಿ ಯಶಸ್ವಿಯಾಗಿದ್ದಾರೆ. ಟಿ.ವಿ.ಯಿಂದಾಗಿ ಹಿರಿಯರ ಮಾತು ಬೆಲೆ ಕಳೆದುಕೊಂಡದ್ದು, ಇಡೀ ಮನೆಯನ್ನು ಮೌನ ಆವರಿಸುವುದು, ಮಕ್ಕಳು ಅತ್ತರು ಸ್ಪಂದಿಸದೆ ಇರುವ ದೌರ್ಭಾಗ್ಯದ ಸ್ಥಿತಿ, ಮನೆಗೆ ಬರುವ ನೆಂಟರ ಜೊತೆಗೂ ಹೆಚ್ಚು ಮಾತು - ಹರಟೆ ಇಲ್ಲದೆ ತುಟಿಗಳಿಗೆ ಹೊಲಿಗೆ ಹಾಕಿಸಿದವರಂತೆ ವರ್ತಿಸುವ ರೀತಿ, ಮಕ್ಕಳ ಬಾಲ್ಯದಲ್ಲಿ ಮಹತ್ತರ ಪಾತ್ರವಹಿಸಬೇಕಾದ ಅಜ್ಜ-ಅಜ್ಜಿಯು ಸಹ ತಮ್ಮ ಹಾಡು-ಕಥೆಗಳಿಂದ ದೂರವೇ ಉಳಿಯುವುದು ಮಗುವಿಗೆ ಮಾನಸಿಕ ಆಘಾತವನ್ನುಂಟು ಮಾಡಿದೆ. ಇದು ಕವಿಯ ಕವಿತೆಗೆ ವಸ್ತುವಾಗಿದೆ.

ಆಧುನಿಕ ಜೀವನ ಪದ್ಧತಿಯು ನಮ್ಮ ಆಹಾರ ಸಂಸ್ಕೃತಿಯಲ್ಲಿ ಸಾಕಷ್ಟು ಬದಲಾವಣೆಗಳನ್ನು ತಂದಿದೆ. ಅದರ ಅಭಿವ್ಯಕ್ತಿ ಕವಿ ಜಂಬುನಾಥ ಕಂಚ್ಯಾಣಿಯವರ ಪದ್ಯ 'ಬ್ರೆಡ್ಡು-ಜಡ್ಡು'ವಿನಲ್ಲಿ ವ್ಯಕ್ತವಾಗಿದೆ.

ಅಪ್ಪ ಕೊಟ್ಟ ದುಡ್ಡು
ತಮ್ಮ ತಂದ ಬ್ರೆಡ್ಡು

ಎಲ್ಲ ತಾನೆ ತಿಂದ
ಹೊಟ್ಟೆ ನೋವು ಎಂದ[೨]

ಮಕ್ಕಳು ಇಂದು ಚೆನ್ನಾಗಿ ಆಹಾರ ಸೇವನೆ ಮಾಡದಿರುವುದು ಪೋಷಕರಿಗೆ ದೊಡ್ಡ ತಲೆನೋವಾಗಿ ಪರಿಣಮಿಸಿದೆ. ಅದರಲ್ಲಿ ನಮ್ಮ ಪಾಲುದಾರಿಕೆಯು ಇದೆ. ಕಾರಣ ನಾವೀಗ ಆಧುನಿಕ ಜೀವನಶೈಲಿಯ ನಾಗಾಲೋಟದೊಂದಿಗೆ ಹೆಜ್ಜೆ ಹಾಕುತ್ತಿದ್ದೇವೆ. ಹಿಂದೆ ಮೂರು ಹೊತ್ತು ಊಟದ ಪದ್ಧತಿಯಿದ್ದ ಮನೆಗಳಲ್ಲಿ ಇಂದು ಎರಡು ಹೊತ್ತು ಊಟ, ಒಂದು ಹೊತ್ತು ಬೆಳಿಗ್ಗೆ ಟಿಫಿನ ಬಂದಾಗಿದೆ. 'ಟಿಫಿನ್'ನ ಈ ಕಲ್ಪನೆ ಎಷ್ಟು ಅತಿರೇಕಕ್ಕೆ ಹೋಗಿದೆಯೆಂದರೆ ಏನಾದರೂ ತಿಂಡಿ ತಿನ್ನುವ ಬದಲಾಗಿ, ಅದು ಬ್ರೆಡ್ಡು-ಜಾಮ್ ಅನ್ನು ಮಿಕ್ಸ್ ಮಾಡಿಕೊಂಡು ಅದನ್ನೇ ಬೆಳಗಿನ ಉಪಹಾರವಾಗಿ ಸೇವಿಸುವ ಹಂತಕ್ಕೆ ನಾವೀಗಾಗಲೇ ತಲುಪಿಯಾಗಿದೆ. ಮನುಷ್ಯನ ದೇಹದ ಶಕ್ತಿಯ ಉತ್ಪಾದನೆಯ ಕೇಂದ್ರ ಸ್ತಂಭವಾದ ಆಹಾರ ಸೇವನೆಯು ಇಷ್ಟು ಕಳಪೆಮಟ್ಟಕ್ಕೆ ತಲುಪಿದರೆ ಸಹಜವಾಗಿ ಅದು ವ್ಯಕ್ತಿಯ ಆರೋಗ್ಯದ ಮೇಲೂ ದುಷ್ಪರಿಣಾಮ ಬೀರುತ್ತದೆ. ಇದನ್ನೇ ಕವಿ ಇಲ್ಲಿ ಕೇವಲ ನಾಲ್ಕೇ ಸಾಲುಗಳಲ್ಲಿ ಚೆನ್ನಾಗಿ ಚಿತ್ರಿಸಿದ್ದಾರೆ.

ಭಾರತ ದೇಶದ ಸಾರಿಗೆ ಸಂಪರ್ಕದಲ್ಲಿ ಭಾರಿ ಕ್ರಾಂತಿ ಸಂಭವಿಸಿದ್ದು ಬ್ರಿಟಿಷ ಆಡಳಿತದ ಸಂದರ್ಭದಲ್ಲಿ ಅವರು ತಮ್ಮ ಅನುಕೂಲಕ್ಕಾಗಿ 'ರೈಲ'ನ್ನು ಪರಿಚಯಿಸಿದರು. ಮಕ್ಕಳಿಗೆ 'ರೈಲುಗಾಡಿ' ಎಂದರೆ ಇಂದಿಗೂ ಕುತೂಹಲದ ಕೇಂದ್ರಬಿಂದುವೇ ಆಗಿದೆ. ಕಾರಣ ರೈಲು ತನ್ನ ಶಬ್ದದಿಂದ, ತನ್ನ ಉದ್ದವೂ ಆದ, ವಿಶಿಷ್ಟವೂ ಆದ ಆಕಾರದಿಂದ, ತನಗೆಂದೇ ಮಾಡಿರುವ ಪ್ರತ್ಯೇಕ ರಸ್ತೆಯ ಕಾರಣದಿಂದ ಅದು ಇತರ ವಾಹನಗಳಿಂದ ದೂರವೇ ನಿಂತು ಮಕ್ಕಳಿಗೆ ತನ್ನ ಅಸ್ತಿತ್ವದ ಅಸ್ಮಿತತೆಯನ್ನು ಪ್ರತ್ಯೇಕವಾಗಿಯೇ ತೋರುತ್ತದೆ. ರೈಲಿನ ಬಗೆಗಿನ ಮಕ್ಕಳ ಅರಿವನ್ನು ವಿಸ್ತೃತಗೊಳಿಸುವ ಜೊತೆಗೆ ಅವರಿಗೆ ಮನೋರಂಜನೆಯನ್ನು ನೀಡುವ ಮೂಲಕ ಅವರ ಮನೋವಿಕಾಸಕ್ಕೆ ಕಾರಣವಾಗುವ ಕವಿ ನಿಂಗಣ್ಣ ಕುಂಟಿಯವರ ಈ ಮಕ್ಕಳ ಕವಿತೆ ಬದಲಾದ ಕಾಲಘಟ್ಟದಲ್ಲಿ ಬದಲಾದ ಕಾವ್ಯದ ವಸ್ತುವಿನ ಸಂಕೇತದಂತೆಯು ತೋರುತ್ತದೆ.

**ಚುಕು ಬುಕು ಗಾಡಿ**

ಚುಕು ಬುಕು ಚುಕು ಬುಕು
ಬಂದಿತು ಗಾಡಿ
ಕಬ್ಬಿಣ ಕಂಬಿಯ
ಮೇಲಿಂದೋಡಿ

ಗರಗರ ತಿರುಗುವ
ಗಾಲಿಯ ಗಾಡಿ
ಬರಬರ ಓಡುವ
ರೈಲಿನ ಗಾಡಿ

ಕೂಕೂ ಎಂದು
ಕೂಗುವ ಗಾಡಿ

ಸೀಟಿಯ ಊದುತ
ಓಡುವ ಗಾಡಿ

ಡಿಜೈಲ್ ಎಣ್ಣೆಯ
ಕುಡಿಯುವ ಗಾಡಿ
ಕಲ್ಲಿದ್ದಲನು
ತಿನ್ನುವ ಗಾಡಿ

ಸ್ಟೇಶನಕೊಮ್ಮೆ
ನಿಲ್ಲುವ ಗಾಡಿ
ನೀರನು ಕುಡಿದು
ಓಡುವ ಗಾಡಿ

ಜನರನು ಹೊತ್ತಿಹ
ಉದ್ದನೆ ಗಾಡಿ
ಸರಕನು ತುಂಬಿದ
ಚುಕು ಬುಕುಗಾಡಿ[೩]

ಚಲನಚಿತ್ರ ಮಾಧ್ಯಮವು ಆಧುನಿಕ ಜಗತ್ತಿನ ಬದುಕಿನ ಭಾಗವೇ ಆಗಿಬಿಟ್ಟಿದೆ. ಸಿನಿಮಾ ಜಗತ್ತು ಸೃಷ್ಟಿಸುವ ಮೋಹಕತೆಗೆ ಮರುಳಾಗಿ, ವಾಸ್ತವ ಬದುಕಿನಲ್ಲಿ ಅದನ್ನೇ ಅನುಸರಿಸಲು ಹೊರಡುವ ಯುವಕರು ಹೇಗೆ ಅಪಾಯಕ್ಕೆ ಸಿಲುಕುತ್ತಾರೆ ಎಂಬುದನ್ನು ಕವಿ ಆರ್.ಕೆ. ಶಾನುಭೋಗ ಅವರು ತುಂಬಾ ಮನೋಜ್ಞವಾಗಿ ತಮ್ಮ ಕವಿತೆಯ ಮೂಲಕ ಚಿತ್ರಿಸಿದ್ದಾರೆ.

**ಪ್ಯಾರಾಶೂಟಿನ ಹಾರಾಟ**

ಬುದ್ಧಿಯು ಬಲಿಯದ ಬೆಪ್ಪರು ಮೂವರು
ಹೊರಟರು ನೋಡಲು ಸಿನಿಮವನು
ಟಿಕೆಟ್ಟು ಕೊಳ್ಳಲು ಜೇಬನು ತಡಕಿ
ತೆಗೆದರು ಚಿಲ್ಲರೆ ಕಾಸನ್ನು!

ಸಿನಿಮಾದಲ್ಲಿ ಬಿಳಿಕೊಡೆಯಂತಹ
ಪ್ಯಾರಾಶೂಟು ಬರುತಿತ್ತು
ಗಗನದ ಮಧ್ಯದಿ ತೇಲುತ ತೇಲುತ
ಭೂಮಿಯ ಮೇಲ್ಗಡೆ ಇಳಿದಿತ್ತು!

ಪ್ಯಾರಾಶೂಟನು ನೋಡಿ ಬೆಪ್ಪರಿಗೆ
ಗಗನದಿ ಹಾರುವ ಮನಸಾಯ್ತು

ಕೊಡೆಯನು ಹಿಡಿದು ಮೇಲಕೆ ಹಾರುವ
ಉಪಾಯ ಒಬ್ಬಗೆ ತಿಳಿದೋಯ್ತು!

ಎತ್ತರವಾಗಿಹ ತೆಂಗಿನ ಮರಗಳು ಮೂರು
ಕಂಡವು ತೋಟದ ಅಂಚಿನಲಿ
ಮೂವರು ಬೆಪ್ಪರು ದೋತರ ಬಿಗಿದು
ಮರವೇರಿದರು ಬೇಗದಲಿ!

ಗಾಳಿಯು ಬೀಸಲು ಮುಖಂಡ ಬೆಪ್ಪನು
"ಮಿತ್ರರೆ ರೆಡಿಯಾಗಿರಿ"! ಎಂದ
ಎಲ್ಲರು ಚಟಪಟ ಕೊಡೆಯನು ಬಿಡಿಸಲು
"ಒಂದು, ಎರಡು, ಮೂರೆಂದ!"

"ಮೂರು" ಎನ್ನಲು ಮೂವರು ಮಿತ್ರರು
ಮರವನು ಬಿಟ್ಟು ಹಾರಿದರು
ಕಣ್ಣನು ಮುಚ್ಚಿ ಗಗನದಿ ತೇಲುವ
ಸುಂದರ ಕನಸನು ನೋಡಿದರು!

ಮೇಲಕೆ ಹಾರದೆ ಕಪ್ಪನೆ ಕೊಡೆಯು
ಕೆಳಗಡೆ ಸಾಗಿತು ಬಿರುಸಾಗಿ
ಭೂಮಿಗೆ ದೇಹವು ಅಪ್ಪಳಿಸುತಲು
ಅರಚಿದರೆಲ್ಲರು ಜೋರಾಗಿ!

ಕಾಲಿನ ಮೂಳೆಯು ಮುರಿದೇ ಹೋಗಲು
ಸೇರಿದರೆಲ್ಲರು ಆಸ್ಪತ್ರೆ
ಇಂಜೆಕ್ಷನ್ ಜೊತೆ ಔಷಧಿ ಕುಡಿಯುತ
ನುಂಗುತಲಿದ್ದರು ಕಹಿಮಾತ್ರೆ!

ಯೋಚನೆ ಇಲ್ಲದೆ ಸಾಹಸ ಮಾಡಲು
ಜೀವಕೆ ಬರುವುದು ಆಪತ್ತು!
ಹುಚ್ಚು ಸಾಹಸವ ಬಿಟ್ಟರೆ ಸಿಗುವುದು
ಆರೋಗ್ಯದ ಸಿಹಿ ಸಂಪತ್ತು!![9]

ಸಿನಿಮಾ ಜಗತ್ತು, ಪ್ಯಾರಾಶೂಟುಗಳೆಲ್ಲ ಮಾನವನ ಎಣೆಯಿಲ್ಲದ ಅವಿರತ ಸಂಶೋಧನೆಯ ಫಲಗಳೇ ಆಗಿವೆ. ಆದರೆ ಆಧುನಿಕ ಜಗತ್ತಿನ ಒಂದು ಅಪಾಯವೆಂದರೆ ಅದು ಹೆಚ್ಚಾಗಿ ವಾಸ್ತವವನ್ನು ಮರೆಮಾಚಿ, ಮೋಹಕವಾದ, ರಮ್ಯವಾದ ಭ್ರಮಾತ್ಮಕ ಜಗತ್ತನ್ನು ಸೃಷ್ಟಿಸುವುದಾಗಿದೆ. ವ್ಯಕ್ತಿ ಈ ಬಗೆಯ ಭ್ರಮಾತ್ಮಕ ಸ್ಥಿತಿಯಿಂದ ಎಚ್ಚೆತ್ತು ಎಚ್ಚರದ ಪ್ರಜ್ಞೆಯೊಂದಿಗೆ ನಾವು ಬದುಕ ಬೇಕೆಂಬ ಸಂದೇಶವನ್ನು ಮಕ್ಕಳಿಗೆ ನೀಡುವಲ್ಲಿ ಕವಿ ಯಶಸ್ವಿಯಾಗಿದ್ದಾರೆ.

'ಮೊಬೈಲು' ಶೀರ್ಷಿಕೆಯ ಮಕ್ಕಳ ಕವಿತೆಯು ಸಹ ಸಮಕಾಲೀನ ಸಂದರ್ಭದ ಮಕ್ಕಳ ಕಾವ್ಯದ ವಸ್ತುವಿನ ಆಯ್ಕೆಯನ್ನು ಎತ್ತಿತೋರಿಸುತ್ತದೆ.

### ಮೊಬೈಲು

ಕಿಸೆಯಲಿ ಅವಿತು
ಕೊರಳಿಗೆ ಜೋತು
ಬಿದ್ದಿಹುದೇನಿದು ಮೊಬೈಲು!
ನಡದಾ ಬೆಲ್ಟಿಗೆ
ವ್ಯಾನ್‌ಟಿ ಬ್ಯಾಗಿಗೆ
ಭೂಷಣವೇ ಇದು ಸ್ಪೆಶಲ್ಲು!

ಸಿನಿಮಾ ಥೇಟರ್
ಕಾರ್ಯಾಲಯದಲು
ತಲೆಚಿಟ್ಟ ಹಿಡಿಸಿವೆ ಮೊಬೈಲು!
ಕ್ಲಾಸ್ ರೂಮ್‌ಗಳಿಗು
ಕಾಲಿಟ್ ಬಿಟ್ಟು
ಕಾಡ್ತಿವೆ ನಮ್ಮನ್ನ್ ಯಾವಾಗ್ಲು!

ಬಸ್ಸು ರೈಲು
ಪ್ರಯಾಣದಲ್ಲು
ರಿಂಗಣಿಸುವುದು ಮೊಬೈಲು!
ಸ್ಕೂಟರ್ ಸವಾರ
ಕಾರ ಡ್ರೈವರ್
ಹಿಡಿದಿರತಾರೆ ಕೈಯಲ್ಲು!

ಚಾಲನೆ ಮಾಡ್ತ
ಮಾತಾಡತಾರೆ
ಎಚ್ಚರವಿರದೆ ಮೈಮೇಲು!
ಡಿಕ್ಕಿ ಹೊಡೆದು
ತಲೆಗಿಲೆ ಒಡೆದು
ಮುರಿದು ಬಿಟ್ರೇಗೆ ಕೈಕಾಲು

ಹೆಂಗ ಬೇಕ್ ಹಂಗ
ಬಳಸುವ ಇವರಿಗೆ
ಹೇಳಲು ಬಾರದೆ ಬಲ್ಲವರು!

ಎಷ್ಟು ಬೇಕಷ್ಟು
ಎಲ್ಲಿ ಬೇಕಲ್ಲಿ
ಬಳಸಿದರೇನಿದೆ ತಕರಾರು?"

ಕವಿ ಚಂದ್ರೇಗೌಡ ಕುಲಕರ್ಣಿಯವರು ತಮ್ಮ ಬಹುಪಾಲು ಕವಿತೆಗಳಲ್ಲಿ ವಸ್ತುವಿನ ಆಯ್ಕೆ ವರ್ತಮಾನಕ್ಕೆ ಸಂಬಂಧಿಸಿದ ವಿಚಾರಗಳೇ ಆಗಿವೆ. ವರ್ತಮಾನದ ತಲ್ಲಣಗಳಿಗೆ ಸ್ಪಂದಿಸುವ ಸಮಾಜಮುಖಿ ಚಿಂತನೆ ಇಲ್ಲಿ ವ್ಯಕ್ತವಾಗಿದೆ. ಇಂದು 'ಮನೆಗೊಂದು ಮರ, ಊರಿಗೊಂದು ವನ' ಎಂಬ ಮಾತನ್ನು ಅನುಷ್ಠಾನಕ್ಕೆ ತರುವಲ್ಲಿ ನಾವು ಸೋತಿದ್ದರೂ 'ವ್ಯಕ್ತಿಗೊಂದು ಮೊಬೈಲು, ಮೊಬೈಲ್‌ಗೆರಡು ಸಿಮ್' ಎಂಬುದನ್ನು ಅನುಚಾನವಾಗಿ ನಡೆಸಿಕೊಂಡು ಬಂದಿರುವುದರಲ್ಲಿ ನಾವು ಹಿಂದೆ ಬಿದ್ದಿಲ್ಲ. ಮೊಬೈಲ್‌ಗೂ ಎರಡು ಸಾಧ್ಯತೆಗಳಿವೆ. ಒಳ್ಳೆಯದು ಮತ್ತು ಕೆಟ್ಟದ್ದು. ಬಳಸುವ ಜನ ಮಾತ್ರ ಅದನ್ನು ಎಲ್ಲೆಂದರಲ್ಲಿ ರಸ್ತೆಯಲ್ಲಿ ವಾಹನ ಚಲಾಯಿಸುವಾಗಲೂ, ಸಿನೆಮಾ ನೋಡುವಾಗಲೂ, ಕಾರ್ಯಾಲಯದಲ್ಲೂ, ತರಗತಿಗಳಲ್ಲೂ, ಎಲ್ಲೆಂದರಲ್ಲಿ ಅಗತ್ಯಕ್ಕೆ ಮೀರಿ ಮಾತನಾಡುವವರ ಸಂಖ್ಯೆ ಹೆಚ್ಚುತ್ತಲೇ ಇದೆ. ಮೊಬೈಲಿನ ಅತಿಯಾದ ಬಳಕೆಯಿಂದ 'ಮಾತಿನ ಅಪವ್ಯಯ' ಆಗುತ್ತಿದೆ. ಎಷ್ಟೋ ರಸ್ತೆ ಅಪಘಾತಗಳು ಸಂಭವಿಸಿರುವುದು ಈ ಬಗೆಯ ಅತಿರೇಕಗಳಿಂದಲೇ ಎಂಬುದು ಎಲ್ಲರೂ ತಿಳಿದ ಸಂಗತಿ. ಈ ಹಿನ್ನೆಲೆಯಲ್ಲಿ 'ಮಿತಿ ಅರಿತು ನಡೆದರೆ ಬದುಕು ಚೆನ್ನ' ಎಂಬ ಸಂದೇಶ ಇಲ್ಲಿ ವ್ಯಕ್ತವಾಗಿದೆ.

ತಾಂತ್ರಿಕ ಜಗತ್ತಿನಲ್ಲಿ ಮೊಬೈಲ್ ನಂತರದಲ್ಲಿ ಬಹಳ ದೊಡ್ಡ ಕ್ರಾಂತಿ ಮಾಡಿದ್ದು 'ಕಂಪ್ಯೂಟರ್' ಸಾರಿಗೆ ಸಂಪರ್ಕದಲ್ಲಿ ಕ್ರಾಂತಿ ಮಾಡಿದ ಬಸ್ಸು, ರೈಲು, ವಿಮಾನ, ಹಡಗು ಇತ್ಯಾದಿ ಹಾಗೂ ಸಂವಹನ ಮಾಧ್ಯಮದಲ್ಲಿ ಮಹತ್ತರ ಬದಲಾವಣೆ ತಂದ ಸಿನಿಮಾ, ಟಿ.ವಿ., ಕಂಪ್ಯೂಟರ್, ಮೊಬೈಲುಗಳು ಜಗತ್ತನ್ನು ಕಿರಿದು ಮಾಡಿವೆ. ಆಕಾಶದಗಲದ ಜಗತ್ತನ್ನು ಕೇವಲ ಅಂಗೈಯಗಲದೊಳಗೆ ಹಿಡಿದಿಟ್ಟಿದೆಯೇನೋ ಎಂಬಂತೆ ಗೋಚರಿಸುತ್ತಿದೆ. ಕನ್ನಡ ಮಕ್ಕಳ ಕಾವ್ಯ ಜಗತ್ತು ಸಹ ಈ ಎಲ್ಲ ಸಂಗತಿಗಳನ್ನು ಹಿಡಿದಿಡುವಲ್ಲಿ ಹಿಂದೆ ಬಿದ್ದಿಲ್ಲ.

**ಕಾಡಿನಲ್ಲಿ ಕಂಪ್ಯೂಟರ್**

ಕಾಡಿನ ರಾಜ್ಯಕೆ
ಕಂಪ್ಯೂಟರ್ ಬಂತು
ನರಿಯೇ ಅದರ ಚಾಲಕನು

ಸಿಂಹವು ಮೀಸೆಯ
ತಿರುವುತ ಹೇಳಿತು
ಕಲಿಯಿರಿ ಪ್ರಜೆಗಳೆ ನೀವದನು

ಎಲ್ಲೆಡೆ ಕಂಪ್ಯೂಟರ್
ಶಾಲೆಯು ತೆರೆಯಿತು
ಕಲಿಕೆಯ ಸಂಖ್ಯೆಯು ಹೆಚ್ಚಾಯ್ತು

ಕರಡಿಯು ಜೇನಿನ
ಕಸುಬನು ಬಿಟ್ಟಿತು
ಕಂಪ್ಯೂಟರ ಕಲಿಕೆಗೆ ಮುಂದಾಯ್ತು

ಹುಲಿಯು ತನ್ನಯ
ಕೆಲಸವ ಮರೆತು
ಕಂಪ್ಯೂಟರ್ ಶಾಲೆ ಸೇರಾಯ್ತು

ಕಾಡಿನ ಮಕ್ಕಳು
ಹಿರಿಯರು ಎಲ್ಲರು
ಕಂಪ್ಯೂಟರ್ ಗುಂಗಲಿ ತೇಲಾಯ್ತು

ಹಣ್ಣಿನ ಲೆಕ್ಕ
ಮರಗಳ ಲೆಕ್ಕ
ಮಾಡುತಲಿದ್ದವು ಅರೆಕ್ಷಣದಿ

ಕೃಷಿಯನು ಮರೆತವು
ಸಾಹಿತ್ಯ ಮರೆತವು
ಜೀವನ ಕೆಟ್ಟಿತು ದಿನದಿನದಿ

ಕಂಪ್ಯೂಟರ್ ಕಲಿಯಿರಿ
ಹಣವನು ಗಳಿಸಿರಿ
ಹೇಳುತಲಿತ್ತು ನರಿರಾಯ

ಹಣವನು ತಿಂದು
ಬದುಕಲುಬಹುದೆ
ಎಂಬುದನರಿಯದ ಮಹರಾಯ

ಜಿಂಕೆಯು ಯೋಚಿಸಿ
ಮಂಕದು ಕವಿದಿದೆ
ತಿಳಿಸಲು ಬೇಕು ಜನಕೆಲ್ಲ

ಕಂಪ್ಯೂಟರ್ ಭರದಲಿ
ಕಸುಬನು ಮರೆತರೆ
ಬಾಳದು ನಡೆಯಬೇಕಲ್ಲ

ಕಾಡಲಿ ಸುತ್ತಿತು
ಜಾಗೃತಿ ಮಾಡಿತು
ಕಂಪ್ಯೂಟರ್ ಒಂದೇ ಬದುಕಲ್ಲ

ನಮ್ಮಯ ಕಸುಬಿನ
ಪ್ರಗತಿಗೆ ಬಳಸಿರಿ
ನೆಮ್ಮದಿ ಬರುವುದು ನಿಮಗೆಲ್ಲ

ಕಾಡಿನ ರಾಜ್ಯದಿ
ಹೊಸತನ ಮೂಡಿತು
ಅವರಿಗೆ ಈಗ ಅರಿವಾಯ್ತು

ಕಂಪ್ಯೂಟರ್ ಹಿರಿಮೆಯ
ಕಸುಬಿಗೆ ಬಳಸಿ
ಕಾಡಿನ ಪ್ರಗತಿಯ ಕಂಡಾಯ್ತು[3]

ಕನ್ನಡ ಮಕ್ಕಳ ಕಾವ್ಯ ಜಗತ್ತಿನಲ್ಲಿ ಕಾಡಿಗೆ, ಕಾಡು ಪ್ರಾಣಿಗಳಿಗೆ ಎಂದೆಂದಿಗೂ ವಿಶೇಷ ಸ್ಥಾನಮಾನ ಇದ್ದೇ ಇದೆ. 'ಕಂಪ್ಯೂಟರ್'ನ ಅಸ್ತಿತ್ವ ಮಾನವ ಸಮಾಜದಲ್ಲಿ ಎಂಬುದು ವಾಸ್ತವ. ಆದರೆ ಅದು ಕಾಡು ಪ್ರಾಣಿಗಳ ಕಾಡನ್ನು ಆಕ್ರಮಿಸಿದೆ ಎಂಬ ಒಂದು ಸುಂದರ ಕಲ್ಪಿತ ಕಥೆಯ ಅನಾವರಣವೇ ಕವಿ 'ತಮ್ಮಣ್ಣ ಬೀಗಾರ' ಅವರ ಈ ಸೃಜನಶೀಲ ಕವಿತೆಯ ಹಿಂದಿನ ಜೀವಧಾತು. ಕಂಪ್ಯೂಟರನ್ನು ಬಳಸುವ ಮಿತಿಯನ್ನು ಮೀರಿದರೆ ಅದರಿಂದ ಆಗುವ ಅಪಾಯವನ್ನು ಪ್ರಾಣಿಗಳನ್ನು ಸಾಂಕೇತಿಕವಾಗಿಟ್ಟುಕೊಂಡು ಚಿತ್ರಿಸುವ ಪ್ರಯತ್ನ ಮಾಡುತ್ತಾರೆ. 'ಕಂಪ್ಯೂಟರ್ ಮತ್ತು ನರಿ' ಎರಡೂ ಆಧುನಿಕ ಬಂಡವಾಳಶಾಹಿ ವ್ಯವಸ್ಥೆಯ ಅವತಾರದಂತೆ ಚಿತ್ರಿಸಿದ್ದಾರೆ.

ಬದಲಾದ ಮಾನವ ಜೀವನ ಶೈಲಿಗೆ ಅನುಗುಣವಾಗಿ ಮಾನವನಿಗೆ ಕಾಡುವ ಕಾಯಿಲೆಗಳ ಸ್ವರೂಪವೂ ಕೂಡ ಬದಲಾಗಿದೆ. ಇಂದು ಏಡ್ಸ್‌ನಂತಹ ಕಾಯಿಲೆ ಜಾಗತಿಕ ಕಾಯಿಲೆಯಾಗಿದೆ. ಚಿಕಗುನ್ಯಾ ಏಡ್ಸ್‌ನಷ್ಟು ಮಹಾಮಾರಿಯಲ್ಲದಿದ್ದರೂ ಮನುಷ್ಯನ ಬದುಕನ್ನು ಹಿಂಡಿ ಹಿಪ್ಪೆ ಮಾಡುವ ಗುಣ ಈ ಕಾಯಿಲೆಯದ್ದು. ಮೈಕೈ ನೋವು ತರುವ ಮೂಲಕ ಎಂಥವರನ್ನು ನಿಸ್ತೇಜಗೊಳಿಸಿಬಿಡುವ, ನಿಶ್ಯಕ್ತರನ್ನಾಗಿ ಮಾಡುವ ಶಕ್ತಿ ಈ ರೋಗಕ್ಕೆ ಇದೆ. ಹಾಗಾಗಿ ಮಕ್ಕಳಿಗೆ ರೋಗ-ರುಜಿನಗಳ ಬಗೆಗೆ ಒಂದಿಷ್ಟಾದರೂ ತಿಳುವಳಿಕೆ ಮೂಡಿಸಬೇಕೆನ್ನುವ ಸದುದ್ದೇಶದಿಂದ ಕನ್ನಡ ಮಕ್ಕಳ ಕಾವ್ಯವು ಹೊಸ ಹೊಸ ಕಾಯಿಲೆಗಳ ಕುರಿತ ಅಭಿವ್ಯಕ್ತಿಯನ್ನು ಒಳಗೊಂಡಿದೆ. ಜೊತೆಗಿದು ಬದಲಾದ ಕನ್ನಡ ಮಕ್ಕಳ ಕಾವ್ಯದ ವಸ್ತುವಿನ ಆಯ್ಕೆಯನ್ನು ಸೂಚಿಸುತ್ತದೆ.

**ಬಂದ ಗುನ್ಯಾ ಬಂದ !**

ಬಂದ ಗುನ್ಯಾ ಬಂದ!
ಚಿಕುನ್ ಗುನ್ಯಾ ಬಂದ!!

ಊರುಕೇರಿ ಎಲ್ಲ
ಸೇರಿ ಬಿಟ್ಟನಲ್ಲ!!
ನೀರ ಕಂಡಲ್ಲಿ ಇಳದ!
ಕೊಳಚೆಯೊಳಗ ಬೆಳೆದ!!
ಬಂದ ಗುನ್ಯಾ ಬಂದ !
ಮೈಕೈ ನೋವು ತಂದ!!

ಅಲ್ಲಿ ಇಲ್ಲಿ ಮಿಂಚಿ!
ಕಂಡ ಕಂಡವರ್ಗಿ ಹಂಚಿ!!
ಊರಿಗೂರ ಉಣಿಸಿ
ಒಲ್ಲೆಂದ್ರು ತಿನಿಸಿ
ಗೋಳಕ್ಹಾಕಿ ನಕ್ಕ!
ಮುರ್ದ ಎಲ್ಲಾರ ಸೊಕ್ಕ!!
ಬಂದ ಗುನ್ಯಾ ಬಂದ!
ಚಿಕುನ್ ಗುನ್ಯಾ ಬಂದ!!

ಹೆಣ್ಣು-ಗಂಡು ಭೇದ
ಮಾಡಲಿಲ್ಲ ಶೋಧ
ಮಂತ್ರಿಗಿಂತ್ರಿ ಅನ್ನದೆ
ಜಾಲ ಬೀಸಿ ತನ್ನದೆ
ಹಾಸ್ಗಿ ಹಾಸಿ ಬಂಟ!
ಮುಂದಿನೂರ್ಗಿ ಹೊಂಟ!!
ಬಂದ ಗುನ್ಯಾಬಂದ!
ಜೀವಕಬ್ಯಾಸ್ರ ತಂದ!!

ಗುಡಸಲದಾಗ ಹೊಕ್ಕ!
ಅರಮನ್ಯಾಗ ನಕ್ಕ!!
ತನ್ನ ಆಟ ತೋರಿ
ಮುಂದ ಹೋದ ಜಾರಿ!
ಸಿಗಲಿಲ್ಲ ಡಾಕ್ಟ್ರ ಕೈಗೆ
ಗೋಳ ಹೇಳುದ್ಯಾರಿಗೆ!!
ಬಂದ ಗುನ್ಯಾ ಬಂದ!!
ಎಂಥಾ ಬ್ಯಾನಿ ತಂದ!!

ಯಾವ ನಾಡಿನಿಂದ
ನೆಲೆಸಿದಿಲ್ಲಿ ಬಂದ?
ನಾ ಅನ್ನೋರೆಲ್ಲ
ಸೋತ ಹೋದರಲ್ಲ!!
ನಾಡಿಗೆ ನಾಡ ಹೆದರಿ!
ನಿಂತ ಕೊಂಡಾರ ಬೆದರಿ!!
ಬಂದ ಗುನ್ಯಾ ಬಂದ!
ಹಸಿವು ನಿದ್ರೆ ಕೊಂದ!![೬]

ಹೀಗೆ ಕಾಲಕ್ಕೆ ತಕ್ಕಂತೆ ಹೊಸ ಹೊಸ ವಸ್ತುವಿಷಯಗಳನ್ನು ಸ್ವೀಕರಿಸಿ ತಾನೂ ಸದಾ 'ನವನವೀನ' ಎಂಬುದನ್ನು ಕನ್ನಡ ಮಕ್ಕಳ ಕಾವ್ಯ ಸಾಬೀತುಪಡಿಸಿದೆ.

### ೭.೪.೨. ಭಾಷೆಯ ಬಳಕೆಯಲ್ಲಾದ ಪಲ್ಲಟಗಳು

ಈ ಹಿಂದೆ ಕನ್ನಡ ಮಕ್ಕಳ ಕಾವ್ಯದ ಅಭಿವ್ಯಕ್ತಿ ಭಾಷಿಕವಾಗಿ ಬಹುತೇಕ ಕನ್ನಡಮಯವೇ ಆಗಿರುತ್ತಿತ್ತು. ಆದರೆ ಹೊಸ ತಲೆಮಾರಿನ ಹೊಸ ಅಭಿವ್ಯಕ್ತಿಯಲ್ಲಿ ಕನ್ನಡ ಮಕ್ಕಳ ಕಾವ್ಯದಲ್ಲಿ ಇಂಗ್ಲೀಷ್ ಪದಗಳ ಬಳಕೆಯನ್ನು ಯಥೇಚ್ಛವಾಗಿ ಕಾಣಬಹುದು.

**'ಬಾಂಬೆ' ಬೇ**

ಹೆಡ್ಲಿ ಹಾಕಿದನು ಮುಂಬೈ ದಾಳಿಗೆ ಸ್ಕೆಚ್ಚು
ಕಸಬ ಮತ್ತು ತಂಡ ಕೊಟ್ಟಿತು ಫೈನಲ್ ಟಚ್ಚು

ದಾಳಿಯಿಂದಾಗಿ ಆಯಿತು ಪ್ರಾಣಹಾನಿ
ಆಮೇಲೆ ಅದಾಯಿತು ದೊಡ್ಡ ಕಹಾನಿ

ಅಂದು ಆಯಿತು ರಕ್ತಪಾತ
ಕ್ರಮೇಣ ಏರಿಕೆಯಾಯಿತು ಮೃತರ ಅನುಪಾತ

ಕೊನೆಗೂ ಅಮೇರಿಕದವರು ಹಿಡಿದರು ಹೆಡ್ಲಿ
ಆಮೇಲೆ ಗೊತ್ತಾಯಿತು ಅವನು ತುಂಬಾ ಡೆಡ್ಲಿ

**ನೆರೆ ಬರೆ**

ಉತ್ತರ ಕರ್ನಾಟಕದಲ್ಲಾಯಿತು ಫ್ಲಡ್ಡು
ಕೊರತೆಯಾಯಿತು ಫುಡ್ಡು
ಹರಿದು ಬಂತು ನೆರವಿನ ದುಡ್ಡು
ಸಿಗುವುದೇ ಅವರಿಗೆ ಶೆಡ್ಡು

## ಆಂಧ್ರವಾಯಿತು ಛಿದ್ರ

ತೆಲಂಗಾಣಕ್ಕೋಸ್ಕರ ಮಾಡಿದರು ಉಪವಾಸ
ಆಮೇಲೆ ಅವರು ಅನುಭವಿಸಬೇಕಾಯಿತು ಸೆರೆವಾಸ
ಅವರಿಗಾಯಿತು ದೊಡ್ಡ ವನವಾಸ
ಆಮೇಲೆ ಆಗುವುದೇ ದೊಡ್ಡ ಇತಿಹಾಸ?[೮]

ಶರತ್ ಹಾಗೂ ಸುಮನ್‌ಕುಮಾರ ಎಂಬ ಶಿವಮೊಗ್ಗದ ಸಾಂದೀಪಿನಿ ಪ್ರೌಢಶಾಲೆಯ ವಿದ್ಯಾರ್ಥಿಗಳು ರಚಿಸಿದ ಈ ಮೂರು ಕವಿತೆಗಳಲ್ಲಿನ ಬಾಂಬು, ಸ್ಕೆಚ್ಚು, ಟಚ್ಚು, ಹೆಡ್ಲಿ, ಡೆಡ್ಲಿ, ಫ್ಲಡ್ಡು, ಫುಡ್ಡು, ಶೆಡ್ಡು, ಪದಗಳು ಕನ್ನಡ ಮಕ್ಕಳ ಕಾವ್ಯದ ಭಾಷಿಕ ಪಲ್ಲಟಗಳಿಗೆ ಸ್ಪಷ್ಟ ನಿದರ್ಶನದಂತಿವೆ. ಇದಕ್ಕೆ ಈ ಹೊತ್ತಿನ ಕಾನ್ವೆಂಟ್ ಸಂಸ್ಕೃತಿಯ ಆಂಗ್ಲ ಮಾಧ್ಯಮ ಶಾಲೆಗಳ ಇಂಗ್ಲೀಷ್ ವಿದ್ಯಾಭ್ಯಾಸದ ಶಿಕ್ಷಣ ಕ್ರಮವು ಈ ಬಗೆಯ ರಚನೆಯ ಹಿಂದೆ ಕೆಲಸ ಮಾಡಿರುವ ಸಾಧ್ಯತೆಗಳಿವೆ. ಮೂರೂರು ಚಂದ್ರ ಅವರ 'ಟಾಫಿ' ಕವಿತೆಯು ಇದೇ ಬಗೆಯದ್ದಾಗಿದೆ.

ಟಾಫಿ ಟಾಫಿ ಟಾಫಿ
ಟಾಫಿ ಸಿಕ್ಕಿತು ಟಾಫಿ
ಪೈನಪಲ್ ಟಾಫಿ ಆರೆಂಜ್ ಟಾಫಿ
ಚಾಕ್ಲೆಟ್ ಟಾಫಿ ಮ್ಯಾಂಗೋ ಟಾಫಿ
ಟಾಫಿ ಸಿಕ್ಕಿತು ಟಾಫಿ
ಟಾಫಿ ತಿಂದೆ ಮಜ ಸಿಕ್ಕಿತು
ಥ್ಯಾಂಕು ಅಪ್ಪ ಅಮ್ಮ ಥ್ಯಾಂಕು ಟಾಫಿ[೯]

ಇಲ್ಲಿ ಬರುವ ಟಾಫಿ, ಪೈನಪಲ್, ಆರೆಂಜ್, ಮ್ಯಾಂಗೊ, ಚಾಕ್ಲೆಟ್, ಥ್ಯಾಂಕು ಇವು ಸಹ ಮಕ್ಕಳ ಕಾವ್ಯದ ಭಾಷಿಕ ಬದಲಾವಣೆಗೆ ಸಾಕ್ಷಿಯಾಗಿವೆ. ಇಂಗ್ಲೀಷ್ ಪದಗಳು ಕವಿತೆಯಲ್ಲಿ ಸಂದರ್ಭನುಸಾರ ಬಂದರೂ ಸಹ ಒಂದು ಮಿತಿಯನ್ನು ಹಾಕಿಕೊಳ್ಳಬೇಕಾದ ಗುರುತರ ಜವಾಬ್ದಾರಿ ನಮ್ಮ ಮೇಲಿದೆ. ಅನ್ಯಭಾಷೆಗಳ ಮೇಲಿನ ವ್ಯಾಮೋಹ ಹೆಚ್ಚಾದರೆ ಅದು ಮಾತೃಭಾಷೆಯ ಅಸ್ತಿತ್ವದ ಮೇಲೆ ವ್ಯತಿರಿಕ್ತ ಪರಿಣಾಮ ಉಂಟು ಮಾಡಬಹುದಾದ ಸಾಧ್ಯತೆಗಳಿರುತ್ತವೆ ಎಂಬ ಎಚ್ಚರದಲ್ಲೇ ನಾವು ಕನ್ನಡ ಮಕ್ಕಳ ಕಾವ್ಯವನ್ನು ಕಟ್ಟಬೇಕಾಗಿದೆ.

**ಕೊನೆ ಟಿಪ್ಪಣಿಗಳು**

೧. ಮಕ್ಕಳ ಸಾಹಿತ್ಯ ಕವಿತೆಗಳು; ಸಂ: ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ, ಶಂ.ಗು. ಬಿರಾದಾರ, ಟಿ.ಎಸ್. ನಾಗರಾಜಶೆಟ್ಟಿ; ಪುಟ ೫೨.

೨. ಅದೇ; ಪುಟ ೬೯.

೩. ಅದೇ; ಪುಟ ೮೬.

೪. ಅದೇ; ಪುಟ ೧೮೦.

೫. ಮಕ್ಕಳ ಸಾಹಿತ್ಯ; ೨೦೦೪; ಸಂ: ಚಂದ್ರಕಾಂತ ಕರದಳ್ಳಿ; ಪುಟ ೫೪.

೬. ಅದೇ; ಪುಟ ೪೫.

೭. ನಂದನದಲಿ ಚಂದನ; ಪ.ಗು. ಸಿದ್ದಾಪುರ; ಪುಟ ೪೨.

೮. ವಿಜಯಕರ್ನಾಟಕ ದಿನಪತ್ರಿಕೆ; ದಿನಾಂಕ ೩೧.೦೧.೨೦೧೦.

೯. ನಲಿ-ಕಲಿ, ಲೇ: ಡಾ. ರಾಜೇಂದ್ರ ಎಸ್. ಗಡಾದ, ಪುಟ ೨೩.

•••

## ಅಧ್ಯಾಯ : ಎಂಟು

# ಸಮಾರೋಪ

**"ಕ**ನ್ನಡದಲ್ಲಿ ಮಕ್ಕಳ ಕಾವ್ಯ : ಪರಿಕಲ್ಪನೆ ಮತ್ತು ವಿಶ್ಲೇಷಣೆ" ಎಂಬ ಅಧ್ಯಯನವು ಒಟ್ಟು ಎಂಟು ಅಧ್ಯಾಯಗಳನ್ನು ಒಳಗೊಂಡಿದ್ದು ಒಟ್ಟು ಅಧ್ಯಯನವು ಕನ್ನಡ ಮಕ್ಕಳಕಾವ್ಯವನ್ನು ಅದರ ಹುಟ್ಟು, ಬೆಳವಣಿಗೆ ಸ್ವರೂಪದ ಅಂಶಗಳನ್ನು ಒಳಗೊಳ್ಳುವುದರ ಜೊತೆಯಲ್ಲಿಯೇ ಒಟ್ಟು ಅಧ್ಯಯನವನ್ನು ಒಂದು ತಾತ್ವಿಕ ಚಿಂತನೆಗಳ ನೆಲೆಗಟ್ಟಿನಲ್ಲಿಯೇ ನಿರ್ವಚಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ತಾತ್ವಿಕ ಚಿಂತನೆಗಳ ಅನಾವರಣಕ್ಕಾಗಿ ವ್ಯಕ್ತಿತ್ವ ವಿಕಸನದಂತಹ ಪರಿಕಲ್ಪನೆಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಇಲ್ಲಿರುವ ಅಧ್ಯಯನವು ಕನ್ನಡ ಮಕ್ಕಳಕಾವ್ಯದ ಸಮಗ್ರ ಅಧ್ಯಯನವೇನೂ ಆಗಿರುವುದಿಲ್ಲ. ಆದರೆ ಇದು ಪ್ರಸ್ತುತ ಅಧ್ಯಯನದ ಇತಿಮಿತಿಯಲ್ಲಿಯೇ ಕನ್ನಡ ಮಕ್ಕಳಕಾವ್ಯ ಪರಂಪರೆಯನ್ನು ಪಕ್ಷಿನೋಟದ ನೆಲೆಯಲ್ಲಿ ವಿವರಿಸುವ ಪ್ರಯತ್ನ ಮಾಡುತ್ತದೆ. ಕನ್ನಡ ಮಕ್ಕಳ ಕಾವ್ಯಕ್ಕಾಗಿ ದುಡಿದ ಕೆಲ ಕವಿಗಳ ಕಾವ್ಯಗಳನ್ನು ಪ್ರಾತಿನಿಧಿಕವಾಗಿಟ್ಟುಕೊಂಡು ಈ ಅಧ್ಯಯನವನ್ನು ಮಾಡಲಾಗಿದೆ. ಅವಿರತ ಸಂಪಾದನಾ ಕಾರ್ಯಕ್ಕಿಳಿದರೂ ಸಂಗ್ರಹಿಸಲಾರದಷ್ಟು ಉಳಿದ ಮೌಖಿಕ ಪರಂಪರೆಯ ಕೆಲ ಮಹತ್ವದ ಕನ್ನಡದ ಕಾವ್ಯಗಳನ್ನು ಇಲ್ಲಿ ಅಧ್ಯಯನಕ್ಕೆ ಪೂರಕವಾಗಿ ಬಳಸಿ ಕೊಳ್ಳಲಾಗಿದೆ.

ಮೌಖಿಕ ಪರಂಪರೆಯ ಕನ್ನಡ ಕಾವ್ಯಗಳನ್ನು ಸಾಂದರ್ಭಿಕವಾಗಿ ಬಳಸಿಕೊಂಡಿದ್ದರೂ ಲಿಖಿತ ಪರಂಪರೆಯ ಆಧುನಿಕ ಕನ್ನಡ ಮಕ್ಕಳ ಕಾವ್ಯದ ಮೇಲೆಯೇ ಹೆಚ್ಚು ಗಮನಹರಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಅಧ್ಯಯನದ ಇತಿಮಿತಿಗಳಿಂದ ಕೆಲ ಪ್ರಾತಿನಿಧಿಕ ಕವಿಗಳ ಕಾವ್ಯಗಳನ್ನು ಬಳಸಿಕೊಂಡಿದ್ದರೂ ಅದರಾಚೆಗೆ ಪೂರಕವಾಗಿ ಕನ್ನಡ ಮಕ್ಕಳ ಕಾವ್ಯಕ್ಕಾಗಿ ದುಡಿಯುತ್ತಿರುವ ಕವಿಗಳ ಕಾವ್ಯಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

ಆಧುನಿಕ ಕನ್ನಡ ಮಕ್ಕಳ ಕಾವ್ಯದ ಬಗೆಗಿರುವ ನಿರ್ಲಕ್ಷ ಧೋರಣೆಗಳ ಹಿಂದಿರುವ ಕಾರಣಗಳನ್ನು ಶೋಧಿಸುತ್ತಲೇ ಪ್ರೋತ್ಸಾಹದ ಅಗತ್ಯತೆಯನ್ನು ಇಲ್ಲಿ ಒತ್ತಿ ಹೇಳಲಾಗಿದೆ. ಒಟ್ಟು ಅಧ್ಯಯನದಿಂದ ತಿಳಿದುಬರುವುದೇನೆಂದರೆ ಮಕ್ಕಳ ಕಾವ್ಯ ಕೇವಲ ಮಕ್ಕಳ ಮನೋರಂಜನೆಯ ಮಾಧ್ಯಮವಲ್ಲ, ಅದರಾಚೆಗೆ ಅದು ಮಕ್ಕಳ ವ್ಯಕ್ತಿತ್ವ ವಿಕಸನದಂತಹ ನೈತಿಕ ಜವಾಬ್ದಾರಿಗಳನ್ನು

ಒಳಗೊಂಡಿದೆ ಎಂಬುದನ್ನು ಈ ಅಧ್ಯಯನ ಸಾರಿ ಹೇಳುತ್ತದೆ. ಮೌಖಿಕ ಪರಂಪರೆಯ ಕನ್ನಡ ಮಕ್ಕಳ ಕಾವ್ಯ ಭೂತಕ್ಕೆ ಹಿಡಿದ ಕನ್ನಡಿಯಾದರೆ, ಆಧುನಿಕ ಕನ್ನಡ ಮಕ್ಕಳ ಕಾವ್ಯ ಪರಂಪರೆ ವರ್ತಮಾನದ ಜೊತೆಗೆ ನಡೆಸಿದ ಸಾಮಾಜಿಕ ಅನುಸಂಧಾನದಂತೆಯೇ ತೋರುತ್ತದೆ. ಈ ಬಗೆಯ ಅಂಶಗಳಲ್ಲಿಯೇ ಮಕ್ಕಳ ಕಾವ್ಯದ ಮಹತ್ವವು ಅಡಗಿದೆ ಎಂಬ ಅಂಶವನ್ನು ಇದು ಸ್ಪಷ್ಟೀಕರಿಸುತ್ತದೆ. ಹೀಗೆ ತನ್ನ ಭಿನ್ನ ನೆಲೆಯ ಅಭಿವ್ಯಕ್ತಿ ಸಾಧ್ಯತೆಗಳಿಂದ ಭೂತವನ್ನು, ವರ್ತಮಾನವನ್ನು ಬೆಸೆಯುವ ಕನ್ನಡದ ಈ ಮಕ್ಕಳ ಕಾವ್ಯ ಪರಂಪರೆ ಸಾರ್ವಕಾಲಿಕ ಸತ್ಯದ ಅಭಿವ್ಯಕ್ತಿಯಂತೆಯು ತೋರುತ್ತದೆ ಎಂಬುದು ಈ ಮಕ್ಕಳ ಕಾವ್ಯದ ಅಧ್ಯಯನದ ಪ್ರಸ್ತುತತೆಯನ್ನು ಎತ್ತಿ ತೋರುತ್ತದೆ.

**• ಅಧ್ಯಯನದ ಫಲಿತಗಳು**

ಯಾವುದೇ ಅಧ್ಯಯನವು ತನ್ನ ವ್ಯಾಪ್ತಿ, ಉದ್ದೇಶಗಳಿಗೆ ಅನುಗುಣವಾಗಿ ಒಂದು ನಿರ್ದಿಷ್ಟ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಕೆಲ ಫಲಿತಗಳನ್ನು ಒಳಗೊಂಡಿದ್ದು, ಇದು ಒಟ್ಟು ಅಧ್ಯಯನದ ಮಹತ್ವವನ್ನು ತಿಳಿಸುವ ಸಂಶೋಧನೆಯ ಪ್ರಮುಖ ಘಟ್ಟವೂ ಹೌದು.

ಮಕ್ಕಳ ಕಾವ್ಯ ಎಂದರೆ ಸಾಮಾನ್ಯವಾಗಿ ಅದೊಂದು ಮಕ್ಕಳ ಮನೋರಂಜನೆಗೆಂದೇ ರಚಿತವಾದ ಸಾಹಿತ್ಯ ಎಂಬ ಸಂಕುಚಿತ ತಿಳುವಳಿಕೆ ಚಾಲ್ತಿಯಲ್ಲಿದ್ದುದೇ ಹೆಚ್ಚು. ಆದರೆ ಅದರಾಚೆಗೆ ಮಕ್ಕಳ ಕಾವ್ಯವು ಮಕ್ಕಳ ವ್ಯಕ್ತಿತ್ವ ವಿಕಸನದ ಕ್ರಿಯೆಯಲ್ಲಿ ಅತ್ಯಂತ ಪ್ರಮುಖ ಪಾತ್ರವಹಿಸುತ್ತದೆಂಬುದು ಈ ಅಧ್ಯಯನದಿಂದ ಕಂಡುಕೊಂಡ ಫಲಿತವಾಗಿದೆ.

ಮಕ್ಕಳ ಕಾವ್ಯ ಮಕ್ಕಳಿಗಾಗಿ ರಚಿಸಿರುವುದರಿಂದ ಹಿರಿಯರು ಓದುವ ಅಗತ್ಯವೇನಿಲ್ಲ ಎಂಬ ಧೋರಣೆಯುಳ್ಳವರಿಗೆ ಮಕ್ಕಳ ಕಾವ್ಯದಿಂದ ಹಿರಿಯರು ಸಹ ತಿಳಿದುಕೊಳ್ಳಬಹುದಾದ ಸಂಗತಿಗಳು ಸಾಕಷ್ಟಿವೆ ಎಂಬ ಅಂಶವನ್ನು ಪ್ರಸ್ತುತ ಮಹಾಪ್ರಬಂಧವು ಸಾಬೀತುಪಡಿಸುತ್ತದೆ. ಅದರಲ್ಲೂ ವಿಶೇಷವಾಗಿ ಮೌಖಿಕ ಕನ್ನಡ ಮಕ್ಕಳ ಕಾವ್ಯವು ಇತಿಹಾಸದ ರಾಯಭಾರಿಯಂತೆಯೂ ಕೆಲಸ ಮಾಡಿರುವುದನ್ನು ಈ ಅಧ್ಯಯನದ ಹಿನ್ನೆಲೆಯಲ್ಲಿ ಗುರುತಿಸಬಹುದು. ಈ ಹಿನ್ನೆಲೆಯಲ್ಲಿ ಕನ್ನಡ ಮಕ್ಕಳ ಕಾವ್ಯಕ್ಕೆ ಇರುವ ಬಹುಮುಖಿ ಸಾಧ್ಯತೆಗಳೇನು? ಎಂಬ ಪ್ರಶ್ನೆಗೆ ಉತ್ತರವಾಗಿ ಸಹ ಈ ಪ್ರಬಂಧ ನಿಲ್ಲುತ್ತದೆ.

ಮಕ್ಕಳ ಕಾವ್ಯಕ್ಷೇತ್ರಕ್ಕೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿರುವ ಸ್ಥಾನಮಾನಗಳೇನು ಎಂಬ ಪ್ರಶ್ನೆಯನ್ನು ಹಾಕಿಕೊಳ್ಳುವುದರ ಜೊತೆಯಲ್ಲಿಯೇ ಅದಕ್ಕೊಂದು ನೆಲೆ ಬೆಲೆಯನ್ನು ಕಂಡುಕೊಳ್ಳುವ ಹಿನ್ನೆಲೆಯಲ್ಲಿ ಪ್ರತ್ಯೇಕ ಸಾಹಿತ್ಯ ಚರಿತ್ರೆಯ ಅಗತ್ಯತೆಯ ಫಲಿತವನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಈಗಾಗಲೇ ಮಕ್ಕಳ ಸಾಹಿತ್ಯದ ಭಾಗವೇ ಆದ ಮಕ್ಕಳ ಕಾವ್ಯವು ಒಂದು ನಿರ್ಲಕ್ಷಿತ ಕ್ಷೇತ್ರವಾಗಿದ್ದು, ಇದರ ಕುರಿತು ನಾನು ಗಮನಿಸಿದಂತೆ ಬೆರಳಣಿಕೆಯಷ್ಟು ಅಧ್ಯಯನಗಳು

ಮಾತ್ರ ನಡೆದಿದ್ದು, ಅವುಗಳಾಚೆಗೆ ಈ ಅಧ್ಯಯನದಲ್ಲಿ ಹಲವು ಪರಿಕಲ್ಪನೆಗಳ ಮೂಲಕ ಅಧ್ಯಯನದ ಮಿತಿಯಲ್ಲಿಯೇ ಕನ್ನಡ ಮಕ್ಕಳ ಕಾವ್ಯಕ್ಷೇತ್ರಕ್ಕೆ ನ್ಯಾಯ ಒದಗಿಸುವ ಪ್ರಾಮಾಣಿಕ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

- **ಅಧ್ಯಯನದ ಸಾಧ್ಯತೆಗಳು**

ಕನ್ನಡ ಮಕ್ಕಳ ಕಾವ್ಯ ಮೌಖಿಕ ಪರಂಪರೆಯ ಹರವು ತುಂಬಾ ವಿಸ್ತಾರವಾದುದು. ಪ್ರಸ್ತುತ ಈ ಅಧ್ಯಯನದಲ್ಲಿ ಸಂದರ್ಭನುಸಾರ ಮೌಖಿಕ ಪರಂಪರೆಯ ಉಲ್ಲೇಖ ಹಾಗೂ ವಿಶ್ಲೇಷಣೆ ಆಗಿದ್ದರೂ ಸಹ ಪ್ರತ್ಯೇಕವಾಗಿ ಮೌಖಿಕ ಪರಂಪರೆಯ ಕನ್ನಡ ಮಕ್ಕಳ ಕಾವ್ಯದ ಕುರಿತು ಅಧ್ಯಯನ ಮಾಡಬೇಕಾದ ತುರ್ತು ಹಾಗೂ ಸಾಧ್ಯತೆಯು ಇದೆ.

ಪ್ರಸ್ತುತ ಅಧ್ಯಯನವು ಮಕ್ಕಳ ಸಾಹಿತ್ಯ ಕ್ಷೇತ್ರದ ಒಂದು ಭಾಗವಾಗಿರುವ ಮಕ್ಕಳ ಕಾವ್ಯ ಪ್ರಕಾರವನ್ನಷ್ಟೇ ಅಧ್ಯಯನಕ್ಕೆ ಒಳಗು ಮಾಡಿದ್ದು, ಇದರಾಚೆಗೆ ಮಕ್ಕಳ ಸಾಹಿತ್ಯ ಕ್ಷೇತ್ರದ ಇನ್ನುಳಿದ ಪ್ರಕಾರಗಳಾದ ಮಕ್ಕಳ ಕಥೆಗಳ ಕುರಿತು, ಮಕ್ಕಳ ಕಾದಂಬರಿಗಳ ಕುರಿತು, ಮಕ್ಕಳ ನಾಟಕಗಳ ಕುರಿತು ಹೆಚ್ಚು ಅಧ್ಯಯನಗಳು ಆಗಬೇಕಿರುವ ಸಾಧ್ಯತೆಯನ್ನು ಇಲ್ಲಿ ಕಂಡುಕೊಳ್ಳಲಾಗಿದೆ. ಮಕ್ಕಳ ಕಾವ್ಯದ ಭಾಷೆಯು ಆಸಕ್ತಿದಾಯಕವಾದದ್ದೇ. ಹಾಗಾಗಿ ಮಕ್ಕಳ ಕಾವ್ಯವನ್ನು ಭಾಷಿಕ ಹಿನ್ನೆಲೆಯಲ್ಲಿಯೂ ಒಂದು ಪ್ರತ್ಯೇಕ ಅಧ್ಯಯನ ಮಾಡುವ ಸಾಧ್ಯತೆಗಳಿವೆ ಎಂಬುದನ್ನು ಇಲ್ಲಿ ಮನಗಾಣಬಹುದು.

ಭಾರತದ ಬೇರೆ ಬೇರೆ ರಾಜ್ಯಗಳ, ಬೇರೆ ಭಾಷೆಗಳ ಜೊತೆಗೆ ಕನ್ನಡದ ಮಕ್ಕಳ ಸಾಹಿತ್ಯವನ್ನು ತೌಲನಿಕವಾಗಿ ನೋಡುವ ಅಧ್ಯಯನವೊಂದರ ಸಾಧ್ಯತೆ ಇರುವುದನ್ನು ಗಮನಿಸ ಬಹುದು.

•••

# ಅನುಬಂಧ

**೧. ಪ್ರಾಥಮಿಕ ಆಕರಗಳು**

೧. ಅಂಗಡಿ ಎ.ಪಿ.; ೨೦೦೯; **ಮಗ್ಗಿ ಮಾಮನ ಹಾಡುಗಳು**; ಅರಳು ಪ್ರಕಾಶನ; ನಂದಿನಗರ; ಕೊಪ್ಪಳ.

೨. ಅಕ್ಬರ್ ಸಿ. ಕಾಲಿಮಿರ್ಚಿ; ೨೦೧೩; **ರೈಲುಗಾಡಿ**; ಕನ್ನಡ ಮೈತ್ರಿ ಪ್ರಕಾಶನ; ಭಾಗ್ಯನಗರ; ಕೊಪ್ಪಳ.

೩. ಅಕ್ಬರ್ ಸಿ. ಕಾಲಿಮಿರ್ಚಿ(ಸಂ); ೨೦೧೨; **ಬಾಪು ಪಾಪು**; ಕನ್ನಡ ಮೈತ್ರಿ ಪ್ರಕಾಶನ; ಭಾಗ್ಯನಗರ; ಕೊಪ್ಪಳ.

೪. ಅನನ್ಯ ಬಳಂತಿಮೊಗರು; ೨೦೧೧; **ಹಾಡುಹಕ್ಕಿ**; ದಕ್ಷಿಣ ಕನ್ನಡ ಜಿಲ್ಲಾ ಮಕ್ಕಳ ಸಾಹಿತ್ಯ ಸಂಗಮ(ರಿ); ಬಂಟ್ವಾಳ ಘಟಕ; ವಿಟ್ಲ.

೫. ಅಶ್ವಿತಾ ಎಸ್.; ೨೦೧೧; **ಬಣ್ಣದ ಚಿಟ್ಟೆ**; ದಕ್ಷಿಣ ಕನ್ನಡ ಜಿಲ್ಲಾ ಮಕ್ಕಳ ಸಾಹಿತ್ಯ ಸಂಗಮ(ರಿ); ಬಂಟ್ವಾಳ ಘಟಕ; ವಿಟ್ಲ.

೬. ಆನಂದ ಪಾಟೀಲ(ಸಂ); ೨೦೦೬; **ಮಕ್ಕಳ ಸಾಹಿತ್ಯ-೨೦೦೬**; ಕರ್ನಾಟಕ ಸಾಹಿತ್ಯ ಅಕಾಡೆಮಿ; ಬೆಂಗಳೂರು.

೭. ಈಶ್ವರ ಕಮ್ಮಾರ; ೨೦೦೪; **ಕೊಟ್ಟಿಗೆಯೊಳಗಿನ ಕೋಣಪ್ಪ**; ನಂದೀಶ್ವರ ಪ್ರಕಾಶನ; ಧಾರವಾಡ.

೮. ಈಶ್ವರಚಂದ್ರ ಚಿಂತಾಮಣಿ(ಸಂ); ೧೯೯೯; **ಮಕ್ಕಳ ಸಾಹಿತ್ಯ-೧೯೯೪**; ಕರ್ನಾಟಕ ಸಾಹಿತ್ಯ ಅಕಾಡೆಮಿ; ಬೆಂಗಳೂರು.

೯. ಕಂಚ್ಯಾಣಿ ಶರಣಪ್ಪ; ೧೯೯೪; **ಆಯ್ದ ನೂರೊಂದು ಕವಿತೆಗಳು**; ಗ್ರಾಮೀಣ ಪ್ರತಿಭಾ ಪ್ರಕಾಶನ; ವಿಜಾಪುರ.

೧೦. ಕವಿತಾ ಕೃಷ್ಣ; ೧೯೯೫; **ಕನ್ನಡ ಶಿಶುಗೀತೆ**; ಚೇತನ ಬುಕ್‌ಹೌಸ್; ಮೈಸೂರು.

೧೧. ಕಯ್ಯಾರ ಕಿಞ್ಞಣ್ಣ ರೈ; ೧೯೯೨; **ಮಕ್ಕಳ ಪದ್ಯಮಂಜರಿ**; ಕವಿತಾ ಕುಟೀರ; ಪೆರಡಾಲ.

೧೨. ಕಾವ್ಯಾನಂದ; ೧೯೬೪; **ತುಪ್ಪಾ ರೊಟ್ಟಿ ಗೇ ಗೇ ಗೇ**; ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ; ಬೆಂಗಳೂರು.

೧೩. ಗುರುರಾಜ ಬೆಣಕಲ್(ಸಂ); ೧೯೯೯; **ಮಕ್ಕಳ ಸಾಹಿತ್ಯ-೧೯೯೨**; ಕರ್ನಾಟಕ ಸಾಹಿತ್ಯ ಅಕಾಡೆಮಿ; ಬೆಂಗಳೂರು.

೧೪. ಗುರುರಾಜ ಬೆಣಕಲ್; ೧೯೯೯; **ಬಾಲ ಸುರಭಿ**; ಸಿಸು ಸಂಪದ; ಹುಬ್ಬಳ್ಳಿ.

೧೫. ಗುರುಪಾದಸ್ವಾಮಿ ಹಿರೇಮಠ; ೧೯೮೯; **ಹಾಲಿನ ಗಿಂಡಿ**; ಭಾರತೀ ಸಾಹಿತ್ಯ ಭಂಡಾರ; ವಿಜಾಪುರ.

೧೬. ಚಂದ್ರಕಾಂತ ಕರದಳ್ಳಿ(ಸಂ); ೨೦೦೬; **ಮಕ್ಕಳ ಸಾಹಿತ್ಯ-೨೦೦೪**; ಕರ್ನಾಟಕ ಸಾಹಿತ್ಯ ಅಕಾಡೆಮಿ; ಬೆಂಗಳೂರು.

೧೭. ಚಂದ್ರಕಲಾ ಬಿದರಿ(ಡಾ) (ಸಂ); ೨೦೧೩; **ಮಕ್ಕಳ ಸಾಹಿತ್ಯ-೨೦೦೯**; ಕರ್ನಾಟಕ ಸಾಹಿತ್ಯ ಅಕಾಡೆಮಿ; ಬೆಂಗಳೂರು.

೧೮. ಚೈತ್ರಶ್ರೀ ಡಿ.; ೨೦೧೧; **ಚೈತ್ರದ ಚಿಲಿಪಿಲಿ**; ದಕ್ಷಿಣ ಕನ್ನಡ ಜಿಲ್ಲಾ ಮಕ್ಕಳ ಸಾಹಿತ್ಯ ಸಂಗಮ(ರಿ); ಬಂಟ್ವಾಳ ಘಟಕ; ವಿಟ್ಲ.

೧೯. ಜಂಬುನಾಥ ಕಂಚ್ಯಾಣಿ; ೧೯೯೪; **ನಂದನವನ**; ವಿಜಾಪುರ ಜಿಲ್ಲಾ ಮಕ್ಕಳ ಸಾಹಿತ್ಯ ಸಂಗಮ; ವಿಜಾಪುರ.

೨೦. ಜಯವಂತ ಕಾಡದೇವರ; ೨೦೦೯; **ಮರಗಳ ಮನವಿ**; ಮಕ್ಕಳ ಸಂಗಮ ಪ್ರಕಾಶನ; ಬನಹಟ್ಟಿ; ಬಾಗಲಕೋಟೆ.

೨೧. ದಾಸೇಗೌಡ ಜಿ.ವಿ.; ೨೦೦೬; **ಕರ್ನಾಟಕ ಶಿಶುಪ್ರಾಸಗಳು**; ಚೇತನ ಬುಕ್‌ಹೌಸ್; ಮೈಸೂರು.

೨೨. ದಿನಕರ ದೇಸಾಯಿ; ೧೯೮೦; **ಮಕ್ಕಳ ಪದ್ಯ**; ಸಮಾಜ ಪುಸ್ತಕಾಲಯ; ಧಾರವಾಡ.

೨೩. ನಾಗರಾಜಶೆಟ್ಟಿ ಟಿ.ಎಸ್.; **ಚಂದ್ರಶಾಲೆ**; ನಿರ್ಮಲ ಪ್ರಕಾಶನ; ತಿಪಟೂರು.

೨೪. ನಾರಾಯಣ ಭಟ್ ಪಿ. ಡಾ.; ೨೦೦೯; **ಚಿಲಿಪಿಲಿ ಗುಟ್ಟುವ ಚಿಣ್ಣರಿಗೆ...**; ಎಸ್.ಪಿ. ಪ್ರಕಾಶನ; ಶಿವಮೊಗ್ಗ.

೨೫. ನೇಸರಗಿ ಬಿ.ವೀ.; ೨೦೦೦; **ಮಕರಂದ**; ಬಸವ ಪ್ರಕಾಶನ; ತುರಮುರಿ.

೨೬. ನೇಸರಗಿ ಬಿ.ವೀ.; ೨೦೦೧; **ಬಣ್ಣದ ಕಾರಂಜಿ**; ಬಸವ ಪ್ರಕಾಶನ; ತುರಮರಿ.

೨೭. ಪಳಕಳ ಸೀತಾರಾಮಭಟ್ಟ (ಸಂ); ೧೯೯೮; **ಮಕ್ಕಳ ಸಾಹಿತ್ಯ - ೧೯೯೭**; ಕರ್ನಾಟಕ ಸಾಹಿತ್ಯ ಅಕಾಡೆಮಿ; ಬೆಂಗಳೂರು.

೨೮. ಪಾಟೀಲ ಪಾ.ಭೀ.; ೧೯೭೯; **ಹಾದಿಯ ಹೂವು**; ಭಾರತೀ ಸಾಹಿತ್ಯ ಭಂಡಾರ; ವಿಜಾಪುರ.

೨೯. ಪಾಟೀಲ ಪಾ.ಭಿ.; ೨೦೦೦; **ಚಿಗರೆಯ ಮರಿ**; ಭಾರತೀ ಸಾಹಿತ್ಯ ಭಂಡಾರ; ವಿಜಾಪುರ.

೩೦. ಪಾಟೀಲ ಪಾ.ಭೀ.; ೧೯೭೪; **ಮುದ್ದುಮರಿ**; ಭಾರತೀ ಸಾಹಿತ್ಯ ಭಂಡಾರ; ವಿಜಾಪುರ.

೩೧. ಪುಣ್ಯದೇಲಂತಮಜಲು; ೨೦೧೧; **ಅರಳಿದ ತಾವರೆ**; ದಕ್ಷಿಣ ಕನ್ನಡ ಜಿಲ್ಲಾ ಮಕ್ಕಳ ಸಾಹಿತ್ಯ ಸಂಗಮ(ರಿ); ಬಂಟ್ವಾಳ ಘಟಕ; ವಿಟ್ಲ.

೩೨. ಭಾನುಮತಿ ವೈ.ಸಿ.(ಡಾ) (ಸಂ); ೨೦೦೯; **ಮಕ್ಕಳ ಹಾಡುಗಳು**; ಕನ್ನಡ ಮತ್ತು ಸಂಸ್ಕೃತಿ ಇಲಾಖೆ; ಬೆಂಗಳೂರು.

೩೩. ಬಿರಾದಾರ ಶಂ.ಗು.; ೧೯೭೭; **ನನ್ನ ಹಾಡು**; ಭಾರತೀ ಸಾಹಿತ್ಯ ಭಂಡಾರ; ವಿಜಾಪುರ.

೩೪. ಮಧುರಕಾನನ ಗೋಪಾಲಕೃಷ್ಣ ಭಟ್ಟ; ೨೦೦೭; **ಮೋಡದ ಹಾಡು**; ಮಧುರ ಧ್ವನಿ ಪ್ರಕಾಶನ; ಬೇಳ; ಕಾಸರಗೋಡು.

೩೫. ಮಧುರಕಾನನ ಗೋಪಾಲಕೃಷ್ಣ ಭಟ್ಟ; ೨೦೦೩; **ಚಿಟ್ಟೆಯ ಹಾಡು**; ಮಧುರ ಧ್ವನಿ ಪ್ರಕಾಶನ; ಬೇಳ; ಕಾಸರಗೋಡು.

೩೬. ಮಧುರಕಾನನ ಗೋಪಾಲಕೃಷ್ಣ ಭಟ್ಟ; ೨೦೦೯; **ಚುಟುಕು ಮಿಟುಕು ಮತ್ತು ನಾಲ್ಕು ಮಿನಿ ಕಥೆಗಳು**; ಮಧುರ ಧ್ವನಿ ಪ್ರಕಾಶನ; ಬೇಳ; ಕಾಸರಗೋಡು.

೩೭. ಮಧುರಕಾನನ ಗೋಪಾಲಕೃಷ್ಣ ಭಟ್ಟ ವಿದ್ವಾನ್; ೨೦೧೨; **ಮಕ್ಕಳ ರಾಮಾಯಣ**; ರಂಗಕಹಳೆ ಪ್ರಕಾಶನ; ಬೆಂಗಳೂರು.

೩೮. ಮಹಮದ್ ಬೊಳುವಾರು ಕುಂಞ್(ಸಂ); ೧೯೯೧; **ತಟ್ಟು ಚಪ್ಪಾಳೆ ಪುಟ್ಟ ಮಗು**; ದಿವ್ಯ ಪ್ರಕಾಶನ; ಬೆಂಗಳೂರು.

೩೯. ಮುಳಿಯ 'ಎಳೆಯರ ಗೆಳೆಯ'(ಸಂ); ೨೦೧೨; **ಬಣ್ಣದ ಬಣ್ಣದ ಹೂವುಗಳು**; ಉದಯ ಪ್ರಕಾಶನ; ಮಂಗಳೂರು.

೪೦. ಯಲ್ಲರಡ್ಡಿ; ೧೯೮೪; **ಬಟ್ಟಲ ತುಂಬ ಬಾರಿಕಾಯಿ**; ಪ್ರಾಥಮಿಕ ವಿಸ್ತರಣ ಸೇವಾ ಕೇಂದ್ರ; ಉಪಾಧ್ಯಾಯರ ಸರಕಾರಿ ತರಬೇತಿ ವಿದ್ಯಾಲಯ; ಧಾರವಾಡ - ೮.

೪೧. ರಾಜಶೇಖರ ಕುಕ್ಕುಂದಾ; ೨೦೧೧; **ಚೆಲುವ ಚಂದಿರ**; ಸಾಗರ ಪ್ರಕಾಶನ; ಗುಲಬರ್ಗಾ.

೪೨. ರಾಜರತ್ನಂ ಜಿ.ಪಿ.; ೧೯೯೭; **ಕಂದನ ಕಾವ್ಯಮಾಲೆ**; ಶಾಕ್ಯ ಸಾಹಿತ್ಯ ಮಂಟಪ; ಬೆಂಗಳೂರು.

೪೩. ರಾಜೇಂದ್ರ ಎಸ್. ಗಡಾದ ಡಾ.; ೨೦೧೧; **ನಲಿ - ಕಲಿ**; ಸಂಗಮ ಪ್ರಕಾಶನ; ಗದಗ.

೪೪. ರಾಜೇಂದ್ರ ಎಸ್. ಗಡಾದ; ೨೦೦೧; **ಮಕ್ಕಳ ಸಾಹಿತ್ಯ-೨೦೦೦**; ಕರ್ನಾಟಕ ಸಾಹಿತ್ಯ ಅಕಾಡೆಮಿ; ಬೆಂಗಳೂರು.

೪೫. ರಾಮೇಶ್ವರ ಎ.ಕೆ.; **ವಸಂತ ಬಂದ**; ಭಾರತೀ ಸಾಹಿತ್ಯ ಭಂಡಾರ; ವಿಜಾಪುರ.

೪೬. ಲಿಂಗಾರೆಡ್ಡಿ ಶೇರಿ; ೨೦೦೦; **ಪುಟ್ಟ-ಪುಟ್ಟಿ**; ಶ್ರೀ ಸಸಾ ಪ್ರಕಾಶನ; ಜಾಕನಹಳ್ಳಿ; ಕಲಬುರ್ಗಿ.

೪೭. ಲಕ್ಷ್ಮೀನಾರಾಯಭಟ್ಟ; ೧೯೯೯; **ಸತ್ಯವೇ ನಮ್ಮ ತಾಯಿ ತಂದೆ**; ಮುರಳಿ ಪ್ರಕಾಶನ; ಬೆಂಗಳೂರು.

೪೮. ಲಕ್ಷ್ಮೀನಾರಾಯಣ ಭಟ್ಟ ಮತ್ತು ಇತರರು(ಸಂ); ೧೯೯೬; **ಮಕ್ಕಳ ಸಾಹಿತ್ಯ ಕವಿತೆಗಳು**; ಕರ್ನಾಟಕ ಸಾಹಿತ್ಯ ಅಕಾಡೆಮಿ; ಬೆಂಗಳೂರು.

೪೯. ವೆಂಕಟೇಶಮೂರ್ತಿ ಎಚ್.ಎಸ್.; ೨೦೧೩; **ಎಚ್ಚೆಸ್ವಿ ಸಮಗ್ರ ಮಕ್ಕಳ ಸಾಹಿತ್ಯ**; ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ; ಮೈಸೂರು.

೫೦. ವಿದ್ಯಾಸಾಗರ ಕುಕ್ಕುಂದಾ; ೨೦೧೧; **ನನ್ನ ಕನಸು**; ಸಾಗರ ಪ್ರಕಾಶನ; ಗುಲಬರ್ಗಾ.

೫೧. ಶಾನುಭೋಗ ಆರ್.ಕೆ.(ಸಂ); ೨೦೦೨; **ಮಕ್ಕಳ ಸಾಹಿತ್ಯ-೨೦೦೧**; ಕರ್ನಾಟಕ ಸಾಹಿತ್ಯ ಅಕಾಡೆಮಿ; ಬೆಂಗಳೂರು.

೫೨. ಶೇಷಗಿರಿರಾವ್ ಎಲ್.ಎಸ್. ಪ್ರೊ.; ೧೯೯೦; **ಭಾರತೀಯ ಸಾಹಿತ್ಯ ಸಮೀಕ್ಷೆ (ಸಂಪುಟ-೨)**; ಕರ್ನಾಟಕ ಸಾಹಿತ್ಯ ಅಕಾಡೆಮಿ; ಬೆಂಗಳೂರು.

೫೩. ಸಂಗಮೇಶ ಬಾಗಲಕೋಟ; **ಪತಂಗ**; ಪ್ರಶಾಂತ ಪ್ರಕಾಶನ; ರೋಣಿಹಾಳ; ವಿಜಾಪುರ.

೫೪. ಸಹನ ಡಿ.; ೨೦೧೧; **ಗಾಳಿಪಟ**; ದಕ್ಷಿಣ ಕನ್ನಡ ಜಿಲ್ಲಾ ಮಕ್ಕಳ ಸಾಹಿತ್ಯ ಸಂಗಮ(ರಿ); ಬಂಟ್ವಾಳ ಘಟಕ; ವಿಟ್ಲ.

೫೫. ಸಿದ್ಧಲಿಂಗಪ್ಪ ಜೀನಹಳ್ಳಿ; ೨೦೦೮; **ಹಾಡು ನನ್ನ ಹಾಡು**; ಪ್ರೇಮ ಪ್ರಕಾಶನ; ಜೀನಹಳ್ಳಿ; ದಾವಣಗೆರೆ ಜಿಲ್ಲೆ

೫೬. ಸಿದ್ಧಾಪುರ ಪ.ಗು.; ೨೦೧೦; **ನಂದನದಲಿ ಚಂದನ**; ಮಲ್ಲಿಕಾರ್ಜುನ ಪ್ರಕಾಶನ; ಮುಳವಾಡ; ವಿಜಾಪುರ.

೫೭. ಸಿದ್ಧಯ್ಯ ಪುರಾಣಿಕ; ೧೯೯೧; **ಭಾರತವೆಲ್ಲಕ್ಕೆ ಬಾವುಟವೊಂದೇ**; ಶ್ರೀಗಿರಿ ಪ್ರಕಾಶನ; ಬೆಂಗಳೂರು.

೫೮. ಸಿಸು ಸಂಗಮೇಶ; ೧೯೯೮; **ನನ್ನ ಕವಿತಾ ಪುಸ್ತಕ**; ಭಾರತೀ ಸಾಹಿತ್ಯ ಭಂಡಾರ; ವಿಜಾಪುರ.

೫೯. ಸಿಸು ಸಂಗಮೇಶ; ೧೯೯೯; **ನಾವು ನಾಳೆಯ ರವಿಗಳು**; ಭಾರತೀ ಸಾಹಿತ್ಯ ಭಂಡಾರ; ವಿಜಾಪುರ.

೬೦. ಸಿಸು ಸಂಗಮೇಶ; ೧೯೯೭; **ಕಾಡಿನ ಕಲಿಗಳು**; ಭಾರತೀ ಸಾಹಿತ್ಯ ಭಂಡಾರ; ವಿಜಾಪುರ.

೬೧. ಸಿಸು ಸಂಗಮೇಶ; ೧೯೯೩; **ಚುಟುಕು - ಗುಟುಕು**; ಭಾರತೀ ಸಾಹಿತ್ಯ ಭಂಡಾರ; ವಿಜಾಪುರ.

೬೨. ಸಿಸು ಸಂಗಮೇಶ; ೧೯೯೭; **ಸೂರ್ಯ ಚಂದ್ರರ ನಡುವೆ**; ಭಾರತೀ ಸಾಹಿತ್ಯ ಭಂಡಾರ; ವಿಜಾಪುರ.

೬೩. ಸಿಸು ಸಂಗಮೇಶ; ೧೯೯೬; **ಸವಿಸಾಹಿತ್ಯ**; ಭಾರತೀ ಸಾಹಿತ್ಯ ಭಂಡಾರ; ವಿಜಾಪುರ.

೬೪. ಸಿಸು ಸಂಗಮೇಶ; ೧೯೯೮; **ನನ್ನ ಕವಿತಾ ಪುಸ್ತಕ**; ಭಾರತೀ ಸಾಹಿತ್ಯ ಭಂಡಾರ; ವಿಜಾಪುರ.

೬೫. ಸಿಸು ಸಂಗಮೇಶ; ೨೦೦೦; **ಗಾಳಿ ಹೋಯ್ತು, ನೀರು ಬಂತು**; ಭಾರತೀ ಸಾಹಿತ್ಯ ಭಂಡಾರ; ವಿಜಾಪುರ.

೬೬. ಸಿಸು ಸಂಗಮೇಶ; ೧೯೯೮; **ಅಂಗಿಯಲ್ಲಿ ತಂಗಿ**; ಭಾರತೀ ಸಾಹಿತ್ಯ ಭಂಡಾರ; ವಿಜಾಪುರ.

೬೭. ಸಿಸು ಸಂಗಮೇಶ; ೧೯೯೭; **ಚಕ್ಕಾ - ಚೌಕಳಿ**; ಭಾರತೀ ಸಾಹಿತ್ಯ ಭಂಡಾರ; ವಿಜಾಪುರ.

೬೮. ಸೀತಾರಾಮಯ್ಯ ಎಂ.ವಿ.(ಸಂ); ೧೯೮೩; **ಸಂಕೀರ್ಣ ಮಕ್ಕಳ ಸಾಹಿತ್ಯ**; ಕನ್ನಡ ಮತ್ತು ಸಂಸ್ಕೃತಿ ಇಲಾಖೆ; ಬೆಂಗಳೂರು.

೬೯. ಸೀತಾರಾಮಭಟ್ಟ ಪ.; ೧೯೯೦; **ಚಿಣ್ಣನ ಚೀಲ**; ಭಾರತೀ ಸಾಹಿತ್ಯ ಭಂಡಾರ; ವಿಜಾಪುರ.

೭೦. ಹನುಮಕ್ಕ .ರಾ. ಕಂಬಳಿ; ೨೦೧೧; **ಶಿಶುಪ್ರಾಸಗಳು ಮತ್ತು ಶಿಶುಗೀತೆಗಳು**; ಡಾ. ಜ.ಚ.ನಿ.; ಬುಕ್ ಬ್ಯಾಂಕ್; ಮುಳಸಾವಳಗಿ; ಬಿಜಾಪುರ

**೨. ಆನುಷಂಗಿಕ ಆಕರಗಳು**

೧. ಆನಂದ ಪಾಟೀಲ ಡಾ.; ೨೦೧೦; **ಕನ್ನಡ ಮಕ್ಕಳ ಸಾಹಿತ್ಯದಲ್ಲಿ ಇತ್ತೀಚಿನ ಒಲವುಗಳು**; ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ; ಹಂಪಿ.

೨. ಆನಂದ ಪಾಟೀಲ ವಿ.; ೨೦೧೦; **ಅಲರು**; ಅಭಿನವ ಪ್ರಕಾಶನ; ಬೆಂಗಳೂರು.

೩. ಆನಂದ ಪಾಟೀಲ ವಿ.(ಸಂ); ೨೦೦೧; **ಮಕ್ಕಳ ಸಾಹಿತ್ಯ ಶತಮಾನ**; ಅಭಿನವ ಪ್ರಕಾಶನ; ಬೆಂಗಳೂರು.

೪. ಕರೀಗೌಡ ಬೀಚನಹಳ್ಳಿ ಪ್ರೊ.; ೨೦೦೭; **ಸುವರ್ಣ ಕರ್ನಾಟಕ; ಸಾಹಿತ್ಯ ಸಂಸ್ಕೃತಿ ಪಥ, ಸಂಪುಟ-೨**; ಕರ್ನಾಟಕ ಗ್ಯಾಸೆಟಿಯರ್ ಇಲಾಖೆ; ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ; ಹಂಪಿ

೫. ಗವಿಸಿದ್ಧಪ್ಪ ಎಚ್.ಪಾಟೀಲ; ೨೦೦೨; **ಕಲ್ಯಾಣ ಕರ್ನಾಟಕ ಸಾಹಿತ್ಯ ಸಮೀಕ್ಷೆ**; ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ; ಗುಲಬರ್ಗಾ.

೬. ಗುರುಲಿಂಗ ಕಾಪಸೆ; ೨೦೦೨; **ಮಕ್ಕಳ ಸಾಹಿತ್ಯ ಚಿಂತನೆ ಮತ್ತು ಸಿಸುಸಂಗಮೇಶರ ಸ್ಮರಣೆ**; ಕರ್ನಾಟಕ ಸಾಹಿತ್ಯ ಅಕಾಡೆಮಿ; ಬೆಂಗಳೂರು.

೭. ನಾಗರಾಜಶೆಟ್ಟಿ ಟಿ.ಎಸ್. ಸಂಪಾದಕ ಮತ್ತು ಲೇಖಕರು; ೨೦೦೮; **ಮಕ್ಕಳ ಸಾಹಿತ್ಯ ಅಂದು-ಇಂದು**; ನಿರ್ಮಲ ಪ್ರಕಾಶನ; ತಿಪಟೂರು.

೮. ನಾಗರಾಜಶೆಟ್ಟಿ ಟಿ.ಎಸ್.ಪ್ರೊ.; ೨೦೦೫; **ಮಕ್ಕಳ ಸಾಹಿತ್ಯ : ಕೆಲವು ಅಧ್ಯಯನಗಳು**; ನಿರ್ಮಲ ಪ್ರಕಾಶನ; ತಿಪಟೂರು.

೯. ನಿರುಪಮಾ ಡಾ.; ೨೦೦೪; **ಭಾರತೀಯ ಮಕ್ಕಳ ಸಾಹಿತ್ಯ ಸಮೀಕ್ಷೆ**; ಕರ್ನಾಟಕ ಸಾಹಿತ್ಯ ಅಕಾಡೆಮಿ; ಬೆಂಗಳೂರು.

೧೦. ಪಂಜೆ ಮಂಗೇಶರಾಯರು; ೨೦೦೬; **ಪಂಜೆ ಮಂಗೇಶರಾಯರ ಮಕ್ಕಳ ಸಾಹಿತ್ಯ**; ಕನ್ನಡ ಮತ್ತು ಸಂಸ್ಕೃತಿ ಇಲಾಖೆ; ಬೆಂಗಳೂರು.

೧೧. ಪೋತೆ ಎಚ್.ಟಿ. ಡಾ.(ಸಂ); ೨೦೧೧; **ಜನಪದ ಲೇಖನಗಳ ಸಂಗ್ರಹ**; ಪ್ರಸಾರಾಂಗ; ಗುಲಬರ್ಗಾ ವಿಶ್ವವಿದ್ಯಾಲಯ; ಗುಲಬರ್ಗಾ.

೧೨. ಬಸವರಾಜ ಡಬ್ಲ್ಯು; ೨೦೦೪; **ಶಿಶು ಸಾಹಿತ್ಯ ಪರಂಪರೆ ಮತ್ತು ಕುವೆಂಪು**; ಸಿವಿ.ಜಿ. ಪಬ್ಲಿಕೇಷನ್ಸ್; ಬೆಂಗಳೂರು.

೧೩. ಮಂಜುನಾಥ ಬೆಳವಾಡಿ ಡಾ.; ೨೦೧೦; **ಕನ್ನಡದಲ್ಲಿ ಮಕ್ಕಳ ಸಾಹಿತ್ಯ**; ಪ್ರಸಾರಾಂಗ; ಕನ್ನಡ ವಿಶ್ವವಿದ್ಯಾಲಯ; ಹಂಪಿ.

೧೪. ರಾಜೇಂದ್ರ ಎಸ್. ಗಡಾದ ಡಾ.; ೨೦೦೯; **ಮಕ್ಕಳ ಸಾಹಿತ್ಯ ಹಾಗೂ ಸಿಸು ಸಂಗಮೇಶ ಪ್ರಕಾಶನ**; ಗದಗ.

೧೫. ವರದಾ ಶ್ರೀನಿವಾಸ; ೨೦೦೪; **ಪಂಜೆ ಮಂಗೇಶರಾಯರು ಬದುಕು - ಬರಹ**; ಕರ್ನಾಟಕ ಸಾಹಿತ್ಯ ಪರಿಷತ್ತು; ಬೆಂಗಳೂರು.

೧೬. ಶ್ರೀನಿವಾಸರಾವ್ ಎಸ್.ವಿ.; ೧೯೮೯; **ಕನ್ನಡ ಸಾಹಿತಿ ದರ್ಶನ**; ಸೌರಭ ಪ್ರಕಾಶನ; ಬೆಂಗಳೂರು.

೧೭. ಸಂತೋಷಕುಮಾರ ಗುಲ್ವಾಡಿ(ಸಂ); ೧೯೯೦; **ದಕ್ಷಿಣ ಕನ್ನಡ ಜಿಲ್ಲೆಯ ಬಾಲ ಸಾಹಿತ್ಯದ ಮೊದಲಿಗರು**; ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು; ಉಜಿರೆ ಮತ್ತು ಗುಲ್ವಾಡಿ ವೆಂಕಟರಾವ್ ಸ್ಮಾರಕ ಕೇಂದ್ರ; ಮಣಿಪಾಲ.

೧೮. ಸಿಸು ಸಂಗಮೇಶ; ೧೯೯೬; **ಮಕ್ಕಳ ಸಾಹಿತ್ಯ ನಾನು ಕಂಡಂತೆ**; ಭಾರತೀ ಸಾಹಿತ್ಯ ಭಂಡಾರ; ವಿಜಾಪುರ.

**೩. ಪ್ರಬಂಧಗಳು**

೧. ಗುರುರಾಜ ಜಿ. ಮೇಡಿದಾರ; ೨೦೧೧; **ಕಂಚ್ಯಾಣಿಯವರ ಶಿಶು ಕಾವ್ಯ**: ಪ್ರಕಟಿತ ಎಂ.ಫಿಲ್. ಸಂಪ್ರಬಂಧ; ಸಂಕ್ರಾಂತಿ ಪ್ರಕಾಶನ; ವಿಜಾಪುರ.

೨. ಭಾರತಿದೇವಿ ಎಂ.; ೧೯೯೪; **ದಕ್ಷಿಣ ಕನ್ನಡದ ಶಿಶುಗೀತೆಗಳು**: ಎಂ.ಫಿಲ್. ಸಂಪ್ರಬಂಧ; ಮಂಗಳೂರು ವಿಶ್ವವಿದ್ಯಾನಿಲಯ; ಮಂಗಳಗಂಗೋತ್ರಿ, ಮಂಗಳೂರು.

೩. ರಾಜೇಂದ್ರ ಎಸ್. ಗಡಾದ; ೨೦೦೯; **ಮಕ್ಕಳ ಸಾಹಿತ್ಯ ಹಾಗೂ ಸಿಸು ಸಂಗಮೇಶ**: ಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಸಂಗಮ ಪ್ರಕಾಶನ; ಗದಗ.

**೪. ಪತ್ರಿಕೆಗಳು**

೧. ಕ್ರೈಂ ಸ್ಟೋರಿ ಪಾಕ್ಷಿಕ ಪತ್ರಿಕೆ;(ಉಗಾಂಡಾದ ಭಯಾನ ಮಕ್ಕಳ ಸೈನ್ಯದ ಕುರಿತು); ದಿನಾಂಕ ೫.೭.೨೦೧೨.

೨. ಪ್ರಜಾವಾಣಿ; ಸಾಪ್ತಾಹಿಕ ಪುರವಣಿ;(ಮಕ್ಕಳ ಮಾಂತ್ರಿಕ ಜಗತ್ತೂ, ದೊಡ್ಡವರ ಹಸ್ತಕ್ಷೇಪವೂ...); ದಿನಾಂಕ ೭.೧೦.೨೦೧೨.

೩. ಪ್ರಜಾವಾಣಿ; ಸಾಪ್ತಾಹಿಕ ಪುರವಣಿ;(ಮಕ್ಕಳ ವಿಶೇಷ ಸಂಚಿಕೆ); ದಿನಾಂಕ ೧೦.೧೧.೨೦೧೩.

೪. ಬಾಲ ಸಾಹಿತ್ಯ; ತ್ರೈಮಾಸಿಕ ಸುದ್ದಿ ಸಂಗ್ರಹ ಸಂಚಿಕೆ-೬;(ಕನ್ನಡದ ಮಕ್ಕಳ ಸಾಹಿತ್ಯಾಸಕ್ತ ಸ್ನೇಹಿಗಳಿಗಾಗಿ ದೇಶವಿದೇಶಗಳ ಆಯ್ದ ಸುದ್ದಿ ಸಂಗ್ರಹ); ದಿನಾಂಕ ಏಪ್ರಿಲ್-ಜೂನ್ ೨೦೧೨.

೫. ವಿಜಯ ಕರ್ನಾಟಕ; ಲವಲVK;(ನನ್ನ ಅಣ್ಣ ಮಮ್ಮಾ ಕುಂಞಿ!); ದಿನಾಂಕ ೨೫.೮.೨೦೧೦.

೬. ವಿಜಯ ಕರ್ನಾಟಕೆ; ಸಾಪ್ತಾಹಿಕ ಪುರವಣಿ; (ಮಕ್ಕಳ ಸಾಹಿತ್ಯ ಸೃಷ್ಟಿಗೆ ಹಿಂದೇಟೇಕೆ?); ದಿನಾಂಕ ೧೩.೧೧.೨೦೧೧.

೭. ಸಂಯುಕ್ತ ಕರ್ನಾಟಕ; ಸಾಪ್ತಾಹಿಕ;(ಮಕ್ಕಳ ಸಾಹಿತ್ಯ ಸೊರಗಿದೆ); ದಿನಾಂಕ ೬.೨.೨೦೧೧.

೮. ಸುಧಾ ವಾರಪತ್ರಿಕೆ;(ಪಳಕಳ ಸೀತಾರಾಮಭಟ್ಟರ ಕುರಿತ ವಿವರ ಮತ್ತು ಪದ್ಯಗಳು); ದಿನಾಂಕ ೧೩.೯.೨೦೧೨.

೯. ಹೊಸತು ಮಾಸಿಕ ಪತ್ರಿಕೆ;(ಮಕ್ಕಳ ಸಾಹಿತ್ಯದ ಕುರಿತು); ದಿನಾಂಕ ಏಪ್ರಿಲ್ ೨೦೦೧.

•••

